# ಹೊಸ ಪೋಷಕರ ಉಪಕಾರ ಸ್ಮರಣೆ

೧೧೧ ರೂ. ಶ್ರೀ ಶ್ರೀ ಪರಮಹಂಸಾದಿ ಅನೇಕ ಬಿರುದಾಂಕಿತ **ಶ್ರೀ ಶ್ರೀ ಲಕ್ಷ್ಮೀಶತೀರ್ಥ ಶ್ರೀಪಾದಂಗಳವರು** ಕುಂಬಾಸಿರ ವ್ಯಾಸರಾಜ ಮಠಾಧೀಶರು, ಹಿಂದಿನಂತೆ ಈಗ ಪುನಃ ಉಳಿದ [illegible] ಸಹಾಯಮಾಡಿ ಪೋಷಕರಾಗಿ ಮಂಡಲದಕಾರ್ಯ ಸುರಳಿತವಾಗಿ ನಡೆಯಲೆಂದು ಆಶೀರ್ವದಿಸಿ ಫಲಮಂತ್ರಾಕ್ಷತೆ ಕೊಟ್ಟವರಲ್ಲಿ ದೀರ್ಘದಂಡವತ್ತು ಅನೇಕ ವಿಜ್ಞಾಪನೆಗಳನ್ನರ್ಪಿಸುತ್ತೇವೆ.

೧೦೧ ರೂ. **ಶ್ರೀಮಾನ್, ಭೀಮರಾಯರು ದೇಸಾಯಿ ಗುಮ್ಮಗೇರಿ** ವಕೀಲ ಕುಷ್ಟಗಿಯವರು ಈಗ ಉಳಿದ ೭೫ ರೂ. ಸಹಾಯಮಾಡಿ ಪೋಷಕರಾಗಿ ಮಂಡಲವನ್ನು ಉತ್ತೇಜನಗೈದವರಲ್ಲಿ ನಮನಗಳು.

೧೦೧ ರೂ. **ಶ್ರೀಮಾನ್, ಕೃಷ್ಣಪ್ಪನಾಯಕರು ಹರಪನಹಳ್ಳಿ** ಮುಳಗುಂದ ಈ ಮಹನಿಯರು ಮೊದಲಿಗೆ ೭೫ ರೂ. ಸಹಾಯಮಾಡಿ ಈಗ ಉಳಿದ ೨೬ ರೂ. ಶ್ರೀಮಾನ್ ಶ್ರೀನಿವಾಸರಾಯರು ನವಲಗುಂದ ಇವರದ್ವಾರಾ ಸಲ್ಲಿಸಿ ಮಂಡಲಕ್ಕೆ ಚಿರಪೋಷಕರಾಗಿರುತ್ತಾರೆ ಉಭಯರ ಉಪಕಾರ ಸ್ಮರಿಸಿ ಅಭಿನಂದನೆಗಳನ್ನರ್ಪಿಸುತ್ತೇವೆ.

೨೫ ರೂ. ಮೊದಲಿಗೆ ನಮ್ಮ ಮಂಡಲದ ಪೋಷಕರಾಗಿ, ಈಗ ಪುನಃ ಮಂಡಲ ಹರಿದಾಸ ಸಾಹಿತ್ಯಮಾಲೆಗೆ ೨೫ ರೂ. ಸಹಾಯ ಮಾಡಿದ **ಶ್ರೀಮಾನ್, ಗೋಸಲರಾವ ಕುಲಕರ್ಣಿ** ಯರದಿಹಾಳ ವಕೀಲ ಚಿಂಚೋಳಿ ಇವರ ಹೆಚ್ಚಿನ ಉಪಕಾರವು.

**ಶ್ರೀಮಾನ್, ರಾಘವೇಂದ್ರರಾಯರು ದೇಸಾಯಿ** ಬೆದವಟ್ಟಿ ತಾ. ಯಲಬುರ್ಗಿ ಇವರು ಮಂಡಲದ ಈ ಮಹತ್ಕಾರ್ಯವನ್ನರಿತು ಪೋಷಕರಾಗುವೆವೆಂದು ಶ್ರೀ ಮಂತ್ರಾಲಯ ಪ್ರಭುಗಳ ಸನ್ನಿಧಿ ಮಂಡಲಾಧ್ಯಕ್ಷರನ್ನು ಸಂಚಾಲಕರನ್ನು ಉತ್ತೇಜನಗೈಸಿದವರ ಉಪಕಾರ ಸ್ಮರಿಸಿ, ಪೂರೈಸೆ ಶ್ರೀ ಗುರುರಾಜರನ್ನು ಪ್ರಾರ್ಥಿಸುತ್ತೇವೆ.

ಇದರಂತೆಯೇ ಸರ್ವ ಜನರು ಸಹಾಯಮಾಡಿ ಮುಂದಿನ ಮಹತ್ಕಾರ್ಯವನ್ನು ನೆರವೇರಿಸಬೇಕಾಗಿ ಪ್ರಾರ್ಥನೆ.

— ಸಂಚಾಲಕ

|| ಶ್ರೀ ಶ್ರೀ ||

|| ಶ್ರೀ ಲಕ್ಷ್ಮೀ ವೆಂಕಟೇಶಾತ್ಮಕ ಶ್ರೀ ಲಕ್ಷ್ಮೀನರಸಿಂಹ ಪ್ರಸನ್ನ ||

|| ಶ್ರೀ ಗುರುರಾಜೋ ವಿಜಯತೇ ||

## ಶ್ರೀ ವಿಜಯ ದಾಸಾರ್ಯಾದಿಗಳ

# ಉಪಾಸನಾಭಾಗ

### ಸುಳಾದಿಗಳು ೫೪ ಪದಗಳು ೨೧

ಮತ್ತು

ಶ್ರೀ ವಾಮನಪುರಾಣೋಕ್ತ ಮಾನಸೀಕ ಸ್ನಾನಸ್ತೋತ್ರ ೨. ಪಂಚರಾತ್ರಾಗಮೋಕ್ತ ಭಗವಧ್ಯಾನ ೩. ಶ್ರೀ ವ್ಯಾಸರಾಜ ಅನುಭವಕೃತ ಮಾನಸೀಕಧ್ಯಾನ

೪. ಶ್ರೀ ರಾಘವೇಂದ್ರತೀರ್ಥ ವಿರಚಿತ ಭಗವಧ್ಯಾನ

೫. ಶ್ರೀ ವ್ಯಾಸತತ್ವಜ್ಞ ವಿರಚಿತ ಕನ್ನಡಗದ್ಯ ಮಾನಸ ಸ್ಮೃತಿ





ಪ್ರಕಾಶಕ: ಶ್ರೀ ವರದೇಂದ್ರ ಸಾಹಿತ್ಯಮಂಡಲ
ಕೇಂದ್ರ ಲಿಂಗಸೂರ

ಪ್ರಕಟನೆ ೧೦ ಶಕೆ ೧೮೭೪ ಆಶ್ವಿನ ವದಿ ೭
ಶ್ರೀ ವಸುಧೇಂದ್ರ ಶ್ರೀಪಾದಂಗಳವರ ನೆನಹು.

ಬೆಲೆ : ೨—೮—೦

ಮುದ್ರಕರು: ಎಚ್. ಎಸ್. ಹೊಂಬಾಳಿ, ಹೊಂಬಾಳಿ ಪ್ರಿಂಟರ್ಸ್ ಗದಗ

# ಹೊಸ ಪೋಷಕರ ಮಹದುಪಕಾರ

೫೦ ರೂ. ಶ್ರೀಪರಮಹಂಸೇತ್ಯಾದಿ ಬಿರುದಾಂಕಿತ ಉಡುಪಿ **ಶ್ರೀ. ಪೇಜಾವರ** ಮಠದ **ಶ್ರೀ. ವಿಶ್ವೇಶತೀರ್ಥ ಶ್ರೀಪಾದಂಗಳವರು** "ನಮ್ಮ ಮಂಡಲದ ಮಹತ್ಕಾರ್ಯಕ್ಕೆ ಪರಮ ಸಂತುಷ್ಟರಾಗಿ ಎಲ್ಲ ಗ್ರಂಥಗಳನ್ನು ಸ್ವೀಕರಿಸಿ ಚನ್ನಾಗಿ ಅವಲೋಕಿಸಿ, ಪೋಷಕರಾಗಿ ೧೦೦ರೂ. ದಲ್ಲಿ ಈಗ ೫೦ ರೂ. ಫಲಮಂತ್ರಾಕ್ಷತೆಯನಿತ್ತು ಮುಂದಿನಕಾರ್ಯ ಸಾಂಗವಾಗಿ ಜರುಗಲು ಆಶೀರ್ವದಿಸಿಧವರಲ್ಲಿ ಅನಂತ ದೀರ್ಘದಂಡವತು ಪ್ರಣಾಮಗಳನ್ನರ್ಪಿಸಿ ಮಹದುಪಕಾರ ಸ್ಮರಿಸುತ್ತೇವೆ.

೫೧ ರೂ. ಶ್ರೀಮಾನ್, **ಪಂಡಿತ ಕೋಲಾರ ರಾಮರಾಯರು** ಬಿ. ಎ ಬಿ. ಎಲ್. ಅಡ್ವಕೆಟ್ ಬಳ್ಳಾರಿ, ತರುಣರು ಲೌಕಿಕ ಧುರಂಧರರೂ ವಿದ್ಯಾವಿನಯಸಂಪನ್ನರೂ ಪರಮ ಉದಾರಿಗಳೂ, ಹರಿಭಕ್ತರೂ, ಹಿಂದೆ ನಮ್ಮ ಮಂಡಲಕ್ಕೆ ೨೫ ರೂ. ಸಹಾಯ ಮಾಡಿರುವರಲ್ಲದೆ ಈಗ ಪುನಃ ೧೦೦ ರೂ. ಕೊಡುವ ವಚನವಿತ್ತು ೫೦ ರೂ. ಕೊಟ್ಟು ಸಹಾಯಮಾಡಿರುವರಲ್ಲದೆ, ಪ್ರಚಾರಕಾರ್ಯದಲ್ಲ ಸ್ವತಃ ಶ್ರಮ ತೆಗೆದುಕೊಂಡು ನಮ್ಮ ಮಾಲೆಗೆ ೧೫ ಜನ ಚಂದಾದಾರರನ್ನೂ, ಮತ್ತು ಕೆಳಗಂಡ ಮಹನೀಯರನ್ನು ಪೋಷಕರನ್ನಾಗಿ ಮಾಡಿ ನಾನಾವಿಧ ಸಹಾಯವಿತ್ತವರ ಚಿರಋಣಿಯಾಗಿ ಮಹದುಪಕಾರ ಸ್ಮರಿಸುತ್ತದೆ.

೨೫ ರೂ. **ಶ್ರೀ ಕೆ. ಶ್ರೀನಿವಾಸಾಚಾರ್ಯ** ಪ್ರೊಪ್ರೈಟರ್ ಮೀನಾಕ್ಷಿ ಭವನ ಬಳ್ಳಾರಿ, ಶ್ರೀ ಉಡುಪಿ ಪೇಜಾವರ ಮಠದ ಶಿಷ್ಯರೂ ಹರಿಭಕ್ತರೂ ತಾವು ಸಂತೋಷದಿಂದ ನಮ್ಮ ಮಂಡಲಕ್ಕೆ ಪೋಷಕರಾಗಿ ೧೦೦ ರೂ. ಕೊಡುವ ವಚನವಿತ್ತು ಸದ್ಯ ೨೫ ರೂ ಕೊಟ್ಟಿರುವ ಮಹದುಪಕಾರ ಸ್ಮರಿಸುತ್ತದೆ.

೨೫ ರೂ **ಶ್ರೀ. ಗೋಪಾಲಕೃಷ್ಣಾರ್ಯ** ಉಡುಪಿ ಪ್ರೊಪ್ರೈಟರ್ ಆರೋಗ್ಯ ಭವನ ಬಳ್ಳಾರಿ ಇವರು ಈ ಮಹತ್ಕಾರ್ಯದಲ್ಲಿ ೨೫ ರೂಪಾಯಿ ಸಹಾಯವಿತ್ತಿರುವರು. ಮತ್ತು ಈ ಮಹತ್ಕಾರ್ಯದಲ್ಲಿ ಎಲ್ಲ ರೀತಿಯಿಂದಲೂ ನೆರವಾದ, ದಾಸವರ್ಯರ ಅಂತರಂಗಭಕ್ತರಾದ **ಶ್ರೀ. ಮೋಕಾ ಸುಬ್ಬಣಾಚಾರ್ಯ ಪಾಪ್ಯುಲರ್‌ಗಿರಿ ಸ್ಟೋರ** ಬಳ್ಳಾರಿ ಇವರ ಮಹದುಪಕಾರವನ್ನು ಮರೆಯುವಂತಿಲ್ಲ.

**— ಸಂಚಾಲಕಮಂಡಲ**

॥ ಶ್ರೀ ಗುರುರಾಜೋ ವಿಜಯತೇ ॥

# ಧ್ಯಾನೋಪಾಸನೆ ಕುರಿತು

ಭಗವತ್ ಸಾಧಕನು ಭಗವಂತನ ಸೃಷ್ಟಿ ಅರಿತು, ತಾರತಮ್ಯ ಪಂಚ ಭೇದವನ್ನು ಚನ್ನಾಗಿ ತಿಳಿದು, ತೀರ್ಥ ಕ್ಷೇತ್ರಾದಿಗಳಲ್ಲಿ ಮಿಂದು ಕ್ಷೇತ್ರ ಮೂರ್ತಿಗಳ ಸಂದರುಶನಮಾಡುತ್ತ, ಬಾಹ್ಯಮಲವನ್ನು ಕಳೆದು, ಸಜ್ಜನ ಸಮಾಗಮವೆಂಬ ಸಾಧನದಿಂದ ನಾನಾವಿಧವಾದ ಜ್ಞಾನಸಂಪಾದಿಸಿ ಮನೋ ನಿರ್ಮಲವಾಗಲು ಸಾಧನೆಗೈದು, ಗುರುಗಳ ಕರುಣದಿಂದ ಧ್ಯಾನೋಪಾಸನೆ ಮಾಡುತ್ತ ಆತ್ಮಸಾಕ್ಷಾತ್ಕಾರ ರೂಪ ಅಪರೋಕ್ಷ ಹೊಂದಿ, ಆ ಕರುಣಾಳು ವಾದ ಬಿಂಬನ ಸಾಕ್ಷಾತ್ ಪ್ರಸಾದದಿಂದ ಮೋಕ್ಷ ಹೊಂದುವದು. ಆದರೆ ಇದು ಸಾಧಿಸುವದು ದುರ್ಲಭ.

## ಹೀನಾಶ್ರಯ ಕಾಮಕ್ರೋಧಾದಿ ವರ್ಜನ

ಏಕಂದರೆ " ತಮೋಗುಣವೆಂಬ ಹೀನಾಶ್ರಯದಿಂದ ಕಾಮವೆಂಬು ವಂಥ ಗಹನ ಅರಣ್ಯದಿ ಬಿಟ್ಟು, ಆ ಮಹಾ ಕ್ರೋಧವೆಂಬ ವ್ಯಾಘ್ರ ಬಾಧಿಸು ತಿರಲು, ವ್ಯಾಮೋಹವೆಂಬುವಂಥ ಮರಹ ಬೆನ್ನಟ್ಟಿ, ನೇಮದಿಂದ ಲೋಭ ಸರ್ಪ ನುಂಗುತಲಿದೆ. ಆ ಮದವೆಂಬುವಂಥ ಅಷ್ಟಗಜಂಗಳು, ವ್ಯೋಮವ ಲಂಘಿಸಿದರೂ ಬಿಡದೆ ಬೆನ್ನಟ್ಟಿರಲಾಗಿ, ಕುಮಾತ್ಸರ್ಯದ ಕಂಟಕಗಳು ನಟ್ಟು ಭೀಮರೂಪವಾದ ಮಾಯಾಂಧಕಾರದೊಳಗೆ ಈ ಮನವೆಂಬುವ ವೃಶ್ಚಿಕ ಸ್ಪರಿಶದಿ, ದಾಮರೂಪವಾದ ಅಜ್ಞಾನಪಾಶದಿ, ಸಮಸ್ತ ಕರಚರಣಾದಿ ದೇಹವಕಟ್ಟಿ, ಸ್ತೋಮ ವೈರಿಗಳೆಲ್ಲ ಬಾಧ ಬಡಿಸುತ್ತಿರಲು, ಈ ಮಹಾಪ್ರತಿಬಂಧ ತೊಲಗಿಪರಾರೋ? ಪ್ರೇಮದಿ ನೀನೆ ಎಂದು ಎಷ್ಟು ಕೂಗಿದರು ಸಾಮಜರಕ್ಷಕ ಸುಮ್ಮನಿರುವದು, ಭೂಮಂಡಲದಲ್ಲಿ ಧರ್ಮ ಪದ್ಧತಿ ಏನೋ? ತಾಮರಸನಯ್ಯಾ ಗುರು ವಿಜಯವಿಠಲರೇಯ ಧಾಮ ಸೇರಿಪ ಭಾರ ನಿನ್ನದಯ್ಯಾ. "

ಹೀಗೆ ಮೊದಲಕಲ್ಲ ದಾಸಾರ್ಯರು ಅಪ್ಪಣೆಕೊಡಿಸಿದಂತೆ ತನ್ನ ಆಧ್ಯಾತ್ಮ ಕಾಮಾದಿ ಅರಿಷಡ್ವರ್ಗಗಳನ್ನು ಮೊದಲು ಗೆಲ್ಲಬೇಕು. ಮತ್ತು

ದುಷ್ಟಜನರ ಸಂಗದಿಂದ ತಮೋಗುಣವರ್ಧಿಷ್ಣುದುಷ್ಟ ವಿಷಯವಾಸನಾಬಿಡದ ನಾವು ಅಪರೋಕ್ಷಿಗಳು ಅಪರೋಕ್ಷವನ್ನು ಕೊಡುವೆವೆಂದು ಅನೇಕ ಬಗೆ ಯಿಂದ ದ್ರವ್ಯಾದಿಗಳನ್ನು ಹರಣಮಾಡುವರು. ಕೆಲವರು ಮೇಲೆ ದಾಸ ಆಭಾಸ ಆಚಾರ್ಯರ ವೇಷವನ್ನು ಹಾಕಿ ಆಶೆಯನ್ನು ನೀಗದೇ ಸ್ತ್ರೀಯಾದಿ ಗಳ ಗುಂಪು ಸೇರಿಸಿಕೊಂಡು ತನು-ಮನ-ಧನ ಎನಗೊಪ್ಪಿಸಿರೆಂಬೋ ಗುರು ಬೋಧನೆಯನ್ನು ಉಪದೇಶಿಸುತ್ತ ಮೋಸಮಾಡುವರು ಹಲಬರು. ಇನ್ನು ಜಿಂಹಾ ಚಾಪಲ್ಯವಿಷಯಕ್ಕೆ ಒಳ್ಳೇ ಉತ್ತಮವಾದ ಸಜ್ಜಿಗೆ ತುಪ್ಪ ಸಕ್ಕರಿ ಕೂಡಿದ ಪ್ರಸಾದ ಭಕ್ಷಣನೆವದಿಂದ ಅನೇಕ ಕಾಮುಕ ವೃತಾಚರಣೆಯ ಡಂಭಾಚಾರಯುತರಾಗಿ ಜ್ಞಾನಶೂನ್ಯರಾದಾಗ್ಯೂ ಜ್ಞಾನಿಗಳಂತೆ ನಟನೆ ಮಾಡುವ ದುಷ್ಟ ಸಹವಾಸದಿಂದ ತಮೋ ಪ್ರವರ್ತಕವಾದ ಕೆಟ್ಟಮಾರ್ಗವೇ! ಇಂಥ ತಮೋಗುಣಾಶ್ರಯದಿಂದ, ದುಷ್ಟ ಕಾಮಾದಿಗಳು ಉತ್ಪನ್ನವಾಗು ವವು. ಇದೇ ಮಹಾ ಅರಣ್ಯ, ಕಾಮದಿಂದ ಕ್ರೋಧ, ಯಾವ ಶಿಷ್ಯನು ಹಣ ಇತರ ಬಯಕೆ ಪೂರೈಸದಿದ್ದರೆ ಅವನ ಮೇಲೆ ವ್ಯಾಘ್ರದಂತೆ ಕೋಪ ಇಂಥ ಕ್ರೋಧದಿಂದ ಗ್ರಸನವಾಗುವದು. ಮತ್ತು ಸಂಸಾರದಲ್ಲಿ ದಾರಾ ಪುತ್ರಾದಿಗಳಿಂದ ಸುಖವಿಲ್ಲ. ಹೇಯವೆಂದು ತಿಳಿದರೂ, ತುಚ್ಛ ಕಶ್ಮಲವಾದ ಮಲದಲ್ಲಿ ಮನತೆಗೆಯದ ವರಾಹವೆಂಬ ವ್ಯಾಮೋಹವು ಬೆನ್ನುಹತ್ತಿರುವದು. ದಾರಾಪುತ್ರಾದಿ ಈಷಣತ್ರಯದಲ್ಲಿ ಮನಸ್ಸಿಡಬಾರದು. ಇನ್ನು ಸರ್ಪವು ದ್ರವ್ಯವನ್ನು ತಾನು ಉಪಯೋಗಿಸದೇ ಮತ್ತೊಬ್ಬರಿಗೆ ಕೊಡದೇ ಧನ ಸಂರ ಕ್ಷಿಸುವಂತೆ ಲುಬ್ಧನಾಗಲು ಆಲೋಭವೆಂಬ ಸರ್ಪವು ಅರಣ್ಯದಲ್ಲಿ ನುಂಗೇ ಬಿಡುತ್ತದೆ. ಇಂಥ ಲೋಭವನ್ನು ಬಿಡಬೇಕು. ಆ ಮಹಾ ಅಡವಿಯಲ್ಲಿಪ್ಪ ಗಜಗಳಂತೆ ಧನಾದಿ ಅಷ್ಟಮದಗಳು ಮದ್ದಾನೆಯಂತೆ ಬೆನ್ನು ಹತ್ತಿರುತ್ತವೆ. ಇಂಥ ದುಷ್ಟ ಮದಾದಿಗಳನ್ನು ಬಿಟ್ಟು, ಸಜ್ಜನರಲ್ಲಿ ವಿನೀತನಾಗುವದು. ಅರಣ್ಯದಲ್ಲಿ ವ್ಯಾಘ್ರ, ವರಾಹ, ಕಾಡಾನೆಗಳ ಭಯದಿಂದ ಗತಿತಪ್ಪಿ ಚರಿಸು ವಾಗ್ಗೆ ಕಾಲಿಗೆ ಮುಳ್ಳು ನಡುವ ಭಯ, ಮಧದಿಂದ ಮಾತ್ಸರ್ಯ, ಉತ್ತಮ ರಲ್ಲಿ ಹೊಟ್ಟೆಕಿಚ್ಚು, ಗರ್ವ ಅಹಂಕಾರವೆಂಬ ಕಂಟಕಮುಳ್ಳು ನಡುವದು, ಕಾರಣ ಮಾತ್ಸರ್ಯಾದಿಗಳನ್ನು ಬಿಡಬೇಕು. ಕಾಮ, ಲೋಭ, ಮದ ಮಾತ್ಸರ್ಯ ಗ್ರಸಿತವಾದ ವಿಹ್ವಲ ಮನಸ್ಸೆಂಬ ಚೇಳು ಕಡಿತದಿ ಅರಣ್ಯದಲ್ಲಿ

ಅಜ್ಞಾನವೆಂಬುವಂಥ ಪಾಶಬಂಧನೆಗೆ ಕಾರಣವಾಗಿ ಕೈಕಾಲು ಮುಸುಗೆ ಕಟ್ಟಿರಲು ಅರಣ್ಯದಲ್ಲಿ ಕೇಳುವರಾರು. ಸ್ವಾಮಿ ನೀನೇ ರಕ್ಷಿಸೆಂದು ಮೊರೆ ಇಡುವದು.

ಇದು ತಮೋಗುಣಾಶ್ರಯಕ್ಕೆ ಕಾರಣವಾದ ದಾಸವೇಷವನ್ನು ಹಾಕಿ ಮೋಸಗೈವರ ಪಾಶಕ್ಕೆ ಶಿಲುಕದೆ, ಕಾಮಕ್ರೋಧಾದಿಗಳನ್ನು ದೂರಟ್ಟಬೇಕು. ಮಾತ್ಸರ್ಯಾದಿಗಳನ್ನು ಬಿಡಬೇಕು.

" ಮತ್ಸರವನು ಅಳಿದು ವೆಂಕಟೇಶನ ಯಾತ್ರೆ । ಉತ್ಸಹದಲಿ ಮಾಡಿ ವಿಜಯವಿಠ್ಠಲ ಪ್ರೊಳೆವಾ " ಎಂಬ ವಿಜಯದಾಸರ ಉಕ್ತಿಯಂತೆ.

ಸಂಸಾರವೆಂಬ ಮಹಾ ಅಡವಿಯನ್ನು ಬಹು ಎಚ್ಚರಿಕೆಯಿಂದ ದಾಟಿ ಸಜ್ಜನ ಸಮಾಗಮವೆಂಬ ಉದ್ಯಾನವನ್ನು ಪ್ರವೇಶ ಮಾಡುವದು.

## ಸಜ್ಜನ ಸಮಾಗಮ

ವೈಶಾಖಮಾಸ ಬೇಸಿಗೆಯ ಬಿಸಿಲು, ಮಹಾರಣ್ಯದಲ್ಲಿ ಸಿಗಬಿದ್ದು, ಹುಲಿ, ಕಾಡಹಂದಿ, ಕಾಡಾನೆ, ಸರ್ಪ, ಚೇಳು ದಂಶ, ಕಾಲಿನಲ್ಲಿ ಮುಳ್ಳು ನಟ್ಟು ದುಃಖದಿಂದ ಬಳಲಿ, ಆ ಕಾಡಿನಲ್ಲಿ ಒಂದು ಉದ್ಯಾನವನ ದೊರೆಯೆ ಎಷ್ಟು ಆನಂದ! ಅಲ್ಲಿ ಗಗನ ಚುಂಬಿತವಾದ ಫಲಯುಕ್ತ ಅನೇಕ ವೃಕ್ಷ, ಮನೋಹರವಾದ ಕಾಸಾರ, ಮಲ್ಲಿಕಾ, ಜಾಜಿ, ಕುಸುಮಾದಿಗಳ ಪರಿಮಳ ಗಂಧ ಮೆಲ್ಲನೆಬೀಸುವ ತಂಗಾಳಿ, ಕುಸುಮಗಳ ರಸವನ್ನು ಸವಿದು ಝೇಂಕರಿಸುವ ಷಟ್ಪದಗಳು ಫಲರಸವನ್ನೀಂಟಿದ ಶುಕ, ಪಿಕ, ಹಂಸ, ಕೋಕಿಲಾದಿಗಳ ಮಂಜುಳ ಕುಕಿಲರವದಿಂದ ಮನೋನೈರ್ಮಲ್ಯವಾಗುತ್ತ, ಅರಣ್ಯದಿಂದ ಬೇಸತ್ತು ಬಂದು ಸಜ್ಜನ ಸಮಾಗಮವೆಂಬ, ಉದ್ಯಾನವನ ಕಾಸಾರದಲ್ಲಿ ಸ್ನಾನಪಾನ, ಫಲಗಳ ಭಕ್ಷಣ ಅಪರೋಕ್ಷಜ್ಞಾನಿಗಳಾದ ಭಗವದ್ಭಕ್ತರ ಶುಕ, ಪಿಕ, ಹಂಸ, ಕೋಕಿಲ ವಾಣಿಯಂತಿರುವ ಮಂಜುಳರವವಾದ ದಾಸರ ವಾಕ್ಯಗಳೆಂಬ ಅಮೃತಪಾನದಿಂದ, ತೃಪ್ತನಾಗಿ, ಅದರಲ್ಲಿ ಶ್ರೀ ವಿಜಯದಾಸರೆಂಬ ಕೋಕಿಲದ ಉಚ್ಚ ಮಂಜುಳ ಕೂಗು ಕಿವಿಗೆಬೀಳುತ್ತ ಆ ಕೋಕಿಲಾರವವನ್ನು ಪುನಃಪುನಃ ಕೇಳುತ್ತ ಮನನಮಾಡಿ ಸವಿಯುವ ಸಾಧಕನಿಗೆ

ಈ ಧ್ಯಾನೋಪಾಸನೆಯು ಕೋಕಿಲೆ ಮಂಜುಳ ಸುಸ್ವರವು ಶ್ರವಣ ಮನನ ಧ್ಯಾನಕ್ಕೆ ಉಚಿತವು.

## ಸದ್‌ಗುರು ಅನುಗ್ರಹ

" ಗುರುವಿನೊಲುಮೆಯಾಗದ ತನಕ ದೊರೆಯದಣ್ಣ ಮುಕುತಿ " ಬ್ರಹ್ಮವಿದ್ಯಾಕ್ಕೆ ಎಂಥ ಗುರು ಬೇಕೆಂಬುದನ್ನು ದಾಸರ ಸುಳಾದಿ ೩೯–೪೦ ರಲ್ಲಿ ಬಹುಚನ್ನಾಗಿ ವಿವರಿಸಿರುವಂತೆ ಸದ್ಗುರುವಿನ ಮೊರೆಹೊಕ್ಕು ಸೇವಾ ಮಾಡಿದರೆ ಸದ್ಬುದ್ಧಿ ಹುಟ್ಟುತ್ತದೆ ಎಂಬ ವಾಯುಪುರಾಣ ವಚನಾನುಸಾರ ಹರಿಭಕ್ತರೂ ವಿಷಯದಲ್ಲಿ ವಿರಕ್ತರಾದ ಗುರುಗಳು ಮುಖ್ಯವಾಗಿ ಬೇಕು. ಗುರುವಿಲ್ಲದೆ ವಿದ್ಯಾ ಪುಸ್ತಕಗಳ ಮೇಲಿಂದ ತಿಳಿಯುವನೆಂಬುವದು, ಬಟ್ಟೆನಿಂದ ಮಕ್ಕಳ ಪುಟ್ಟಿಸುವನೆಂಬ ಯತ್ನದಂತೆಯೆ. ಮತ್ತು ನೀರಿನಲ್ಲಿ ಬೆರಳೆದ್ದಿ ಚೀಪಿದಂತೆ ನಿರ್ಥಕ.

## ಧ್ಯಾನ ಸಾಧನದ ಬಗೆ ಅದರ ಕ್ರಮ

ಏನೂ ಅರಿಯದೆ ಧ್ಯಾನಮಾಡುವೆನೆಂದು ಕಣ್ಣುಮುಚ್ಚಿ ಕುಳಿತರೆ ಬಕ ಧ್ಯಾನ. ಶ್ರೀ ವಿಜಯದಾಸರು ಪದ (೫) ಪುಟ ೧೮೬ ರಲ್ಲಿ " ಅರ್ಚನೆ ಬಗೆ ಕೇಳಿ ಲೋಕ ಕಣ್ಣುಮುಚ್ಚಿ ಕುಳಿತರೆ ಕೊಡ ಹರಿ ಮುಕ್ತಲೋಕ " ವೆಂದು ಚನ್ನಾಗಿ ಹೇಳಿರುವರು. ಗುರುಪ್ರಸಾದ ಮೊದಲಿಗೆ ಬೇಕು. ನಂತರ ವಿಷಯಾದಿಗಳಿಂದ ದೂರನಾಗಿ ಕುಕರ್ಮಾಚರಣೆ ಸರ್ವಥಾ ಬಿಡಬೇಕು. ವಿಹಿತಾಚರಣೆಯಿಂದ ಶ್ರವಣ ಮನನ ನಿಜ ಧ್ಯಾನರೂಪ ಸಕಲ ಶಾಸ್ತ್ರ ವಿಮರ್ಶಪೂರ್ವಕ, ಶ್ರುತಿ, ಸ್ಮೃತಿ ವಾಕ್ಯಗಳಲ್ಲಿಪ್ಪ ವಿರೋಧ ವಾಕ್ಯಗಳನ್ನು ಪರಿಹರಿಸಿ ಹರಿಯೇ ಪರನೆಂಬ ನಿಶ್ಚಯಜ್ಞಾನ ಸಂಪಾದನೆ ಬೇಕು. ಒಂದಲ್ಲ ಎರಡಲ್ಲ ಅನೇಕ ಜನ್ಮಗಳಲ್ಲಿ ಈ ಬಗೆ ಸಾಧನೆಗೈಯುತ್ತ ಗುರುಗಳಾದ ವಾಯುದೇವರು ಕೈಪಿಡಿದು ಸಾಧನ ಮಾಡಿಸಲು ಪ್ರಾರಂಭಿಸಿದರೆ, ಪುನಃ ಸಾವಿರದಾ ಹದಿಮೂರು ಜನುಮ, ನಿರಂಶಗಳಿಗೆ. ಸಾಂಶರಾದ ದೇವಗಂಧರ್ವರಿಂದ ಶತಸ್ಥರವರೆಗೆ ಹತ್ತು ಸಾವಿರದಾ ನಾಲ್ಕುನೂರು ಜನುಮಗಳಲ್ಲಿ ಸಾಧನನಂತರ ಬಿಂಬಾಪರೋಕ್ಷವೆಂದು ಶ್ರೀ ಪೂಜ್ಯ ಜಗನ್ನಾಥದಾಸಾರ್ಯರು

ಶ್ರೀ ಹರಿಕಥಾಮೃತ ಸಾರ ಕಲ್ಪಸಾಧನಸಂಧಿ. ಪದ್ಯ ೫ ರಿಂದ ೯ ರ ವರೆಗೆ ಸವಿಸ್ತರ ಅಪ್ಪಣೆ ಕೊಡಿಸಿರುವರು. ಹೀಗೆ ಸಾಧನಕಾಲ ಮರ್ಯಾದೆ. ಇದನ್ನೆಲ್ಲ ಬಿಟ್ಟು ಕಣ್ಣುಮುಚ್ಚಿ ಸ್ತ್ರೀಯರ ಕೂದಲು, ವೈಬಂಣಗಳನ್ನು ಅರಿಗಣ್ಣಿನಿಂದ ನೋಡುತ್ತ ವಿಷಯಾದಿಗಳಲ್ಲಿ ಬಿದ್ದರೆ ಹೇಳುವದೇನು ? ಅವರಿಗೆಂಥ ಅಪರೋಕ್ಷ, ಕಪಾಳ ಮೋಕ್ಷ! "ಗೇಣು ಮುಂದಕೆ, ಸಾಗೆ ನೂರ್ಗಾವುದ ಹಿಂಧಾಕುತಿದೆ ಏನು ಹೇಳಲಿ ಎನ್ನ ಕರ್ಮ" ಎಂಬ ಬಾದರಾಯಣ ವಿಠಲರ ವಚನ. ವಿಷಯದಿಂದ ದೂರನಾದ ಹರಿಯನ್ನು ವಿಷಯ ತ್ಯಜಿಸಿ ಭಜಿಸಲು ವಶನಾಗುವನು. ಕಾಮಾದಿ ವಿಷಯಗಳಲ್ಲಿ ಮುಳುಗಿದವನಿಗೆ ಅಪರೋಕ್ಷ, ವಿಷಯುವೇ ವಿಷಸಮಾನ.

## ಈ ಗ್ರಂಥಸಂಕಲನ ಕ್ರಮ

ಶ್ರೀ ವಿಜಯದಾಸರು ಸಾಧಕರಾದ ಭಕ್ತರ ಮೇಲೆ ಪರಮಾನುಗ್ರಹ ಮಾಡಿರುವರು. ಉಪಾಸನೆಗೆ ಅನುಕೂಲವಾದ ಕೆಲ ಸುಳಾದಿಗಳನ್ನು, ತಾರತಮ್ಯ ಸುಳಾದಿಯಲ್ಲಿ ಕೆಲ ಸುಳಾದಿಗಳನ್ನು ಸೃಷ್ಟಿಪ್ರಕರಣ ಸುಳಾದಿಯಲ್ಲಿ ಮೊದಲಿಗೆ ಕೊಟ್ಟಿದೆ. ಈ ಉಪಾಸನಾಭಾಗ ಸುಳಾದಿಯಲ್ಲಿ ಶ್ರೀ ವಿಜಯದಾಸರ ಸುಳಾದಿ (೪೫) ಶ್ರೀ ಗೋಪಾಲದಾಸರವು (೭) ಸುಳಾದಿ, ರಾಮಚಂದ್ರ ವಿಠ್ಠಲರದು (೧) ಶ್ರೀ ಪ್ರಾಣೇಶ ವಿಠ್ಠಲರದು (೧) ಹೀಗೆ ೫೪ ಸುಳಾದಿಗಳನ್ನು ೨೧ ಪದಗಳನ್ನು ಮತ್ತು ಈ ಸುಳಾದಿಗಳಿಗೆ ಮೂಲಾಧಾರವಾದ, ಪ್ರಮಾಣಗಳು.

೧. ವಾಮನ ಪುರಾಣೋಕ್ತ ಮಾನಸಾಧ್ಯಾನ ಸ್ನಾನ.

೨. ಪಾಂಚರಾತ್ರಾಗಮೋಕ್ತ ಭಗವಧ್ಯಾನ.

೩. ಶ್ರೀ ವ್ಯಾಸರಾಜ ಅನುಭವಕೃತ ಮಾನಸಿಕಧ್ಯಾನ.

೪. ಶ್ರೀ ರಾಘವೇಂದ್ರ ತೀರ್ಥಕೃತ ಭಗವಧ್ಯಾನ.

೫. ಶ್ರೀ ವ್ಯಾಸತತ್ವಜ್ಞರು ಸ್ವತಃ ಪ್ರಮಾಣಪೂರ್ವಕವಾಗಿ ಸಂಸ್ಕೃತದಂತೆ ಬರೆಸಿದ ಕನ್ನಡಗದ್ಯರೂಪವಾದ ಮಾನಸಸ್ಮೃತಿ ಈ ಹಳೇ ಪ್ರತಿ ಬಾಲಬೋಧ ಲಿಪಿಯಲ್ಲಿ ೨೫ ಪುಟ ೫೦ ಪತ್ರದಲ್ಲಿ ಬಹು ಪೂರ್ವದಲ್ಲೇ ಬರ

ದದ್ದು ಸೋಮಪುರ ದಾಸರಲ್ಲಿ ದೊರೆತದೆ. ಶ್ರೀ ಶ್ರೀವ್ಯಾಸತತ್ವಜ್ಞ ಸ್ವಾಮಿಗಳವರೇ ಸಂಸ್ಕೃತಮಾನಸ ಸ್ಮೃತಿಯಂತೆ ಕನ್ನಡದಲ್ಲಿ ಶಿಷ್ಯರಿಗೋಸ್ಕರ ಬರೆಸಿದ್ದೆಂದು ತೋರುತ್ತದೆ. ಶುದ್ಧಪ್ರತಿ ಇದೆ. ಈ ಪಂಚರತ್ನಗಳನ್ನು ಸಹ ಇದರಲ್ಲಿ ಕೊಟ್ಟಿದೆ. ಈ ಗ್ರಂಥಗಳು ಲಭಿಸಿದ್ದು ಪುಣ್ಯವೇಸರಿ.

ಮೊದಲಿಗೆ ಕನ್ನಡ ಗದ್ಯರೂಪಾತ್ಮಕ ಶ್ರೀ ವ್ಯಾಸರಾಜಕೃತ ಧ್ಯಾನಾನುಭವ, ಶ್ರೀ ವ್ಯಾಸತತ್ವಜ್ಞಕೃತ, ಮಾನಸಸ್ಮೃತಿ ಚನ್ನಾಗಿ ಅವಲೋಕಿಸಿ ಗುರುಗಳಿಂದ ತಿಳಿದು ನಂತರ ಸುಳಾದಿಗಳನ್ನು ನೋಡಿದರೆ ಸರಿಯಾಗಿ ಅರ್ಥವಾಗುವದು. ಅನೇಕ ವಿಭಾಗಗೈಸಿದೆ.

ಮೊದಲಿಗೆ ಧ್ಯಾನವೆ ಮುಖ್ಯವೆಂಬ (೪) ಸುಳಾದಿಗಳನ್ನು ಅರಿಯಬೇಕು. ನಂತರ "ಸಾಮಾನ್ಯಧ್ಯಾನವಿದು" ಎಂಬ ಸುಳಾದಿ (೯) ರಲ್ಲಿ ವಿವರಿಸುವಂತೆ, ಸಾಧಕನು ವಿಷಯಾದಿಗಳಿಂದ ದೂರನಾಗಿ, ಕಾಮಕ್ರೋಧಾದಿಗಳನ್ನು ಅಳಿದು, ನಿಯಮವಾದ ಅಲ್ಪವಾದ ಸಮೀಚೀನ ಭೋಜನ, ನಿಯಮವಾದ ನಿದ್ರಾ, ಸ್ವಾಮಿಭೃತ್ಯಭಾವ ಸಂತತನೆಸಗುತ್ತ ಉಪಾಸನೆ ಕ್ರಮ, ಆ ಮೆಟ್ಟಿಲುಗಳು ಗುರುದ್ವಾರಾ ಅರಿತು ಉಪಾಸನೆ ಮಾಡುವದು. ಶ್ರೀ ಗೋಪಾಲದಾಸರಪದ ೧೬ ಪುಟ ೨೦೧, ಧ್ಯಾನಮಾಡು ಮನವೆ ಬಿಂಬ ಮೂರುತಿಯ ಎಂಬ ಪದದಲ್ಲಿ ಉಪಾಸನೆ ಕ್ರಮವನ್ನು ಮನದಟ್ಟವಾಗುವಂತೆ ಹೇಳಿರುವರು. ಹೀಗೆ ಕ್ರಮವರಿತು ಆಚರಿಸಿದರೆ ಉಪಾಸನಾ ಮಾಡಲು ಅಧಿಕಾರಿಯಾಗುವನು.

ಉಪಾಸನೆ ಎಂದರೆ ಸ್ವಾಮಿ ಎದುರಿಗೆ ಇರುವದು ಸೇವಾ (ಸರವ್ಹೀಸ), ವರಶಿಪ್ (Worship) ಪೂಜಾ, ಎಡವರೇಶನ್ (Adoration) ಧ್ಯಾನ, ಡಿವೋಷನ್ (Devotion) ಧ್ಯಾನದಲ್ಲಿ ಮಗ್ನನಾಗುವದು. ಪ್ರ್ಯಾಕ್ಟಿಸ್ ಇನ್ ಅರ್ಚರಿ (Archery) ಹೀಗೆ ಅನೇಕ ಅರ್ಥ, ಅಭಿಪ್ರಾಯೊಂದ ಇರುವದು. ಭಗವಂತನನ್ನು ಸಮೀಪವಮಾಡಿಕೊಳ್ಳಲು ಏಕಾಗ್ರಚಿತ್ತತೆಯಿಂದ, ವಿಷಯಾದಿಗಳಿಂದ ದೂರನಾಗಿ, ಏಕಾಂತದಲ್ಲಿ ಆಸನದಲ್ಲಿ ಕುಳಿತು ಧ್ಯಾನ ಮಾಡುವದು.

## ಧ್ಯಾನೋಪಾಸನೆ ಸಾಂಗಕ್ರಮ

ಗುರುಗಳಿಗೆರಗಿ, ಸ್ಥೂಲದೇಹ ಅಂಗ ಉಪಾಂಗ ಸಪ್ತಧಾತುಗಳಲ್ಲಿಪ್ಪ ಕಾರ್ಯರೂಪಗಳನ್ನು ಸ್ಮರಿಸಿ, ಅರಿಷಡ್ವರ್ಗಗಳನ್ನು ಗೆಲ್ಲಲು, ಆ ಭಗವಂತನ ರೂಪಧ್ಯಾನ, ಗಾಯತ್ರಿಪ್ರತಿಪಾದ್ಯನಧ್ಯಾನ, ಸದ್ಬುದ್ಧಿಕೊಡಲು ಪ್ರಾಣಾಗ್ನಿಹೋತ್ರದಿಂದ ರಸವಿಭಾಗಮಾಡುವ ಪಂಚಪ್ರಾಣಾಂತರ್ಯಾಮಿ ಅನಿರುದ್ಧಾದಿ ೫ ಮೂರ್ತಿಗಳಧ್ಯಾನ. ನಂತರ ವಿಷಯಾದಿಗಳಿಂದ ದೂರನಾಗಿ ಮನೋನಿಗ್ರಹಕ್ಕೆ ದೇಹಾಖ್ಯರಥದಲ್ಲಿ ಸಾರಥಿಯಾಗಿಪ್ಪ ಮನೋಭಿಮಾನಿ ಸಾರಥಿಯಾದ ಮಹರುದ್ರದೇವರಧ್ಯಾನ, ನೇತ್ರಶ್ರೋತ್ರ ವಿಷಯಾದಿ ಹಯಾಕಾರವಾದ ಇಂದ್ರಿಯಗಳಿಗೆ ನಿಯಮನಮಾಡುವ ಸೂರ್ಯ-ಚಂದ್ರ ತದ್ವ್ಯಾಪಾರ ಅನುಗ್ರಹ, ಇವರಿಗೆಲ್ಲ ಕಡಿವಾಣರೂಪದಿಂದ ನಿಯಮನಮಾಡುವ ಬುದ್ಧ್ಯಭಿಮಾನಿ ಉಮಾ, ತತ್ಪತಿ ಮನೋರೂಪವಾದ ಮಹರುದ್ರಾಂತರ್ಯಾಮಿ ಪ್ರಾಣಪತಿರೂಪ ಹೀಗೆ ಧ್ಯಾನಮಾಡುತ್ತ, ದೇಹದಲ್ಲಿರುತಿಪ್ಪ ಬ್ರಹ್ಮನಾಡಿ ಪಂಚಪ್ರಭೇದವಾಗಿರುವ ವಿವರ ಅಲ್ಲಿಪ್ಪ ೩೨ ಕಮಲಗಳ ವಿಚಾರ. ನಂತರ ಇಡಾಪಿಂಗಳಾಂಶದಿಂದ ೭೨೦೦೦ ಸಾವಿರ ನಾಡಿಕ್ರಮ. ಅಲ್ಲಿಪ್ಪ ಹರಿಮೂರ್ತಿಧ್ಯಾನ. ಪಿತೃಯಾನ, ದೇವಯಾನ, ಬ್ರಹ್ಮಯಾನ ಮಾರ್ಗಕ್ರಮಪೂರ್ವಕ, ಗರುಡಶೇಷಮಾರ್ಗ, ದೇಹದಲ್ಲಿಪ್ಪ ದೇವತೆಗಳ ಲಯಕ್ರಮದಿಂದ ಹೃದಯದಲ್ಲಿಪ್ಪ ಬಿಂಬನಲ್ಲಿ ಐಕ್ಯಚಿಂತನೆ.

ನಂತರ, ಹೃತ್ಪದ್ಮಲ್ಲಿಪ್ಪ ಶತಸ್ತಂಭ ಮಂಟಪ, ಆ ಮಂಟಪಕ್ಕೆ ಶ್ರೀ ಭೂದುರ್ಗಾಭಾಗದಲ್ಲಿ ಚತುರ್ದಿಕ್ಕಿನಲ್ಲಿಪ್ಪ ೧೨ ಊರ್ಧ್ವದ್ವಾರ (೧) ರಲ್ಲಿಪ್ಪ ದ್ವಾರಪಾಲಾದಿಗಳಧ್ಯಾನ, ಹೃತ್ಕಮಲ ಕರ್ಣಿಕೋಪರಿ ಸೂರ್ಯ–ಚಂದ್ರ ಅಗ್ನಿಮಂಡಲ ತದುಪರಿ ಸ್ಥೂಲ ಬಿಂಬನಾದ ಅಗ್ರೇಶ, ಪ್ರಾದೇಶ ಮೂಲೇಶರ ಧ್ಯಾನಾದಿ, ಮೂಲೇಶ ಪಾದಾಶ್ರಯ ಮುಖ್ಯ ಪ್ರಾಣನ ಪಾದಾಶ್ರಯನಾಗಿ ಅನಿರುದ್ಧ ಲಿಂಗದೇಹ ಸಹಿತನಾಗಿಪ್ಪ ಸೂಕ್ಷ್ಮನಾದ ಜೀವನಿರುವಿಕೆ, ಜೀವನಲ್ಲಿಪ್ಪ ಹರಿರೂಪಗಳ, ಜೀವನಸ್ವರೂಪ ಸೂಕ್ಷ್ಮ ಶ್ವೇತಹೃತ್ಪದ್ಮದಲ್ಲಿಪ್ಪ ಬಿಂಬನ ಲಕ್ಷಣ, ಜೀವನು ಪ್ರತಿಬಿಂಬನು ಹೇಗೆಂಬ ಭಾವವನ್ನು ಬಹು ವಿಸ್ತಾರವಾಗಿ ಶ್ರೀವಿಜಯಗೋಪಾಲದಾಸರು ವರ್ಣಿಸುವಂತೆ, ಶ್ರೀಪ್ರಾಣೇಶ

ದಾಸರು "ಹೃದಯಮಂದಿರ ವಿವರ"ವೆಂಬ ಪದ (೨೧) ಪುಟ ೨[illegible] ರಲ್ಲಿ ಮತ್ತು ಸುಳಾದಿಯಲ್ಲಿ ಬಿಂಬರೂಪನ ವರ್ಣನೆ ಸಂಕ್ಷಿಪ್ತವಾಗಿ ಮನದಟ್ಟಾಗುವಂತೆ ವರ್ಣಿಸಿರುವರು ಇಂಥ ಜೀವಾಂತರ್ಯಾಮಿ ಜೀವನ ಶ್ವೇತ ಹೃತ್ಪದ್ಮ ವಿಶಿಷ್ಟನಾದ ಬಿಂಬನೇ ಕಾರಣ ತದನಂತರದಲ್ಲಿ ಲಿಂಗ ಅನಿರುದ್ಧದಲ್ಲಿ ಕಾರ್ಯಮಾಡುವ ರೂಪಗಳನ್ನು, ಇದರಂತೆ ಸ್ಥೂಲ ಹೃದಯಾರತ್ನಾಂಬುಜ ಅಷ್ಟಪತ್ರದಲ್ಲಿ ಅಂಶಾಂಶದಿಂದ ಧೇನಿಸುವ ಕ್ರಮ. ಬಿಂಬ ಪ್ರತಿಬಿಂಬಭಾವ ಅನೇಕ ಸುಳಾದಿ ಪದಗಳಲ್ಲಿ ಅಪರೋಕ್ಷ ಜ್ಞಾನಿಗಳು ವರ್ಣಿಸಿರುವರು. ಇದನ್ನರಿಯುವುದು ಆ ಬಿಂಬನ ನೋಡಲು ಸಾಧನ, ಹೃತ್ಪದ್ಮ ಅಂತಃಸಂಕುಚಿತ ಪತ್ರವಾಗಿಪ್ಪ ಅಧೋಮುಖವಾಗಿದ್ದುದನ್ನು ಮಿಹಿರಾ ಎಂಬುವ ಜ್ಞಾನಾರ್ಕದಿಂದ ಎತ್ತಿ ಅರಳಿಸುವ ಕ್ರಮ, ಪ್ರಾಣಾಯಾಮ ಪ್ರತ್ಯಾಹಾರಾದಿಗಳಿಂದ ಗುರುಗಳ ಕರುಣವಾದರೆ ಆಗಬೇಕು.

ಈ ತರುವಾಯ ವಿಮಾನಾವಳಿ ಸಂಕುಲದಿಂದ, ಆರೋಹಣ ಕ್ರಮದಿಂದ ತನ್ನ ಬಿಂಬನೇ ದೇಹದಲ್ಲಿಪ್ಪ ದೇವತೆಗಳ ಅಂಶಾಂಶದಲ್ಲಿರುವನೇ, ಸಮಸ್ತ ಪಂಚಭೂತಾತ್ಮಕ ಸ್ಥಳ, ವನ, ನದಿ, ಗಿರಿ, ಗಂಹ್ವರ, ಸಪ್ತದ್ವೀಪ, ಸಪ್ತಸಮುದ್ರ, ಶ್ವೇತದ್ವೀಪ, ಅನಂತಾಸನಾದಿಯಲ್ಲಿಪ್ಪ ಹರಿಮೂರ್ತಿಗಳಲ್ಲಿ ಐಕ್ಯಚಿಂತನ, ನಂತರ ಅಧಃಪಾತಾಳಾದಿ ಗರ್ಭೋದಕ, ವಾಯು, ವಿಷ್ಣು, ಕೂರ್ಮ, ಮಾಂಡೂಕ ರೂಪಗಳಲ್ಲಿ ಐಕ್ಯ ಚಿಂತಿಸುತ್ತ, ಪುನಃ ಶ್ವೇತದ್ವೀಪಗತ ಹರಿಮೂರ್ತಿಧ್ಯಾನ, ಅಂತರಿಕ್ಷಸ್ಥ, ಮೇಘಮಂಡಲಾರಂಭಿಸಿ, ಸೂರ್ಯಚಂದ್ರಾದಿ, ಧ್ರುವಮಂಡಲ ಪರಿಯಂತ ನಿಯಾಮಕ ಮಾಡುವ ಕಾಲರೂಪಗಳ ಐಕ್ಯ ಚಿಂತಿಸಿ ಮೇಲಿನ ಸ್ವರ್ಗಾದಿ ಊರ್ಧ್ವ ಮಹ ಜನೋ ತಪೋ ಸತ್ಯಲೋಕಗಳ ಕ್ರಮ, ಅಲ್ಲಿಪ್ಪ ಹರಿಮೂರ್ತಿಗಳಲ್ಲಿ ಐಕ್ಯ ಚಿಂತನ, ನಂತರ ವೈಕುಂಠದಲ್ಲಿಪ್ಪ ನಾರಾಯಣ, ಖರ್ಪರ ಬಹಿರ್ಬ್ರಹ್ಮಾಂಡಾದಿ ನವಾವರಣದಲ್ಲಿಪ್ಪ, ಮೇಲೆ ವಾಸುದೇವಾದಿ ಆವರಣದಲ್ಲಿಪ್ಪ ಹರಿಮೂರ್ತಿಯೊಡನೆ ಐಕ್ಯ ಚಿಂತಿಸಿ, ಶ್ರೀ ಹರಿಯ ಮಹದ್ರೂಪಕ್ಕೆ ಷೋಡಶೋಪಚಾರ ಪೂಜಾ, ನಂತರ ಅವರೋಹಣ ಕ್ರಮದಿಂದ, ಕ್ರಮವಾಗಿ ಮೇಲೆ ಹೇಳಿದಂತೆ ಅದೇ ರೀತಿಯಿಂದ ಪುನಃ ಶ್ವೇತದ್ವೀಪ ಪರಿಯಂತರ

ವಾಗಿಯೂ ಆ ಆ ಅಂಶಗಳನ್ನು ತಂದು ನಿಲ್ಲಿಸಿ, ಪುನಃ ಹದಿನಾರು ಪೂಜಾದಿಗಳಿಂದ, ವಾಯು ಸೂರ್ಯಾದಿಮಂಡಲ, ಸಪ್ತದ್ವೀಪ, ಸಪ್ತಸಮುದ್ರ, ಭಾರತವರ್ಷಕ್ಕೆ ಬಂದು ಸಕಲ ಕ್ಷೇತ್ರಸ್ಥ ಮೂರ್ತಿಗಳ ಚಿಂತಿಸುತ್ತ ಶ್ರೀ ವೆಂಕಟೇಶನೇ ಮದ್ಬಿಂಬನೆಂಬ ಭಾವನೆಯಿಂದ, ಸ್ವಗುರು ಮೂರ್ತಿಯಲ್ಲಿ ತಂದು ನಿಲ್ಲಿಸಿ ಆ ಸ್ವಗುರುಗತನಾದ ಅಂಶವನ್ನು ತನ್ನ ಸ್ಥೂಲಕಳೇವರದಲ್ಲಿಪ್ಪ ದೇವತೆಗಳಲ್ಲಿಪ್ಪ ಹರಿಯ ರೂಪಕ್ಕೆ ಐಕ್ಯ ಚಿಂತಿಸುತ್ತಾ ಹೃತ್ಪದ್ಮಕರ್ಣಿಕೆಯಲ್ಲಿಪ್ಪ ಸ್ಥೂಲಬಿಂಬನ ಪೂಜಾ, ಇದು ಮೊದಲನೇ ಮೆಟ್ಟಲು. ನಂತರ ಅಧಿಕಾರ ವಿವಿಕ್ಷಾ ಚಿತ್ರವಿಚಿತ್ರ ಉಪಾಸನೆ ಸುಳಾದಿಗಳಲ್ಲಿ ವರ್ಣಿಸಿರುವಂತೆ ಗುರುಗಳಿಂದ ಅರಿಯಬೇಕು. ಶ್ರೀ ವ್ಯಾಸರಾಜರು ತ್ರಿಬಗೆಯಾಗಿ ಬಹುಚನ್ನಾಗಿ ಅವಸ್ಥಾಭೇದದಿಂದ ವರ್ಣಿಸಿ ಆಜ್ಞಾಪಿಸಿರುವರು. ಗುರುಕೀಲಿಯಿಂದ ಅಂತರಂಗದ ಕದವು ತೆಗೆಯಬೇಕು. ಗುರುಗಳೇ ಮುಖ್ಯಗತಿ. ಅಲ್ಲಿಂದ ಇವನ ಸಾಧನ ಸಂಪತ್ತು ಉಕ್ತಜನುಮಗಳಲ್ಲಿ ಆಯಿತೆಂದರೆ, ನಿಯತವಾದ ನೀತ ಗುರುಗಳ ಉಪದೇಶದಿಂದ ಜೀವಾಂತರ್ಯಾಮಿ ಬಿಂಬಾಪರೋಕ್ಷ. ಇದೇ ಉಪಾಸನೆ ಕ್ರಮ ಸಂಕ್ಷಿಪ್ತವಾಗಿ ಶ್ರೀ ದಾಸರು ತಿಳಿಸಿದಷ್ಟು ಮಂದಮತಿಯಿಂದ ಬರೆಸಿದ್ದು ಬರೆದುದು ಸಜ್ಜನರಿಗೆ ಸಾಧನಕ್ಕೆ ಅನುಕೂಲ.

" ಶ್ವೇತದ್ವೀಪಗತೋಽಹ್ಯಾತ್ಮಾ ಹೃತ್ಪದ್ಮೇಷು ವ್ಯವಸ್ಥಿತಃ | ತಯೋರೈಕ್ಯಂ ವಿಜಾನೀಯಾ ಜೀವಹೃತ್ಪದ್ಮಗಸ್ಯ ಚ ||೧|| ಶರೀರ ಸರ್ವನಾಡೀಷು ನಿವಿಷ್ಟಾನಾಂಚ ವೈಹರೇಃ ಬ್ರಹ್ಮಾಂಡಂತರ್ಬಹಿಸ್ಥಾನಾಂ ರೂಪಾಣಾಂ ಮಪಿ ಸರ್ವಶಃ | ಆತ್ಮಹೃತ್ಪಗೇ ನೈಕ್ಯಂ ಚಿಂತನಂ ಪರಮಾರ್ಚನಂ ||೨|| ಎಂದು ಮಾನಸಸ್ಮೃತಿಯು, ಇದೇ ಉಪಾಸನಾಕ್ರಮ ಮುಖ್ಯಧ್ಯೇಯ. ಶ್ರೀ ವಿಜಯದಾಸರೆಂಬ ಕೋಕಿಲೆಯ ಕುಕಿಲ ಮಂಜುಳ ಸುಸ್ವರ ಆಲಿಸಿ ಕೇಳಿ, ರಸ ಸವಿದು ಆನಂದಪಡುವರೆಂದು ಪ್ರಾರ್ಥನೆ.

ಇಂಥ ಉಪಾಸನಾ ಭಾಗ ಸುಳಾದಿಗಳನ್ನು ಅಚ್ಚುಮಾಡಲು ಬಲವತರವಾಗಿ ಪ್ರೇರಿಸಿದ ಕೆಲ ಮಿತ್ರರಲ್ಲಿ ಅಭಿನಂದನೆ. ಪ್ರೆಸ್‌ಕಾಪಿಯನ್ನು ಶುದ್ಧವಾಗಿ ಬರೆದುಕೊಟ್ಟ ಹಿರಿಯರಾದ ಶ್ರೀ ಶೇಷಗಿರಿರಾಯರು ಬಾಗಲಕೋಟ

ಮುಕ್ಕಾಂ ರಾಯಚೂರ ಇವರಲ್ಲಿ ಅನೇಕ ಪ್ರಣಾಮಗಳನ್ನು ಅರ್ಪಿಸುತ್ತ ಅರ್ಧಭಾಗದ್ರವ್ಯವನ್ನು ಅಚ್ಚಿನ ಸಹಾಯಕ್ಕೆ ಕೊಟ್ಟ ಪೋಷಕರಲ್ಲಿಯೂ ಚಿರ ಋಣಿಯಾಗಿದ್ದೇನೆ. ಅಚ್ಚಿನಾಲಯಮಾಲಕರ ಉಪಕಾರವನ್ನೂ ಸ್ಮರಿಸುತ್ತೇನೆ.

ಸುಳಾದಿಗಳು ಅಚ್ಚಾದರೂ ನನ್ನ ದೇಹಾಲಸ್ಯದಿಂದ ವೇಳೆಗೆ ಸರಿಯಾಗಿ ಪ್ರಕಟವಾಗಲಿಲ್ಲ ಕ್ಷಮಿಸುವದಾಗಿ ವಿನಂತಿ.

ಹರಿದಾಸರದಾಸ

**ಹನುಮಂತರಾವ ವೆಂಕಟರಾವ ಗೊರಾಬಾಳ**

ತಾ. ೨೨-೧೦-೫೧ ಸಾಹಿತ್ಯಸೇವಾಲಂಕಾರ



# — ಪರಿವಿಡಿ —

## ಶ್ರೀ ವಿಜಯವಿಠ್ಠಲರ ಸುಳಾದಿಗಳು



## ೬ ಪ್ರಮೇಯಯುಕ್ತ ಚಿತ್ರವಿಚಿತ್ರ ಉಪಾಸನಾ



## ೭ ಬಿಂಬ ಪ್ರತಿಬಿಂಬ ಭಾವಲಕ್ಷಣ

## ೮ ಧ್ಯಾನೋಪಾಸನಕ್ಕೆ ಅನುಕೂಲವಾದ ಕೆಲ ಸುಳಾದಿ
## ಧ್ಯಾನೋಪಾಸನಕ್ಕೆ ಮುಖ್ಯ ಗುರುಗಳು ಬೇಕು



## ೯ ಮುಖ್ಯ ಗುರುದ್ವಾರಾ ಸಕಲಶಾಸ್ತ್ರ ವೇದೋಪಷತ್ ಜ್ಞಾನ



## ೧೦ ಧ್ಯಾನ ವಿ|| ಶ್ರೀ ಗೋಪಾಲವಿಠ್ಠಲರ ಸುಳಾದಿಗಳು



## ೧೧ ರಾಮಚಂದ್ರವಿಠ್ಠಲರು
## (ವೇಣುಗೋಪಾಲದಾಸರ ಶಿಷ್ಯರು)



## ೧೨ ಪ್ರಾಣೇಶವಿಠ್ಠಲರ ಸುಳಾದಿ

## ೧೩ ಧ್ಯಾನೋಪಾಸನೆ ವಿವರಣೆ ಹಲವು ಪದಗಳು ಪುರಂದರವಿಠ್ಠಲ



## ಶ್ರೀ ವಿಜಯವಿಠ್ಠಲರ ಪದಗಳು



## ಗೋಪಾಲವಿಠ್ಠಲರ ಪದಗಳು

## ಪ್ರಾಣೇಶ ವಿಠಲರು



## ೧೪ ಉಪಾಸನಾಕ್ಕೆ ಆಧಾರ ಕೆಲವು ಗ್ರಂಥಗಳು





## ತಿದ್ದುಪಡಿ

ವಿಜಯ ದಾಸರ ಗುಟ್ಟಿನ ವಿವರ, ಸಾಧನಭಾಗ ಸು. (೨) ರಲ್ಲಿ
ಒಟ್ಟಿಗೆ ಪುಟಗಳು (೨೮೯)

ಹರಿಃ ಓಂ

॥ ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನಃ ॥

— ಶ್ರೀ ಗುರುರಾಜೋ ವಿಜಯತೇ —



# — ಶ್ರೀ ವಿಜಯದಾಸರ —
# ಉಪಾಸನಾಭಾಗ ಸುಳಾದಿಗಳು



## ಸುಳಾದಿ ೧

ಧ್ಯಾನೋಪಾಸನ ಮುಖ್ಯವಾದುದು

**ರಾಗ ಶಂಕರಾಭರಣ ಝಂಪಿತಾಳ**

ಬಿಡು ಬಿಡು ದೇಹವದಂಡಿಸಿ ಮಾಡಿದ ಕರ್ಮ । ಕೊಡತಕ್ಕವಲ್ಲವವು ದೃಢವಾದ ಪದವಿಗಳು । ಕಡು ಸಾಹಸವು ಬಿಟ್ಟು ನೆಸಗಿದರೆ ಸ್ವರ್ಗಾದಿ । ಒಡನೆ ತಿರುಗಿಸಿ ಫಲಪುಡಿಯಾಗಿ ಪೋಗುವದು । ಮಿಡುಕುವದೆ ಸಿದ್ಧ ಶತಕಲ್ಪನಾಡಿದರನ್ನ । ನುಡಿಗೆಸಂಶಯ ಸಲ್ಲಕೇಳಿ ಮರುಳಾಗದಿರಿ । ಷಡಿ ಇಲ್ಲದಾ ದಾರಿ ತೋರುವರು ಹಿರಿಯರು । ದೃಢನಾಮ ವಿಜಯ ವಿಠ್ಠಲನ ಶ್ರವಣ ಮನನ । ಅಡಿಗಡಿಗೆ ಲಾಲಿಸಿ ಪಡೆಯೊಂದು ಧ್ಯಾನಾ ॥೧॥

## ಮಟ್ಟತಾಳ

ಧ್ಯಾನಾದೊಳಗೆ ಸ್ನಾನವಡಕಾ । ಧ್ಯಾನಾದೊಳಗೆ ಮೌನ ಅಡಕಾ । ಧ್ಯಾನಾದೊಳಗೆ ದಾನವಡಕಾ । ಧ್ಯಾನಾದೊಳಗೆ ಮಾನವಡಕಾ । ಧ್ಯಾನಾದಿಂದ ಜ್ಞಾನ ಉಂಟು । ಧ್ಯಾನಾದೊಳಗೆ ಜಗವಡಕಾ । ಧ್ಯಾನಾದೊಳಗೆ ದೇವರಡಕಾ । ಧ್ಯಾನಾದೊಳಗೆ ಸರ್ವಾ ಅಡಕ । ಧ್ಯಾನಾವನ್ನು ಘಳಿಸಿಕೊಂಡು । ಧನ್ಯವಿಜಯ ವಿಠಲನ್ನ । ಧ್ಯಾನವನ್ನುಮಾಡು ನೀ । ದಾನದಿಂದ ಭಕುತಿಯಲ್ಲಿ ಧ್ಯಾನವನ್ನು ಬಿಟ್ಟ ನರಗೆ । ಏನು ಇರಲಿ ಎಲ್ಲವಡಕ ॥

## ರೂಪಕತಾಳ

ಧ್ಯಾನರಹಿತನಾದ ಮನುಜ । ರೇನು ಕರ್ಮವ ಮಾಡಲೇನು । ಆನೇ ಕಪಿತ್ಥ ನುಂಗಿದಂತೆ । ಹೇನು ಬಿಡದೆ ವಾಸನಿಯು । ತಾನು ನಿರುತಾ ಶ್ರೈಸಿದಂತೆ । ಜಾಣನೊಬ್ಬ ಕಿನ್ನರಿ ಧರಿಸಿ । ಕೋಣನಲ್ಲಿ ಮೀಟಿದಂತೆ । ಗಾಣದೊಳಗೆ ಮಳಲು ತುಂಬಿ । ಭಾನು ಮುಣಿಗಿ ಸುತ್ತಿದಂತೆ ಕಾಣಿರೊ । ಧ್ಯಾನ ಜ್ಞಾನ ಸಂಗತಿಯಿಂದ । ವಾನರನ್ನ ಮುಷ್ಟಿಯಂತೆ । ದೀನನಾಗಿ ಒಂದು ನಿಮಿಷಾ । ಧ್ಯಾನವನ್ನು ಮಾಡಲು । ಶ್ರೀನಿವಾಸ ವಿಜಯ ವಿಠ್ಠಲ । ಆನಂದವಾಗಿ ಒಲಿವನು । ಧ್ಯಾನದಿಂದ ಗತಿಗೆ ಸೋ । ಪಾನವಾಗಲಿ ವಿರಚಿಸೂ ॥೩॥

## ಧ್ರುವತಾಳ

ಅನಂತ ಕಲ್ಯಾಣ ಗುಣಪರಿಪೂರ್ಣ ನಿತ್ಯನಿರ್ದೋಷಾ । ಜ್ಞಾನಾ-ನಂದಾತ್ಮಕ " ವಿಷ್ಣುಮೇರ್ಸ್ವಾಮಿ " ತ್ರಿಲೋಕಕರ್ತಾ । ನೀನೆ ಸ್ವಾತಂತ್ರ ಬೊಮ್ಮಾದಿಗಳು ನಿನ್ನ ದಾಸಾನುದಾಸರು । ಅನಂತ ಅನಂತ ಕಾಲದಲ್ಲಿ ನಿಜವೆಂದು ಪೇಳುತ್ತ । ಮಾನುಷೋತ್ತಮ ಹೀಗೆ ಬಲುಕಾಲ ವರ್ಜಿಸಲು । ಮನದೊಳಗ ವಿಜಯ ವಿಠ್ಠಲನು ಕೃಪೆಯಿಂದ ಧ್ಯಾನಕ್ಕೆ ಪೊಳೆವ ॥೪॥

## ತ್ರಿವಿಡಿತಾಳ

ಚತುರ ಗುಣದಲ್ಲಿ ಚತುರ ಸಾಸಿರ । ಚತುರ ನೂರು ವರುಷ ಧ್ಯಾನಂಗಳ । ಚತುರದಿಂದಲಿಮಾಳ್ಪ ಮತಿಗೆ ದೇವೋತ್ತಮ । ಚತುರ ವೇದ ವಿಜಯ ವಿಠ್ಠಲನು । ಚತುರನಾಗಿ ಬಿಂಬ ಮೂರುತಿ ಸುಳಿದು । ಚತುರತನದಲ್ಲಿ ಬಂದು ಚರಿಸುವನು ॥೫॥

**ಅಟ್ಟತಾಳ**

ಹೊನ್ನಹುಳುವಿನಂತೆ ಕಣ್ಣಿಗೆ ಸುಳುವನು । ತನ್ಮಯ ಗುಣನಿಧಿ ಶನ್ನಾಮಕ ದೇವ । ತನ್ನಿಚ್ಛೆ ಸ್ವಭಾವ ಮುನ್ನೆ ಧ್ಯಾನದಲ್ಲಿ । ಜನ್ನಿತ ಜ್ಞಾನಕ್ಕೆ ಮನ್ನಿಸುವನು ಇವನ । ಮುನ್ನಿನ ಮಾರ್ಗಕ್ಕೆ ಮಾನ್ಯ ವಿಜಯ ವಿಠ್ಠಲನ್ನದಯದಿಂದಾ । ಪನ್ನ ನೀವನೆಂದು ಚನ್ನಾಗಿವೊಲಿದು ॥೬॥

**ಆದಿತಾಳ**

ಆಗಮ ಸಂಚಿತ ಹರಿಸಿ । ಆಗುವ ಪ್ರಾರಬ್ಧಗಳ । ವೇಗಾನುಸಾರ ತೀರಿಸಿ । ತಾಗಿದ ದುಃಖ ಸ್ವರುಷಾ (ಶಾ) । ಪೋಗಲಾಡಿಸಿ ಅವರವರ । ಯೋಗ್ಯತಾವರಿದು ಸುಖವಪಾಲಿಸಿ । ಭಾಗವತರನಮಾಡಿ । ಶ್ರೀ ಗುರು ವಿಜಯ ವಿಠ್ಠಲ । ಮೂಗುತಿಯನೀವ ॥೭॥

**ಜತೆ**

ಧ್ಯಾನಾದಿಂದಲಿ ಮನಸು ನಿಲಿಸಿ ಜ್ಞಾನವ ಪಡೆದು । **ಆನಂದ** ವಿಜಯ ವಿಠ್ಠಲನ ಲೋಕವ ಸೇರೋ ॥೮॥

## ಸುಳಾದಿ ೨

**ಧ್ಯಾನೋಪಾಸೆ ಮುಖ್ಯ ಧ್ಯಾನದಿಂದ ಜ್ಞಾನಪುಟ್ಟುವುದು**
**ಸ್ಥೂಲ ಸೂಕ್ಷ್ಮ ಧ್ಯಾನ ವಿವರ**

**ರಾಗ ರೇಗುಪ್ತಿ ಧ್ರುವತಾಳ**

ಏನಾದರೇನು ನಿನ್ನ ಧ್ಯಾನವ ಬಿಡುವೆನೆ । ಏನಾದರಾಗಲಿ ಎನ-ಗಿಂದೀಗ । ಶ್ರೀನಿವಾಸನೆ ನಿನ್ನ ಧ್ಯಾನದಿಂದಲಿ ಕರೆದು । ಆನೀಗ ನಿರು-ತಾರ್ಚನೆ ಮಾಡುವೇ । ನಾನಾ ಕರ್ಮದ ಶ್ರೇಣಿಯಿಂದಲಿ ಸೋ । ಪಾನ ವಾಗುವಗತಿಗೆ ಅನಂತ ಜನುಮದಲ್ಲಿ । ಕಾಣೆನೊ ಧ್ಯಾನ ಸಮಾನವಾದ ಭಕುತಿ । ಈ ನಿರಂತರದಲ್ಲಿ ಜ್ಞಾನಶೂನ್ಯ । ನಾನಾಗಿ ತಿಳಿಯದೆ ನೀ-ನೆಂಬೋದು ಮರೆದು । ಧ್ಯಾನಹೀನನಾಗಿ ಮಾನಾವಳಿದೆ । **ಕ್ಷೋಣಿ ಧರನೆ** ನಮ್ಮ ವಿಜಯ ವಿಠ್ಠಲ ನಿನ್ನ । ಧ್ಯಾನವರಿದ ಮೇಲೆ ಮಾಣುವ ದೆಂತೊ ॥೧॥

**ಮಟ್ಟೆತಾಳ**

ಧ್ಯಾನವೆ ಗತಿಗೆ ಪ್ರಧಾನವೆ ಎನುತಲಿ । ಜ್ಞಾನಿಗಳು ತಿಳಿದು ಆನಂದ ವಾಗುತ್ತ । ಗಾನವಮಾಡುವರು ಆನಂದಗತಿಯಲ್ಲಿ । ಗೇಣವನೀ ಇಲ್ಲಾ ಈ ನುಡಿಯನು ಕೇಳಿ । ನಾನು ನೆಚ್ಚಿದೆ ನಿನ್ನ । **ಶ್ರೀನಿವಾಸ**ಮೂರ್ತಿ ವಿಜಯ ವಿಠ್ಠಲ ಎನಗೆ । ಧ್ಯಾನವೆಗತಿ ನಿಧಾನದಪದವಿಗೆ ॥೨॥

**ತ್ರಿವಿಡಿತಾಳ**

ಮನವೆ ನಿಲ್ಲದ ಧ್ಯಾನ ಗುಣವೆ ಇಲ್ಲದನಾರಿ । ಹಣವೆ ಇಲ್ಲದ ನೃಪತಿ ಕ್ಷಣವೆ ತಿಳಿಯದ ಜ್ಞಾನಿ । ಪ್ರಣವೆ ಇಲ್ಲದ ಮಂತ್ರಾ ಘನವೆ ಇಲ್ಲದ ದಾನಾ । ಪಣತಿ (ವೆ) ಇಲ್ಲದ ದೇಹ ಅನುವೆ ಇಲ್ಲದ ನಡತಿ । ಜನವೆ ಇಲ್ಲದ ಸಭಾ ಲಕ್ಷಣವಿಲ್ಲದ ಗುರು । ನೆನವೆ ಇಲ್ಲದ ಸಾಧನವೆ ಇಲ್ಲದ ಸಂಗತಿ । ದಿನವಸ್ತ್ರಮಾನಾ ನೂರು ಮನುಕಲ್ಪವಿರಲು ರಂ । ಜನ ವಾಗುವದೇ ನಾ ಜನ ಜನಕಾ । ತನು ಮನದಾಧೀನ ವಿಜಯ ವಿಠ್ಠಲ ಕೃಪಾ । ವನಧಿ ನಿನ್ನನು ಧ್ಯಾನವನುಗಾಳ್ಪ ಮನವೀಯೋ ॥೩॥

**ಅಟ್ಟತಾಳ**

ಪಾಪವೆಂಬೋ ರಾಶಿ ಅಪಾರವಾಗೆನ್ನ । ಕೋಪವ ಪುಟ್ಟಿಸಿ ತಾಪದ ಬಲದಿಂದ । ಲೇಪಿಸಿಕೊಂಡು ಪ್ರಳಾಪ ಬಡಿಸುತಿದೆ। ನಾ ಪೋಗುವದೆತ್ತ ಶ್ರೀಪತಿ ಲಾಲಿಸು । ಅಪಾರ ಕರ್ಮದಲೀ ಪೂಜೆಮಾಡಲು । ಶ್ರೀಪದವೀಗಳ ಪ್ರಾಪುತವಾಗೊವೆ । ಪ್ರಾಪುತ ಮಹನಾಮಾ ವಿಜಯವಿಠ್ಠಲ ನಿನ್ನ । ಆಪಾದ ಮೌಳಿಯನೂ ಪತಿಕರಿಸುವೆ ॥೪॥

**ಆದಿತಾಳ**

ಧ್ಯಾನವನ್ನು ಕೈಕೊಳ್ಳಲು ಜ್ಞಾನವನ್ನೆ ಪುಟ್ಟುವದು । ಹೀನ ಕರ್ಮವೆಂಬದುರಿತ ಕಾನನರಾಶಿಗೆ ಕೃ । ಶಾನನಾಗಿ ಪೋಗಗಳೆದು ಮಾನವಭಿಮಾನವೆನಿಸಿ । ಧ್ಯಾನ ಧ್ಯಾನ ಧ್ಯಾನವನ್ನು ದಿನ ದಿನಗಧಿಕ ವಾಗೆ । ಆನಂದಕ್ಕಾನಂದ ಏನೆಂದು ಪೇಳವೆನೊ । ಧ್ಯಾನವಿನಾ ಗತಿಗೆ ಸಾಧನವನ್ನು ಕಾಣೆನಯ್ಯಾ । ನೀನೆ ನೀನೆ ಎಂದು ಧ್ಯಾನದಲ್ಲಿ ನಂಬಿದೆನೊ ಧ್ಯಾನದೊಳಗೆ ಪೊಳೆವ ವಿಜಯ ವಿಠ್ಠಲರೇಯಾ । ದಾನಿ ದಯದಿಂದ ಉತ್ತುಮನಮಾಡು ಮನ್ನಿಸುತ್ತ ॥೫॥

### ಜತೆ

ಸ್ಥೂಲ ಸೂಕ್ಷ್ಮ ಧ್ಯಾನವ ಭೇದವೆನಿಸೋದು । ನೀಲವರ್ಣ ವಿಜಯ ವಿಠ್ಠಲ ಪ್ರಾಕೃತರಹಿತಾ ॥೬॥

## ಸುಳಾದಿ ೩

( ಉಪಾಸನಾ ) ಬಾಹಿರದಲ್ಲಿ ಪ್ರತಿಮಾರ್ಚನೆ ಅಮುಖ್ಯ
ಧ್ಯಾನವೆ ಮುಖ್ಯವೆಂದು ಬಿಂಬಪ್ರಾರ್ಥನೆ.

### ರಾಗ ತೋಡಿ ಧ್ರುವತಾಳ

ಮಂದಮತಿ ಮನಸು ಮಂಗನಂತೆಯಾಗಿ । ಸಂದೇಹ ಬಿಡದಲೆ ಸಂಶಯದಲ್ಲೀ । ಮುಂದೆ ಉಳ್ಳಾವಸ್ತು ಎಡಹಿ ಮುಂಗಾಣದಂತೆ । ಅಂಧಕ ನಾನಾದೆ ಅಕಟಕಟಾ । ಹಿಂದಣ ಸಂಚಿತವೊ ಮುಂದೆ ಯಾಗುವಾಗ-ಮವೊ । ಇಂದನುಭವಿಸುವ ಪ್ರಾರಬ್ಧವೊ । ಒಂದೆ ಒಂದೆ ದೈವಯಂದಾ ಬಿಂಬಮೂರುತಿ । ಇಂದು ಹೃದಯಾರವಿಂದದೊಳು । ಅಂದವಾಗಿರೆ ಮನ ಪೊಂದದಲೆ ಬರಿದೆ । ಸಂದರುಶನವಿಲ್ಲಾ ಇಲ್ಲಾವೆಂದೂ । ಕುಂದಿ ಬೆಂಡಾಗುವದು ಏನೆಂಬೆ ಎಲೊಜೀಯ । ಬಂದ ವ್ಯಾಕುಲ ಇನ್ನು ತೊಲಗದಲ್ಲಾ । ಪೊಂದಿದೆನು ಶಶಿಬಿಂದು ವಿಜಯವಿಠ್ಠಲ । ವಂದಿಸುವೆನು ನಿನ್ನ ದ್ವಂದ್ವಾಬ್ಜಪದಕೆ ॥೧॥

### ಮಟ್ಟತಾಳ

ಅಂತರಂಗದಲ್ಲಿ ಅಂತರಾತ್ಮಕ ನೀನು । ಸಂತತ ಪೊಳೆವುತ್ತ ನಿಂತು ಸೊಬಗಿನಿಂದ । ಸಂತೋಷದ ಮೂರ್ತಿವಂತನಾಗಿ ಇರಲು । ಕಾಂತ ವಿಜಯವಿಠ್ಠಲ ಚಿಂತೆಪೋಗದಲ್ಲೊ ॥೨॥

### ರೂಪಕತಾಳ

ಒಳಗೊಂದು ಮೂರುತಿ ನೆಲೆಯಾಗಿ ಇರಲಾಗಿ । ನೆಲೆಯನ್ನು ತಿಳಿಯದೆ ಕಲಿಮತಬಿಡದಲೆ । ಕೆಲಸಾರಿ ಬಲುಹಾರಾ ಬಳಿಯಲ್ಲಿ ಇಪ್ಪವಾ । ಚಲ ಮೂರ್ತಿಗಳಿಗಾಗಿ ಬಳಲಿ ಬಳಲಿ ನಾನು । ಅಲಿಸೀದೆ ಅನುಗಾಲ ಬೆಳಗುವಿಡಿಯಪೋಗಿ । ತಳಕೆಳಗಾದಂತೆ ಅಳಲೀದೆನೊ ಅನು । ಕುಲ ವಿಜಯ ವಿಠ್ಠಲನೆ ಗಳದಸತ್ವಮೀರಿ । ಸಿಲಚೆಯ ಪೊತ್ತಂತೆ ಇಳಿಯೊಳ ಗತಿ ಮೂರ್ಖ । ಕುಲಶಿರೋಮಣಿಯಾದೆ ॥೩॥

### ಝಂಪಿತಾಳ

ಸಮೀಪದಲ್ಲಿದ್ದ ಸಡಗರದ ಚಲುವ । ಅಮೃತನ್ನದಯಡೆ ಆದರಣೆ ಇಲ್ಲದಲ್ಲಿ । ಸಮ್ಮತವಾಗಿರಲು ಕಾಲಕಾಲಕೆಸವಿದು । ಅಮೃತವಬೇಡದಲೆ ಬಲು ಅಸಾದರದಲ್ಲಿ । ಹಮ್ಮು ತೋರಿಯದಲೇವೆ ದೂರಿದ್ದ ಯಂಜಲ । ವೊಮ್ಮುಸುರೆಎಡೆ ಬಯಿಸಿ ಬಯಿಸಿದಂತೆ । ಇಮ್ಮನ ನಾನಾಗಿ ಅಜ್ಞಾನ ದಲ್ಲಿನ್ನು । **ಅಮೃತ** ವಿಜಯ ವಿಠ್ಠಲ ವಿಶ್ವನಾಯಕನೆ । ಹೆಮ್ಮೆ ಯಿಂದಲಿ ಬಾಳಿ ಗತಿರಹಿತನಾದೆ ॥೪॥

### ತ್ರಿವಿಡಿತಾಳ

ಆಕಾರವಾಗಿ ಅರ್ಚನೆಗೊಂಬ ದೈವವು । ಸಾಕಾರವಾಗಿ ಸಂಪತ್ತು ಪಾಲಿಸುತ ರವಿ । ಯಾಕಾರದಂತೆ ರಂಜಿಸುತಾ ಮನಿಯೊಳಗಿರೆ । ಪ್ರಾಕಾರಾ ಶಿಲಿಗಳಿಗೆ ಕೈಯಾಮುಗಿದು ವರ । ವಾ ಕರುಣಿಸು ಎಂದು ಮಡೆ ಹೊರಳಿ ಪೂಜಿಸುವ । ವೀಕಾರ ಮನುಜಗೆ ಸಂಪ್ರೀತಿಯಾಗುವದೇ । ಪ್ರಾಕಾರ ಕಲ್ಲುಗಳು ವರಕೊಡಬಲ್ಲವೆ । **ಏಕಪಾದ** ನಾವು ವಿಜಯ ವಿಠ್ಠಲ ನಿನ್ನ । ವಾಕರಿಸೀ ಅನ್ಯರನ ಹಂಬಲಿಸುವೆನೋ ॥೫॥

### ಅಟ್ಟತಾಳ

ಬಿಂಬಮೂರುತಿಯಪರೋಕ್ಷವಾಗದೆಗತಿ । ಯೆಂಬದು ಸಲ್ಲಾದು ಎಲ್ಲರಿಗೇ । ಬಿಂಬನೆಂಬ **ಪ್ರಾಜ್ಞ** ನನುಭವ ತಿಳಿದು । ನಂಬುವಂತೆಮಾಡು ವಿಜಯ ವಿಠ್ಠಲರೇಯಾ ॥೬॥

### ಆದಿತಾಳ

ನಿತ್ಯನೈಮಿತ್ಯಗಳು ಆವಾವ ಕರ್ಮಗಳು । ಕೃತಾರ್ಥನಾಗಿ ಸಂಚರಿಸಿದರು । ನಿತ್ಯ ತನ್ನೊಳಗಿದ್ದ ಬಿಂಬಗೆ ಆವಾಹನಿಸಿ । ಭೃತ್ಯನು ನಾನು ಎಂದು ಪೂಜಿಸಿದಲೆ । ನಿತ್ಯ ಪದವಿ ಇಲ್ಲಾ ಶ್ರುತ್ಯರ್ಥದಲ್ಲಿ ಪೇಳೆ । ಅತ್ಯಂತದಲ್ಲಿ ಕೇಳಿ ಮೊರೆ ಬಿದ್ದೆನೊ । **ಸತ್ಯಧರ್ಮ ಪರಾಕ್ರ**ಮ ವಿಜಯವಿಠ್ಠಲ ರೇಯಾ । ಮಿಥ್ಯ ಸಂಗವನೀಯದೆ ಕೃತ ಕೃತ್ಯ ಎನ್ನ ಮಾಡೊ ॥೭॥

### ಜತೆ

ಅಂಗುಟ ಪರಿಮಿತಿವಾಗಿ ಎನ್ನೊಳುನಿಂದೂ । **ಶ್ರಿಂಗಿಣಿ** ವಿಜಯ ವಿಠ್ಠಲ ಎನ್ನ ಕರುಣಿಸೊ ॥೮॥

## ಸುಳಾದಿ ೪

### ಕರ್ಮಮಾರ್ಗವನ್ನು ಬಿಟ್ಟು ಧ್ಯಾನೋಪಾಸನೆ ಮುಖ್ಯವಾಗಿಮಾಡು

### ರಾಗ ಮಾರವಿ ಧ್ರುವತಾಳ

ಅರ್ಚಿಸು ಮನವೆ ನಿತ್ಯ ಅನಾದಿ ಮೂರುತಿಯ। ನಿಚ್ಚಳವಾಗಿ ನಿಸ್ಸಂಗದಲ್ಲಿ। ಅಚ್ಚಾ ಭಕುತಿಯಲ್ಲಿ ಪಂಚ ಭೇದಜ್ಞಾನ। ಎಚ್ಚತ್ತು ದಿವಾರಾತ್ರಿ ದೈನ್ಯವೃತ್ತಿ। ಯಾಚಕ ನಾನು ಬೊಮ್ಮಾದ್ಯರ ತಾರತಮ್ಯ ತಿಳಿದು। ಸಚ್ಚಿದಾನಂದಾತ್ಮಕ ಗುಣಗಳಿಂದ। ಅಚ್ಯುತಾನಂತ ಗೋವಿಂದ ಗೋಪಾಲಕೃಷ್ಣ। ಸುಚ್ಚರಿತಸಾರ ಸುಖಸಾಗರ। ನೆಚ್ಚಿದವರನೆಂಟಾ ನಿಗಮಾಗೋಚರನೆಂದು। ಮೆಚ್ಚಿಸು ಮುದದಿಂದ ಮುಂದಾಲಿಸಿ। ಬಚ್ಚಿಟ್ಟ ದ್ರವ್ಯದಂತೆ ಅನ್ಯರಿಗೆ ತೋರಿದರು। ಹುಚ್ಚು ಹುಚ್ಚಾಗಿರುಬಾಹಿರದಲ್ಲಿ। ಹೆಚ್ಚುವದು ನಿನಗೆ ಇದರಿಂದ ಲಾಭ ಪ್ರಾಪ್ತಿ। ಬಿಚ್ಚಿ ಬಿಸಾಟದರು ಅಂತರಂಗ। ಸಚ್ಚರಾಚರದಂತೆ ಚರಿಸು ಚನ್ನಾಗಿ ಬಲು। ಚಚ್ಚರದಲಿ ಚಂಚಲ ಬೀರುತ। ಹಚ್ಚಿಕೆ ಜನರನ್ನು ವದದು ಓಡಿಸು ವೊಳಗೆ। ಮುಚ್ಚುಗೊಳಿಸು ತಿರು ವೈದೀಕವ। ಯುಚ್ಚಾವಾಗದಂಥ ಪುಣ್ಯವೆ ಸಂಪಾದಿಸಿ। ಮುಚ್ಚು ಮರೆಯೊಲ್ಲೆ ಅನುಭವಿಸು। ಅಚ್ಚಟ ವೈರಾಗ್ಯ ಧೃಡವಾಗಿ ತಿಳಿದು ಕೆಂ। ಗಿಚ್ಚು ಬೀರೂವದು ಪಾಪದರಾಶಿಗೆ। ಲಚ್ಚು ಮನುಜನಾಗಿ ಲೋಕಕ್ಕೆ ಕಾಣಿಸು। ರಚ್ಚಿಗೆ ಹಾಕದಿರು ದಿವ್ಯಪ್ರಮೇಯಾ। **ಸುಚಿತ್ರನಾದ** ನಮ್ಮ ವಿಜಯ ವಿಠ್ಠಲರೇಯನ। ಅಚ್ಚಾಗುಪ್ತ ಮಾರ್ಗದಲಿನಿಲಿಸು ಸಂತತವೊಲಿಸು॥

### ಮಟ್ಟತಾಳ

ಕರ್ಮವ ಕಡೆಮಾಡಿ ನೆಲೆಗೊಂಡವನಾರು। ಧರ್ಮವನೆಮಾಡಿ ಕಡೆಬಿದ್ದವನಾರು। ಮರ್ಮ ತಿಳಿಯದನಕ ಏನೇನುಮಾಡಿದರು। ನಿರ್ಮಳ ಪದವಿಗೆ ನಿಶ್ಚಿಂತ ಪಥವಲ್ಲಾ। ನಿರ್ಮತ್ಸರದಿಂದ ಎಳ್ಳನಿತದಾಗೆ। ಪ್ರೇಮ ಯಿಂದಲಿ ಬಹು ಅನುಭವಸಿದ್ಧಿಪದು। ಚರ್ಮಾ ಪಾಲಿಸಿಕೊಂಡು ಕಷ್ಟತರದಿಂದ। ದುರ್ಮತಿಯಾದರೆ ಫಲಪ್ರಾಪ್ತಿ ಉಂಟೇ। **ಕರ್ಮ ಧರ್ಮದ ಒಡೆಯ** ವಿಜಯ ವಿಠ್ಠಲರೇಯನ। ಮರ್ಮಗಳನು ತಿಳಿದು ವರ್ಣಿಸು ನಿನ್ನೊಳಗೆ ॥೨॥

### ತ್ರಿವಿಡಿತಾಳ

ಸ್ಥೂಲ ದ್ರವ್ಯಗಳ ಬಾಹಿರದಲಿ ತಂದು । ಕಾಲಕಾಲಕೆ ಆಯಾಸ ಬಡುವದಲ್ಲಾ । ಕೇಳೋದು ಕಿವಿಗೊಟ್ಟು ಅನ್ಯರರಿಯದಂಥ । ಮೇಲು ಉಕ್ತಿಯನ್ನು ಕೇವಲ ಸುಲಭಾ । ಆಳು ಸಾಮುಗ್ರಿಗಳು ಬೇಕಾದವಲ್ಲಾ ವಿಶಾಲ ದೇಶ ಕೋಶ ಅರಸಸಲ್ಲಾ । (ವ್ಯಾ)ವೇಳ್ಯಗೆ ದೊರೆತಷ್ಟು ಪೂಜಿ ಸಲಿ ಬಹುದು । ಮೂಲ ಮುಟ್ಟಿದು ಕಾಣೋ ತಿಳಿಯದನಕಾ । ಸಾಲು ಸಾಲಾಗಿ ಮೈಯ್ಯಾರ ತೋರುವದಲ್ಲ । ಹೇಳುವೆ ಒಂದೊಂದು ದಿವ್ಯ ಮಾತುಗಳು ಹೀ । ಯಾಳಿ ಇಂದಲತಿ ನಿಶ್ಚಮನದಾ । ಆಲೋಚನೆಯೆಲ್ಲ ಪೂಜಾವಿಧವೇ ಎಂದು । ವಾಲಯ ಹರಿಯ ಸಂಪ್ರೀತಿ ಬಡಿಸೂ । ಬಾಳುವ ದನುದಿನ ಲೇಶವಾದರು ನಿನಗೆ । ಕಾಲ ಕರ್ಮದ ಭೀತಿ ಇಲ್ಲವಿಲ್ಲಾ । ಹಾಳುಹರಟೆಯಮಾತು ಪೇಳುತ್ತಲಿದ್ದರೂ । ಓಲಾಡು ಅಂತರಂಗದ ಮಧ್ಯದಿ । ವಾಲಗವನೆ ಮಾಡು ಮರೆಯದೆ ಮರೆಯದೆ । ಏಳಲಾಪೆನ್ನ ದಿರು ಎಲ್ಲಿದ್ದರು ನಿನಗೆ । ಕಾಲನ ಉಪದ್ರವಾಗದಿದಕೋ । **ಶ್ರೀ ಲೋಲನಾದ** ವಿಜಯ ವಿಠ್ಠಲರೇಯನ । ಮಾಲೆಯಿಂದಲಿ ಎಣಿಸುತ ಚರಿಸುವದೂ ॥೩॥

### ಅಟ್ಟತಾಳ

ಸುಲಭವಾಗಿದ್ದ ಪೂಜೆಯ ನೋಡು ನಿನ್ನೊಳು । ಗಲಭೆಯಾಗದಿಪ್ಪದು ಕಾಣೊ ಎಂದಿಗೂ । ಎಲೊ ಎಲೊ ಮನವೆ ಇಂಥ ಯೋಗಸಂಪಾದಿಸಿ । ಬಲುಧನ್ಯನಾಗು ಬಾಹಿರಂಗಡಿಬಿಡು । ಕುಳಿತದ್ದು ನಿಂತದ್ದು ತಿರುಗಾಡತಿದ್ದದ್ದು । ಮಲಗಿಕೊಂಡಿದ್ದದ್ದು ಇವು ನಾಲ್ಕರೊಳು । ಹಲವು ಬಗೆ ನುಂಟು ಹೆಜ್ಜೆಗೆ ಹೆಜ್ಜೆಗೆ ಕರ । ತಳದೊಳಗಿದ್ದ ಪದಾರ್ಥ ನೋಡಿದಂತೆ । ತಿಳಿದು ತಿಳಿಯಬೇಕು ಅನುಭವರೂಢದಲ್ಲಿ । **ಕಲಿಭಂಜನ** ನಮ್ಮ ವಿಜಯ ವಿಠ್ಠಲನಂಘ್ರಿ । ಜಲಜ ಕಾಂಬುವದಕ್ಕೆ ಇದೆ ಇದೆ ಉಪಾಯಾ ॥೪॥

### ಆದಿತಾಳ

ಏಕಮೇವ ಸರ್ವ ಜಡದ್ರವ್ಯಂಗಳೆಲ್ಲಾ । ಲೋಕದೊಳಗೆ ಹರಿಯ ಕಾರವೆಂದು ಅರಿದು ಲ । ನೇಕ ವಾಕ್ಯಗಳೆಲ್ಲ ಒಡಿಯನಿಗೆ ಉಪಚಾರಾ । ಏಕ ವಿಧದಿಂದ ನಿಜವೆಂದು ಹಿಗ್ಗುತಾ । ಈ ಕಳೇವರ ಮಿಕ್ಕಾದ ಇಂದ್ರಿಯಂಗಳು ತನ್ನ । ಜೋಕೆಮಾಡುವರು ಮಾನಿಸಿಕೊಂಬಾ ಸಕಲಜನರು ।

ಶ್ರೀಕಮಲಾಕ್ಷ ತನ್ನ ಅಧೀನವೆ ಎಂದು । ವ್ಯಾಕುಲ ಪಿಡಿಯದೆ ಚಿಂತಿಸ ಬೇಕು ನೀನೆ। ಲೌಕಿಕವಾದರು ವ್ಯರ್ಥವಾಗದು ವೈ। ದೀಕ ವೆನಿಸುವದು ಎತ್ತಲಾದರೂ ನೋಡೆ । ಏಕೀ ಭೂತ ನಮ್ಮ ವಿಜಯ ವಿಠ್ಠಲರೇಯಾ ಸಾಕುವ ಸಾಕುವ ಇಹ-ಪರದಲಿ ಒಲಿದೂ ॥೫॥

**ಜತೆ**

ದ್ವಿವಿಧಕರ್ಮಗಳ ಹರಿಯಾಧೀನ ಚಿಂತನೆ। ವಿವರಿಸಿಮಾಡಲು ವಿಜಯ ವಿಠ್ಠಲಗೆ ಪ್ರೀತಿ ॥೬॥

## ಕಂಕಣಾಕಾರ ಸುಳಾದಿ ೫

ಧ್ಯಾನೋಪಾಸನಕ್ಕೆ ಮೂಲಭೂತವಾದ ಚಕ್ರಾಬ್ಜಾದಿಮಂಡಲ ವಿವರ

**ರಾಗ ಭೈರವಿ ಧ್ರುವತಾಳ**

ಕಂಕಣಾಕಾರವನ್ನು ಬರೆದು ಅದರ ಮಧ್ಯ। ಓಂಕಾರ ಎರಡು ಎಡಬಲದಿ ರಚಿಸಿ । ಶಂಕೆ ಇಲ್ಲದೆ ನಡುವೆ ಫ್ರೌಣಿ ಎಂದು ಲಿಪಿಸಿ ಮೀ । ನಾಂಕ ನಯ್ಯನ ಪೀಠಸ್ಥಳವಿದೆಂದು । ಬಿಂಕದಲಿ ಸ್ವರದೊಳಗೆ ಕಡಿಯಣ ಸ್ವರವೆ ಎರಡಾ | ಲಂಕಾರವನೆಮಾಡಿ ಅದರ ಬಳಿಯ। ಕಂಕಣಾಕಾರವನ್ನು ಒಳಗೆಮಾಡಿಕೊಂಡು। ಮಂಕುಮತಿಯ ತೊರೆದು ತ್ರಿಕೋಣಸುತ್ತಿಸಿ । ಶ್ರೀಂಕಾರ ಇಚ್ಛಾಶಕ್ತಿ ಕ್ಲೀಂಕಾರ ಕ್ರಿಯಾಶಕ್ತಿ। ಹ್ರೀಂಕಾರ ಜ್ಞಾನಶಕ್ತಿ ಮೂರು ಮೂಲಿಗೆ ಬರಿಯೊ। ಪಂಕಜ ಪಾಣಿಯ ಶ್ರೀ ಭೂ ದುರ್ಗಾನಾ- ಮಕಳು। ಪಂಕಜಾಕ್ಷನ ರೂಪ ಮೂರು ಉಂಟು। ಕಂಕಣಾಕಾರ ಮರಳೆ ತ್ರಿಕೋಣಮೇಲೆ ಒರೆದು । ಸಂಕೋಚವಾಗಿ ಇದೆ ದ್ವಿತಿಯ ವಲಯ । ಪಂಕಜ ಮಿತ್ರ ಸೋಮ ಅಗ್ನಿ ಜನರ ನಾಗ। ಕಂಕಣ ಅನಲ ವರುಣದಿಕ್ಕಿಗೆ ರಚಿಸಿ। ಕಿಂಕರ ಜನಪಾಲ ವಿಜಯ ವಿಠ್ಠಲ ಅಕ । ಳಂಕನ ಭಜಿಸುವದು ಹೃದಯದಲ್ಲಿ ತಿಳದು ॥೧॥

**ಮಟ್ಟತಾಳ**

ಕರಿ ಅಜ ರಥ ವೀಥಿ ಎಂದೆಂಬವೆ ಮೂರು। ಬರದು ಇದಕೆ ಹನ್ನೆರಡು ರಾಶಿಗಳು ವಿ। ಸ್ತರವಾಗಿ ಉಂಟು ಎರಡೆರಡೊಂದು ಕಡೆ। ಅರಿವದು ಪ್ರಮಿತ ಸಮಗತಿ ತ್ವರಗತಿ ಸೂರ್ಯನ್ನ । ಎರಡು ನಾಲ್ಕು ಕೋಣೆ ರಚಿಸೆದರ ಮೇಲೆ। ಮರಳೆ ಮಧು ಮಾಧವ ಕರಸುವ ಋತು ಒಂದು ।

ಬರೆದು ಪ್ರಣವ ವಿವರ ಹೃದಯದಲ್ಲಿ ನಮ । ಸ್ಮರಿಸು ಜ್ಞಾನಾತ್ಮನೆಂದು । ಧರಿಸು ಈ ಪರಿ ಮೂರು ಎರಡುಕೋಣೆಯಮಧ್ಯ । ತರುವಾಯ ಮಾಸ ಋತು ವರುಷ ತಾರಕ ಸಂ । ಸ್ಮರಿಸಿ ಕ್ರಮ ವರ್ಣ ಹರಿ ಐಶ್ವರ್ಯಾದಿ । ಪರಮ ಮೂರ್ತಿಗಳನ್ನು ಶಿರಸುಮೊದಲುಮಾಡಿ । ಕರತಳ ಪದತನಕ ಚರಿತೆಯಕೊಂಡಾಡು । ಗುರುತು ಆರುಕೋಣೆ ಸರಿ ಉಪರಿಭಾಗ । ಎರಡರ ಮಧ್ಯ ವರಣಂಗಳು ಉಂಟು । ಅರಹುವೆ ಪ್ರಥಮದಲ್ಲಿ ಎರಡೆರಡು ನಾಲ್ಕು ೧. **ಅ, ಆ, ಕ, ಖ, ಡ, ಥ, ಮ, ಯ;** । ೨. ಎರಡನೆ ಮನಿಯಲ್ಲಿ ವರಣಗಳಿಪ್ಪಯ್ಯಾ । **ಇ, ಈ, ಉ, ಊ, ಗ, ಝ, ಣ, ತ, ರ, ಲ;** ೩. ಸ್ಮರಿಸು ಮೂರನೆ ಮನಿಯಲ್ಲಿರುತಿಪ್ಪ ಮಾತ್ರ **ಋ, ೠ, ಌ, ೡ, ಙ, ಚ, ಥ, ದ, ವ, ಶ;** । ೪. ಕರಿಸಿಕೊಂಡವು ಇನಿತು ನಾಲ್ಕನೆಸ್ಥಾನದಲಿ । **ಎ, ಐ, ಛ, ಜ, ಧ, ನ, ಷ, ಸ;** । ೫. ವರಣಂಗಳು ಗ್ರಹಿಸು ಐದನೆಮನಿಯಲ್ಲಿ । **ಒ, ಔ, ಝ, ಞ, ಪ, ಫ, ಹ, ಳ;** । ೬. ನಿರುತ ಇಪ್ಪದು ಕೇಳಿ ಕಡಿಯಣಮನಿಯಲ್ಲಿ । **ಅಂ, ಅಃ, ಟ, ಠ, ಬ, ಭ, ಕ್ಷ** ಬರೆದು ಈಪರಿಯಲ್ಲಿ ಆರುಮನಿಯ ಮಧ್ಯ । ಸರಿ ಇಲ್ಲಿಗೆಯನ್ನಿ ತರುವಾಯ ನಾಲ್ಕು । ಎರಡೂ ವಲಯಾಕಾರ ಎರಡು ಕೋಣೆಯ ಗಣಿತ । ನಿರೀಕ್ಷಿಸಿ ಮನದಲ್ಲಿ ಪರಿಶುದ್ಧನಾಗಿ । ಪರಮ ಪುರುಷ ನಮ್ಮ ವಿಜಯವಿಠಲಮೂರ್ತಿಯ । ಸ್ಮರಿಸು ಅಜ್ಯಾದಿಗಳ ನರಸಿಂಹ ಪರಿಯಂತ ॥೨॥

**ರೂಪಕತಾಳ**

ಆರು ಕೋಣೆಯಮೇಲೆ ವರ್ತುಳಾಕಾರವನ್ನು । ಚಾರುವಾಗಿ ಬರೆದು ಅದರ ಸುತ್ತಲು ಎಂಟು ! ವಾರಿಜದಳವನ್ನು ರಚಿಸಿ ರಮ್ಯವಾಗಿ । ಸೌರಿ ಸ್ವರ್ಭಾನು ಗುರು ಬುಧ ಶುಕ್ರ ಚಂದ್ರಮ । ಧಾರುಣಿಸುತ ಕೇತು ಇವರನ್ನ ಮಧ್ಯ । ಹಾರೈಸಿ ಬರೆದು ಇವರಿವರಬಳಿಯಲ್ಲಿ ಓಂ । ಕಾರ ಸಹಿತವಾಗಿ ನಮೋನಾರಾಯಣನೆಂಬೊ । ಈರೆರಡು ನಾಲ್ಕು ವರ್ಣಗಳು ಒಂದೊಂದರಲ್ಲಿ । ಆರಾಧಿಸಿ ಬರೆದು ಬೀಜಾಕ್ಷರವೆನ್ನು । ಸಾರವನ್ನು ತಿಳಿ ಎಂಟು ವರ್ಣಮಿಳಿತ । ತಾರ ಮಂತ್ರವೆ ಸತ್ಯ ಇದರ ನಿಯಾಮಕ ವಿಶ್ವ । ಮೂರುತಿ ಮೊದಲಾದ ಅಷ್ಟರೂಪಂಗಳುಂಟು । ಸೌರಿ ರಾಹು ಮಧ್ಯ ಆದಿ ವರ್ಣವೆ ಲಿಪಿಸಿ । ದ್ವಿರಷ್ಟ ಮಾತ್ರಾ ವರ್ಗವ ಇದಕೆ ಇಂದಿರಾ । ಮಾರುತ

ದೇವನ್ನ ಬರೆದು ಶ್ರುತಿ ಕಾಲಗಳ । ಈ ರೀತಿಯಿಂದಲಿ ವಿಶ್ವನ್ನ ಸ್ಮರಿಸೆ । ಕಾರುಣ್ಯಮಾಡುವನು ಮುಂದೆ ಕ ವರ್ಗ ಉ । ಕಾರ ತೈಜಸ ದೇವನ ಬರೆದು ಕ ವರ್ಗಕ್ಕೆ । ಧಾರುಣಿ ಉದಕಾಗ್ನಿ ವಾಯು ಗಗನ ಭೂತ । ಮೂರೆರಡು ಸ್ಥಾಪಿಸಿ ಅಲ್ಲಿ ಮಾನಿಗಳನ್ನು । ತಾರೇಶ ಸ್ವರ್ಭಾನು ಮಧ್ಯದಲ್ಲಿ ಸಿದ್ಧಾ । ಆರೋಹಿಣೆಯ ಗುರು ಈರ್ವರನಡುವೆ ಮ । ಕಾರ ಪ್ರಾಜ್ಞ ಮೂರುತಿ ಚ ವರ್ಗ ಒಂದೊಂದಕೆ । ಈರೆರಡು ಮೇಲೊಂದು ಜ್ಞಾನೇಂದ್ರಿಯುಗಳುಂಟು । ವಾರ ವಾರಕೆ ಬಿಡದೆ ತತ್ವೇಶರುಗಳವಾಸ । ತೋರುವ ತುರ್ಯದೇವನು ಟ ವರ್ಗಕ್ಕೈದು । ಮೀರದೆ ಕರ್ಮೇಂದ್ರಿಯು ಪಾಣಿ ಪಾದದಿ ಪಂಚ । ಕಾರಣಿಕರಲ್ಲಿ ವಸ್ವಾದಿ ನಿರ್ಜರರೂ । ಸಾರಿರ್ಪೆ ಬುಧ ಶುಕ್ರ ಅಂತರಾಳದಲ್ಲಿ ವಿ । ಸ್ತಾರ ಇದನೆ ತಿಳಿದು ಶುಕ್ರ ಚಂದ್ರನ ನಡುವೆ । ಘೋರನ್ನ ಆತ್ಮಾಮೂರುತಿ ಬಿಂದು ತ ವರ್ಗ । ಪೂರೈಸು ಪಂಚ ತನ್ಮಾತ್ರಗಳು ಶಬ್ದಾದಿ । ಮಾರುತಗಳೈದು ಪ್ರಾಣಾದಿ ನಾಮದಲ್ಲಿ । ಸೇರಿ ಕೊಂಡಿಪ್ಪರೈ ಮುಂದೆ ಲಾಲಿಸಿ ಕೇಳಿ । ಗೌರೀಶನ ಶಿರದಲ್ಲಿ ಇಪ್ಪ ಕುಜನ ನಡುವೆ । ಮೂರುತಿ ಅಂತರಾತ್ಮನು ಘೋಷ ಪ ವರ್ಗ । ಆರನೆ ಮನೆ ಎನ್ನಿ ಇಲ್ಲಿಪ್ಪದು ಅಹಂ । ಕಾರ ಬುದ್ಧಿ ಚಿತ್ತ ಮನಸು ಚೇತನ ತತ್ವ । ಮಾರಾರಿ ಮಿಗಿಲಾದ ದೇವತಿಗಳಕ್ಕು । ಧಾರುಣಿಸುತ ಕೇತು ಇವರ ಮಧ್ಯದಲ್ಲಿ । ಶ್ರೀರಮಣ ಪರಮಾತ್ಮ ಶಾಂತವೆಂಬೋದು ಓಂ । ಕಾರದೊಳಗಿನ ವರ್ಣ ಯ ವರ್ಗ ಚತುರ್ವಿಧಾ । ಆರೊಂದು ಧಾತುಗಳು ತ್ವಕುಚರ್ಮ ರಕ್ತಾದಿ । ವಾರಿಜ ಮಿತ್ರನ್ನ ಮುಸುಕುವನ ಶನಿಮಧ್ಯ । ಬೀರುವೆನು ಜ್ಞಾನಾತ್ಮ ಅತಿಶಾಂತ ಶ ವರ್ಗ । ಕ್ಷಾರ ಸತ್ವ ರಜ ತಮ ತ್ರಯಾವಸ್ಥೆಗಳು ತಾರ ನಮೋನಾರಾಯಣವೆಂಬೊವೆಂಟು । ಸೌರಿ ಮಿಕ್ಕಾದೆಂಟು ದಳದಲ್ಲಿ ಲಿಖಿಸೋದು । ವಾರಿಜ ಭವನಯ್ಯಾ ವಿಜಯ ವಿಠ್ಠಲರೇಯಾ । ಶರೀರ ದೊಳಗಿದ್ದು ತನ್ನವಂಗೆ ತಿಳಿಪುವಾ ॥೩॥

**ಝಂಪೆತಾಳ**

ಹನ್ನೆರಡು ದಳವುಳ್ಳ ಕಮಲ ವಲಯಾಕಾರ । ಚನ್ನಾಗಿ ಬರೆವದು ಇದರ ಮೇಲೆ । ಇನ್ನು ಒಂದೊಂದು ದಳದೊಳಗೆ ಲಿಖಿಸಲಿಬೇಕು । ಮನ್ನಿಪದು ಜ್ಞಾನಿಗಳು ಬಾಲಬೋಧ । ಮುನ್ನಾದಿದಳಲ್ಲಿ ಮೇಷರಾಶಿಯು

ಬರೆದು। ಬಿನ್ನಣದಿ ಓಂ ಓಂ ಇದಕೆ ಕೇಶವಮೂರ್ತಿ। ಛನ್ನ ವರ್ಣಗಳು (ಅ, ಕ, ಡ, ಮ) ವೆಂಬವು ನಾಲ್ಕು। ಇನ್ನಿತು ರಚಿಸಿ ಎರಡನೇದಳದಲ್ಲಿ । ಸನ್ನುತಿಸು ವೃಷಭ (ಆ, ಖ, ಢ, ಯ) ಚತುರವರ್ಣಗಳು। ಓಂ ನಂ ನಾರಾಯಣಮೂರ್ತಿನೆನೆದು। ಘನ್ನ ಮೂರನೆಯದಳದಿ ಮಿಥುನ ರಾಶಿಯ ಬಳಿಯ । ವರ್ಣಿಸಿ ಓಂ ಮೋಂ ಮಾಧವದೇವನ್ನ । ಗಣ್ಯ (ಇ, ಗ, ಣ, ರ) ನಾಲು ಮಾತ್ರಗಳ ಬರೆದು ನಿಜ। ವೆನ್ನಿ ನಾಲ್ಕನೆದಳಕೆ ಮನಸುಮಾಡಿ। ಪುಣ್ಯವೆ ಉಂಟು ಕರ್ಕರಾಶಿ (ಈ, ಘ, ತ, ಲ)। ವನ್ನು ಓಂ ಭಂ ವರ್ಣ ಗೋವಿಂದನು । ನಿನ್ನೊಳಗೆ ತಿಳಿವದು ಐದನೆ ಪತ್ರದಲ್ಲಿ। ಪೆಣ್ಣುಗಳ ಮಧ್ಯದಾ ಪೆಸರಿನರಾಶಿ। (ಉ, ಊ, ಙ, ಥ, ವ) ಓಂ ಗಂ ಇದಕೆ ವಿಷ್ಣುಮೂರ್ತಿ । ಕನ್ಯಯಲಿ (ಋ, ೠ, ಚ, ದ, ಶ) ಓಂ ವಂ ವರ್ಣ ಮಧುಸೂ । ದನ ದೇವನ ಭಜಿಸು ಷಡ್ದಳದಲ್ಲಿ । ಸನ್ಮತವಹುದು ತುಲರಾಶಿ (ಌ, ೡ, ಛ, ಧ, ಷ) ಗಳು । ಇನ್ನು ತ್ರಿವಿಕ್ರಮ ಓಂ ತೇಂ (ಓಷ್ಠಾ) ಸಪ್ತದಳದಿ । ಮಣ್ಣು ಭಕ್ಷಿಪ ಕ್ರಿಮಿ (ಎ, ಐ, ಜ, ನ, ಸ) ವರ್ಣ। ವನ್ನು ಓಂ ವಾಂ ವಾಮನ ಅಷ್ಟದಳದಿ। ಹೊನ್ನಿನಂಥ ಮಾತು ಧನುರಾಶಿ ಲಿಪಿಸೆ ಸಂ। ಪನ್ನ (ಓ, ಝ, ಪ, ಹ) ಓಂ ಸುಂ ಶ್ರೀಧರ। ಇನ್ನು ನೋಡು ಪತ್ರ ನವಮದಲಿ ಈಪರಿ। ಎನ್ನು ಗ್ರಹಿಸುವದು ಹತ್ತುದಳದಿ। ಇನ್ನಿತಾದರು ಸತ್ಯ ಮಕರ (ಔ, ಞ, ಫ, ಳ) ಓಂ ದೇಂ। ಅನಂತರೂಪಾತ್ಮಕ ಹೃಷಿಕೇಶ। ಹನ್ನೊಂದನೆ ದಳದಲ್ಲಿ ಕುಂಭ। (ಅಂ, ಟ, ಭ, ಕ್ಷ) ಓಂ ಎನ್ನು ವಾಂ ಇದಕೆ ಶ್ರೀಪದ್ಮನಾಭ। ಹನ್ನೆರಡನೆ ದಳದಿ ಮೀನ (ಅಃ, ಠ, ಭ) ವರ್ಣ। ಚನ್ನಾಗಿ ರಚಿಸಿ ಓಂ ಯಂ ದಾಮೋದರ। ಹನ್ನೆರಡು ದಳದೊಳಗೆ ಇಷ್ಟೆ ಭಗವದ್ರೂಪ। ಹನ್ನೆರಡು ಮಾತ್ರಕಾ ಕೂಡಿಸಲು। "ಓಂ ನಮೊ ಭಗವತೆ ವಾಸುದೇವಾಯ" ಪ್ರ। ಸನ್ನ ದೇವನ್ನ ನೋಡಿ ಏಕ ಪಂಚಾಶ। ದ್ವರ್ಣ ಒಂದೊಂದರಲಿ ಹಂಚಿಹಾಕಿ । ಹನ್ನೆ-ರಡು ರಾಶಿಗಳ ಬರೆದು ಸ್ತುತಿಸಿ । ಧನ್ಯನಾಗೆಲೊ ಮುಂದೆ ದಳದ ಸಂಧಿಗಳಲ್ಲಿ। ರನ್ನ ತಾರ ಯೋಗ ಒಂಭತ್ತು ಪದದಂತೆ। ಹನ್ನೆರಡುರಾಶಿಗೆ ವಿಭಾಗಮಾಡಿ। ಪನ್ನಗಶಾಯಿ ಸಿರಿ ವಿಜಯ ವಿಠ್ಠಲನ್ನ ಕಾ। ರುಣ್ಯವನು ಪಡದು ಚಿಂತಿಸು ಸುಹೃದಯದೊಳಗೆ ॥೪॥

## ತ್ರಿವಿಡಿತಾಳ

ದ್ವಾದಶದಳವುಳ್ಳ ಕಮಲದಮೇಲೆ। ದ್ವಿದ್ವಾದಶ ಪತ್ರದ ಕಮಲ ಬರೆದು। ಸಾಧಿಸು ಒಂದೊಂದು ದಳದ ಮಧ್ಯದಲ್ಲಿ ವೀ। ನೋದ ಚತುರ ವಿಂಶತಿ ವರ್ಣಂಗಳ। ವೇದ ಮಾತಾ ಮಂತ್ರ ಇದೆ ಎನ್ನು ಕೇಶವ। ಮಾಧವಾದಿ ವರ್ಣ ಮೂರ್ತಿಗಳ। ಪಾದವೆ ಸ್ಮರಿಸುತ್ತ ಮತ್ತೆ ಸೂರ್ಯನ ಗಮನ। ಭೇದದಿಂದಲಿ ತಿಳಿ ನವ ವಿಧೀಯ। ಐದಿಸು ಒಂದೊಂದುಕಡೆ ಮೂರರ ಪ್ರಕಾರ। ಅದಾವಿಲ್ಲಿಗೆ ತಾರೆ ಇಪ್ಪತ್ತೇಳು। ಐದೇಳುರಾಶಿಗಳು ಹಂಚಿಹಾಕಲಾಗಿ। ಪಾದ ಪಾದಾರ್ಧ ತ್ರಿಪಾದವಾಹದು। ಪಾದ ತ್ರಿಮಂತ್ರ ತತ್ಸವಿತುಃ ವರೇಣ್ಯಂ ಭ। ಗೋದೇವಸ್ಯ ಧೀಮಹಿ ಧೀಯೋಯೋನಃ ಪ್ರಚೋದಯಾ। ಆದಿಮೂರುತಿ ನಮ್ಮ ವಿಜಯ ವಿಠಲನ ಶ್ರೀ। ಪಾದವ ನೆರೆನಂಬು ಓಂಕಾರ ನುಡಿಯುತ್ತಾ ॥೫॥

## ಅಟ್ಟತಾಳ

ಇದರಮೇಲೆ ಏಕ ಪಂಚಾಶದ್ದಳವುಳ್ಳ। ಪದುಮವ ಬರೆದು ಪ್ರದಕ್ಷಿಣಿ ಮಾಡಿ। ಮುದದಿಂದ ದ್ವಿರಷ್ಟ ಮಿಕ್ಕ ಮೂವತ್ತೈದು। ಇದೆ ಇದೆ ದಳದೊಳು ಲಿಪಿಸಿ ಅಜಾದಿಯು। ಮೊದಗಿ ಸ್ತೋತ್ರವಮಾಡು ವರ್ಣದೇವತವೆಂದು। ತುದಿ ಮೊದಲಿದರ ವಿಸ್ತಾರವೆ ಈ ಪರಿ। ಇದೆ ಚಕ್ರಾಂಬುಜವೆಂದು ಕರೆಸುತಿಪ್ಪದು। ಹೃದಯಾಕಾಶ ವಾರಿ ಸ್ಥಂಡಿಲ ಗಗನ ಸೂರ್ಯ। ವಿಧು ಮಂಡಲ ಸಮಸ್ತ ಉತ್ತಮಸ್ಥಾನ। ಇದೆ ನಿರ್ಮಾಣಮಾಡಿ ಸತ್ಕರ್ಮದಲಿ ನಿತ್ಯ। ಪದೋಪದಿಗೆ ಶ್ರೀಹರಿಯ ಧ್ಯಾನಮಾಡಲಿಬೇಕು। ಇದರೊಳು ಏಳು ಕೋಟಿ ಮಂತ್ರಾರ್ಥವೆ ಉಂಟು। ಅಧಿದೈವ ಅಧಿಭೂತ ಅಧ್ಯಾತ್ಮವೇ ಉಂಟು। ಅಧಿಕಾರತನಭೇದ ತಿಳಕೊಂಬ ಜೀವಿಗಳಿಗೆ। ಸದಮಲಾನಂದ ನಮ್ಮ ವಿಜಯ ವಿಠ್ಠಲರೇಯಾ। ಬದಿಯಲ್ಲಿ ಇರುತಿಪ್ಪ ಚಕ್ರಾಬ್ಜ ಬಲ್ಲವನಿಗೆ॥

## ಆದಿತಾಳ

ಸ್ನಾನ ಉದಕ ಆಚಮನಿಯ ಸಂಧ್ಯಾರ್ಘ್ಯ ತ್ರಿಪದ। ಎಣಿಸುವಾಗ ನಾನಮಂತ್ರ ಜಪಿಸುವಾಗ। ಮೇಣು ಅರ್ಚಾ ಅರ್ಚನೆ ಪಾವಕಾಹುತಿ ಯಜ್ಞ। ಕ್ಷೋಣಿ ಸುರರಪೂಜೆ ಅತ್ಮಸಂತೋಷ ಅನ್ನ। ಪಾನಾದಿ ಕೊಡುವಾಗ ಇದನೆ ಚಿಂತಿಸಬೇಕು। ಏನೆಂಬೆನಯ್ಯಾ ಅವ ಅಪರೋಕ್ಷಿ ಎಂದಿಗೆ।

ಧ್ಯಾನ ಸಂಪೂರ್ಣಸಿದ್ಧ ಜ್ಞಾನವಂತನಾಹಾ । ಪ್ರಾಣನಾಗಿ ಇಪ್ಪರು ಹರಿ ಸಿರಿ ಪ್ರಾಣಾದ್ಯರು । ಕಾಣಿಸಿ ಕೊಂಬರು ಒಂದೊಂದು ಮಂಡಲದಲ್ಲಿ । ಆನಂದ ಗತಿಗೆ ಸಾಧನ ಬೇಕಾದರೆ । ಮಾನವಾ ಇದನೆ ಕೈಕೊಂಡು ಆಲೋಚಿಸು । ಸ್ನಾನ ಸ್ಥಾನಕೆ ನಿನಗೆ ಶುಭನಕ್ಕು ಪುಸಿಅಲ್ಲ । ದೀನನಾಥನಾದ ವಿಜಯ ವಿಠಲರೇಯನ್ನ । ಗಾನವಮಾಡಿರೊ ಗ್ರಹಿಸಿ ಈಪರಿಯಿಂದ ॥೭॥

ಜತೆ

ಸಿದ್ಧ ಸಾಧನವಿದು ಬಿಂಬ ಕಾಣುವದಕ್ಕೆ । ಪದ್ಮಿವಲ್ಲಭ ನಮ್ಮ ವಿಜಯ ವಿಠಲಪ್ರಾಪ್ತಿ ॥೮॥

## ಹಂಸಮಂತ್ರ ಸುಳಾದಿ ೬

### ಪುರುಷ, ಕಾಲರೂಪಗಳ ದ್ವಿವಿಧ ಉಪಾಸನೆ
### ಅಧ್ಯಾತ್ಮದಲ್ಲಿ ಚಕ್ರಾಬ್ಜಾದಿ ಮಂಡಲ

### ರಾಗ ಭೈರವಿ ಧ್ರುವತಾಳ

ಚೇತನಾ ಚೇತನಾಂತರ್ಗತ ಭಗವದ್ರೂಪ । ಚಾತುರ್ಯದಿಂದ ಉಂಟು ಅಣು ಮಹತ್ತು । ಆತುಮದೊಳು ನೆನಸಿ ನಾನಾಬಗೆಯಿಂದ । ಗಾತುರ ಇಂದ್ರಿಯಂಗಳ ಕಾರ್ಯ ತಿಳಿದು । ಭೌತಿಕ ನೆಚ್ಚದಿರು ಕಾಯ ನಿಂದಿರದು ಜೀ । ಮೂತ (ಭವ) ಛಾಯವೆನ್ನು ಇಹದ ಸೌಖ್ಯ । ಮಾತು ಈಪರಿ ತಿಳಿದು ಮುದದಿಂದ ಪೂಣ್ಯಕ್ಕೆ ಸಂ । ಕೇತಮಾಡುವೆ ಮಾಳ್ಪ ಮಂತ್ರಗಳಿಗೆ । ಶ್ವೇತದ್ವೀಪವಾಸಿ ವಾಸುದೇವ ಮುಖ್ಯ । ವಾತ ಖದ್ಯೋತ ಗುರು ಇವರಲ್ಲಿಟ್ಟು । ಆ ತರುವಾಯ ತನ್ನ ಹೃತ್ಕಮಲದಲ್ಲಿಪ್ಪ । ಶ್ರೀತರುಣೀಶನ್ನ ಧ್ಯಾನಗೈದು । ಈತನು ಮಧ್ಯದಲ್ಲಿ ಅನಂತ ಅಂಶಾತ್ಮಕ । ಆತನ್ನ ತಂದು ಏಕ ಚಿಂತನೆಗೈದು । ವಾತ ಸ್ಪರಶವಿಲ್ಲದ ದೀಪದಂತೆ ಕುಳಿತು । ಜ್ಞಾತಾನುಷ್ಠಾನದಿಂದ ಗಮನಾಗಮನವನೋಡು । ಕೌತುಕವೆನಿಸುತಿದೆ ಈ ಮಂತ್ರವೊ । ಪೋತತನಾರಭ್ಯ ಯೌವನಜರಠವಿಡಿದು । ಪ್ರೇತ ಯಾತನಾ ದೇಹ ನರಕ ಸ್ವರ್ಗ । ಜ್ಯೋತಿರ್ಮಯ ಶರೀರ ಪುನರ್ಜನನ ಮರಣ । ಈ ತೆರದಲ್ಲಿ ಬಲು ಜನುಮ ಬರಲು । ಭೂತದೊಳು ನಾಲ್ಕು ಎಂಭತ್ತುಲಕ್ಷಯೋನಿ । ಜಾತನಾದ ಕಾಲಕ್ಕೂ ವೊಳಗಿಪ್ಪದು । ಭೂತಿ ಕೊಡುವದಿದು ಅಪ್ರಯತ್ನ ಮಂತ್ರ । ತಾ ತೋರಗೊಡದಯ್ಯಾ

ಅಜ್ಞಾನಿಗೆ । ಪ್ರಾತಃಕಾಲಾರಭ್ಯ ಅಪರೋದಯ ಪರಿಯಂತ । ಆತುವ ದೊಳು ಸಿದ್ಧಾ ಸ್ವೇಚ್ಛಾವೃತ್ತಿ । ಜ್ಞಾತ ಕಾಲಾದಿಯಿಂದ ಗತ ಜನ್ಮಗಳು ಮಿಶ್ರ । ಮಾತೃಗರ್ಭಾದಿ ಸ್ಥಾನಾ ಶೇಷಾರಬ್ಧಾ । ಧೌತವಾಗುವ ತನಕ ಇದೆ ಪ್ರಾಣಮಂತ್ರವೆಂದು । ಪ್ರೀತಿಯಿಂದಲಿ ಜಪಿಸು ಧ್ಯಾನೋಕ್ತದಿ । ಪಾತಕ ನಿನಗಿಲ್ಲ ಕಾಲಕಾಲಕ್ಕೆ ಪುಣ್ಯ । ವ್ರಾತ ಬಂದೊದಗುವದು ಆನಂದಕ್ಕೆ ಶಿತಾಂಶು ರವಿ ಹಸ್ತ ವಿಜಯ ವಿಠಲರೇಯ । ಭೀತರಹಿತನ್ನ ಮಾಳ್ಪ ಮಂತ್ರಾನುಸಂಧಾನಕ್ಕೆ ॥೧॥

### ಮಟ್ಟತಾಳ

ಮಂತ್ರಮಾಡುವ ಬಗೆ ತಿಳಿವದು ಚನ್ನಾಗಿ । ತಂತ್ರಸಾರದಿಂದ ಅಂಗಾಂಗುಲಿನ್ಯಾಸ । ಸಂತೋಷದಲ್ಲಿಮಾಡು ಧೃಡತರ ಮನಸಿನಲಿ । ಅಂತರಂಗದಲಿ ಸರ್ವ ರೂಪಾತ್ಮಕ । ಮಂತ್ರದೇವತೆ ಮುಖ್ಯ ಪ್ರಣವ ಮೂರುತಿಯ ಏ । ಕಾಂತದಲ್ಲಿ ಹೃತ್ಕಮಲ ಕರ್ನಿಕೆ ಮಧ್ಯ । ಇಂತಿಹ ಕಮಲಕ್ಕೆ ಚತುರಷ್ಟ ದ್ವಾದಶ । ಮುಂತೆ ಚತುರ್ವಿಂಶತಿ ಐವತ್ತೊಂದು । ಚಿಂತಿಸು ದಳಸಂಖ್ಯೆ ತ್ರಿಕೋಣ ಬೀಜಗಳು । ಯಂತ್ರವಾಹಕ ನಮ್ಮ ವಿಜಯ ವಿಠಲ ಸ್ವ । ತಂತ್ರ ಪುರುಷ ಸರ್ವ ಮಂತ್ರ ನಿಯಾಮಕನೊ ॥೨॥

### ತ್ರಿವಿಡಿತಾಳ

ಮನವೆ ಲಾಲಿಸಿಕೇಳು ಲಬ್ಧಮಂತ್ರಕೆ ಜಿತಾ । ಸನನಾಗು ಜಯ ವೆಂದು ಹರಿಯ ಸ್ತುತಿಸಿ । ಎಣಿಕೆಯಿಂದಲಿನೋಡು ಒಂದೊಂದುಮಂತ್ರಕ್ಕೆ ಘನವಾಗಿ ವರ್ಣಗಳು ಇಪ್ಪವೇಸೂ । ಎಣಿಸು ಒಂದೊಂದು ದಳದಲ್ಲೊಂ ದೊಂದು ವರ್ಣ । ಮಿನಗುವ ಮತಿಯಿಂದ ಇಡಲಾಬಟ್ಟು । ಇನಿತು ಗ್ರಹಿಸು ಇವಕೆ ಒಂದೊಂದು ಹರಿರೂಪ । ಚಿನುಮಯ ಮೂರುತಿ ಸರ್ವಾ ಭಿನ್ನ । ಗುಣವಂತ ಮಂತ್ರಾತ್ಮಕನನ್ನು ಕೂಡಿಸಿ । ಮಣಿಗಣದಿಂದ ಜಪಿಸು ವಾಗಲಿ । ಅನುಭವವಿರಲಿ ಮಂತ್ರದೇವತೆಸಹಿತ । ಕ್ಷಣಕ್ಷಣಕೆ ನಿನ್ನೊಳು ವಲಯಾಕಾರ । ಗುಣಿಸು ವರ್ಣಾಕ್ಷರ ಆದ್ಯಮೂರುತಿಯಲ್ಲಿ । ಗಣನೆ ಮಾಡುತ ನಿತ್ಯ ಜಿಹ್ವಾಗ್ರದಿ । ಕೊನೆಯಿಂದ ವಾಕ್ಪ್ರಯೋಗಮಾಳ್ಪದರೊಳು ಮಣಿಯಿಂದ ಮಣಿಗೆ ಬೆರಳಚಾಚುವದು । ಅನ ಭಾರತಿ ಪ್ರೀಯ ವಿಜಯ ವಿಠಲ ಸ । ದ್ಗುಣಿಮಣಿ ಖಣಿಯೆಂದು ಅನುದಿನನೆನೆನೆನೆ ॥೩॥

### ಅಟ್ಟತಾಳ

ಇದೆ ಮಂತ್ರ ಸಾರ್ಥಕ ಇದೆ ಮಂತ್ರಸಿದ್ಧಿಯೊ। ಇದೆ ಇದೆ ಮಂತ್ರವೊ ಇದೆ ಪ್ರಕಾರದಿಂದ ತತ್ತತ್ತು ಮಂತ್ರವ। ವಿಧಿಯಿಂದ ಜಪಿಸುವದು ಹೃದಯ ದಲ್ಲಿ ಯಿಟ್ಟು। ಪದೆ ಪದಗೆ ಬಲುವೊದಗಿ(ರಿ) ಮಾಡುವದೇಕೆ। ಮುದ ಭಕುತಿಯಿಂದಲಿದರಂತೆ ಯೊಂದೆ ಸಾ। ರಿದರೆ ಸತ್ಪುಣ್ಯದ ಉದಧಿ ಸೂಸುವ ದಯ್ಯಾ । **ಮಧುಸೂದನ** ಹರಿ ವಿಜಯ ವಿಠಲರೇಯ । ಪ್ರಧಾನವ ಕೊಡುವನೋ ಒಂದೇಯುಚ್ಚಾರಣೆಗೆ ॥೪॥

### ಆದಿತಾಳ

ಮಧ್ಯಮೂರುತಿ ಸುತ್ತ ಸೇವ ರೂಪದಿಂದ । ಪೊದ್ದಿಕೊಂಡಿಪ್ಪವು ಸ್ವ ಮೂರ್ತಿ ಪರಿವಾರ। ಸಿದ್ಧವಾದುದೆ ಕೇಳು ಜಪಿಸಿ ತಿಳಿಯಬೇಕು । ಹೃದ್ಗುಹದಲ್ಲಿ ಇನಿತು ಚಕ್ರಾಬ್ಜ(ಕಾ)ಮಂಡಲ । ಪದ್ಮ ಸುದರ್ಶನದಳದ ವಿಚಾರ ತಿಳಿದು। ಪದ್ಧತಿ ತಪ್ಪದಲೆ ಪರಿಭ್ರಮಣವಾಗುವದು । **ಪದ್ಮ ಬಾಂಧವ** ನಮ್ಮ ವಿಜಯ ವಿಠ್ಠಲರೇಯ । ಉದ್ಧರಿಸುವ ಬಿಡದೆ ಉನ್ನತ ಗತಿಯಿತ್ತು ॥೫॥

### ಜತೆ

ಜನುಮದೊಳಗೆಯೊಮ್ಮೆ ಈಪರಿ ಜಪಿಸಲು । ಗುಣತ್ರಯ ನಾಶನ ವಿಜಯ ವಿಠಲ ಪೊಳೆವ ॥೬॥

## ಸುಳಾದಿ ೭

ಚಕ್ರಾಬ್ಜಾದಿ ಮಂಡಲ ವಿವರ ಕಾಲರೂಪ ಹರಿಯ
ವರ್ಣಾತ್ಮ ಅಧ್ಯಾತ್ಮ ಉಪಾಸನೆ

### ರಾಗ ಸಾರಂಗ ಧ್ರುವತಾಳ

ಅಜ ಅಣಿಮಾ ಯಜ್ಞ ಅಚ್ಯುತ ಹಯವದನ ಕೇಶವ ಈಶ ಈಶ ವೆಂಕ ಟೇಶ। ಭೂ(ಭು)ಜ ಸ್ಥಿತ ವಿಷ್ಣು ಉರುಕ್ರಮಶರಚಕ್ರ ಗದಾಧರ ಧನು ರ್ಧಾರಿ ವೆಂಕಟೇಶ। ರಜದೂರ ಉರಗಾಯ ಉಪೇಂದ್ರ ತಾರಕ್ಷ ಹಲಧರ ಪುರುಷಾಖ್ಯ ವೆಂಕಟೇಶ। ಕುಜನಹರ ಯೋಗೇಶ್ವರ ಪ್ರಶ್ನಿಗರ್ಭ ಪರಮ ಪುರುಷ ಗೋವಿಂದ ವೆಂಕಟೇಶ। ಅಜನಪಿತ ಮಾಧವ ವೈಕುಂಠ ಶ್ರೀಪತಿ ಯಜ್ಞಭೋಕ್ತ ವಿಶ್ವ ವೆಂಕಟೇಶ। ಪ್ರಜನುತ ಇಂದ್ರ ಪ್ರಾದೇಶ ಅಂಗುಟ್ಠ

ಮಾತ್ರ ಶ್ಯಾಮ ಶಬಲವರ್ಣ ವೆಂಕಟೇಶ। ಪ್ರಜಗಳನೋಳ್ಪ ಚಕ್ಷುಸ್ಥ ಲೋಹಿತವರ್ಣ ಜೀವಗತ ರೂಪ ಸಿರಿವೆಂಕಟೇಶ। ಭುಜಗಾದ್ರಿನಿಲಯ ಎನ್ನಪ್ಪ ತಿಮ್ಮಪ್ಪ ಜಗದಪ್ಪ ವಿಜಯ ವಿಠಲ ವೆಂಕಟೇಶ ॥೧॥

### ಮಟ್ಟತಾಳ

ಅನಿರುದ್ಧ ಪ್ರದ್ಯುಮ್ನ ಸಂಕುರಷಣ ವಾಸುದೇವಾನಂದಾವುತ್ಯುಷ್ಟಾ। ಜ್ಞಾನರೂಪ ಪ್ರಣವವಮೂರುತಿ ಅಶೇಷ ಗುಣಾಧಾರ ಪೂರ್ಣೈಶ್ವರ್ಯ। ಅನಂತ ಸುಖವನಧಿ ತಿರುವೆಂಗಳೇಶ। ವಿಜಯ ವಿಠಲರೇಯ ಪರಮಪದವಿ ಕೊಡುವ ಈಪರಿನೆನಿಸಲು ॥೨॥

### ತ್ರಿವಿಡಿತಾಳ

ಪ್ರಣವ ನಾರಾಯಣ ಹರಿ ವಾಸುದೇವ ದ್ವ್ರ। ಹಿಣ ಗಾಯಿತ್ರಿ ಮಾತೃಕಾಪುರುಷ ವಿಷ್ಣು। ಇನಿತು ಮಂತ್ರ ವರ್ಣದೇವತೆಗಳು ಸಂ। ದಣಿಸಿ ಇಪ್ಪರು ಎಂಟು ದಿಕ್ಕಿನಲ್ಲಿ। ವನಜ ಕರ್ನಿಕೆದಳ ಇಂದ್ರಾದಿಗಳ ಬಳಿಯ। ಮಿನಗುವ ನಾನಾರೂಪವನೆ ಧರಿಸಿ। ಗುಣಿಸು ಈಪರಿಯಲ್ಲಿ ಚಕ್ರಾಬ್ಜಮಂಡಲ। ಎಣಿಕೆಮಾಡು ಮೇಲು ಅಧಿಕವಾಗಿ। ಗುಣ ಸಂಪೂರ್ಣ ನಮ್ಮ ವಿಜಯ ವಿಠಲರೇಯ । ತನುವಿನೊಳಗೆ ಯಿಂತು ನಿಂತು ಪರಿಪಾಲಿಪ ॥೩॥

### ಅಟ್ಟತಾಳ

ಕಾಯದೊಳಗೆ ಇದ್ದು ಸರ್ವ ವ್ಯಾಪಾರವ। ಆಯಾಸವಿಲ್ಲದೆ ನಡೆಸುವ ಲಕುಮಿ। ನಾಯಕಗೆ ನಿರ್ಗುಣ ಸೋಹಂ ಉತ್ಪತ್ತಿ। ನಾಯಕದಿಂದಲಿ ಭೇದ ಭೇದಾದಿ ಶ್ರೀ । ವಿಯೋಗತನ ಕ್ಲೇಶ ಶೋಕಾದಿ ವಿಪ್ರರಾಯತ್ತ ಅಂತರಾವೇಶ ಪರಾಭವ। ಜಾಯಯಾದ್ಯಗೋಸುಗ ಶಿವಪೂಜೆ, ದೇಹ ವಿ। ಹಾಯು ಪಲಾಯನ ಲಿಂಗಸ್ಥಾಪನ ಅ। ನ್ಯಾಯ ವಿಕಾರಾಂತರವು ಭೌತಿಕ। ಕಾಯ ಸ್ವಯಂ ವ್ಯಕ್ತಸ್ಥಳದಲ್ಲಿ ಚಿದ್ರೂಪ। ತಾಯಿ ತಂದೆ ಗುರು ಚತುರಾವರ್ಣ ಜಾತಿ। ನಾಯಿಗಳಿ ಸಾಕ್ಷಾತ ಭಗವಂತ । ತೋಯಜ ಭವ ರುದ್ರ ಮಿಗಿಲಾದವರಿಗೆ ನಾ। ರಾಯಣನಕೂಡ ಐಕ್ಯ ಸಮಾಧಿಕ್ಯ। ಮಾಯಾ ಗುಣ ಕರ್ಮ ಕಾಲಕ್ಕೆ ಕರ್ತೃತ್ವ। ವಾಯು ಪ್ರತಿಮೆ ವಿನಾ ಹರಿಗೆ ನಮಸ್ಕಾರ। ಈಯವನಿಯಲ್ಲಿ ಅಶ್ವಥ ತುಲಸಿ

ವಿ। ನಾಯಕ ಲಿಂಗ ಸ್ವಯಂ ವ್ಯಕ್ತ ನಿಧಿ ಪುಣ್ಯ। ತೋಯಗಳಲ್ಲಿ ಗಂಡಿಕಿ ಶಿಲಾ ರಹಿತಾದಿ। ಬಾಯಿ ಲಂಬುವದಲ್ಲ ಶೂದ್ರಾದಿಗಳ ಪೂಜೆ। ವಾಯು ವಿಷ್ಣು ಲಿಂಗ ಪ್ರತೀಕದಲ್ಲಿ। ಸ್ಥಾಯವಾಗಿದ್ದುದು ವಂದನೆ ಮಾಡಸಲ್ಲ। ಈಯವನಿಯೊಳು ಶೂದ್ರಾದಿ ಪ್ರತಿಷ್ಠೆ ! ಆಯತಾರ್ಥಕ್ಕೆ ಪೋಗಿ ಸಾಗಿ ಬಾಗಸಲ್ಲ। ಈಯರ್ಥದಲಿ ನಿಶ್ಚಯವೆಂದವನು ಆತ। ತಾಯಿ ವೆಂದೆಂಬೋದು ಸಿದ್ಧವಯ್ಯ ಕೇಳಿ। ಕಾಯಜಪಿತನಿಗೆ ಇಂತು ನುಡಿವವಾಕ್ಯ। ನ್ಯಾಯವಲ್ಲವೋ ಸರ್ವವು ಹರಿಸಿಂಧ್ಯವೋ। ಮಾಯಾವರ್ಜಿತ ನಮ್ಮ ವಿಜಯ ವಿಠಲರೇಯನ ಗಾಯನಮಾಡಲು ನವಭಕುತಿಯನೀವಾ ॥೪॥

### ಆದಿತಾಳ

ಜೀವಾದಿ ಭೇದ ಚಿದ್ಗುಣಗಣ ಪೂರ್ಣ ಪರಿ। ಪಾವನ್ನ ಸಾಮ್ಯಾಧಿಕ ರಹಿತ ತದ್ಗತ ಭೇದ। ದೇವ ಪ್ರಾದುರ್ಭವ ವಿಪರೀತಶೂನ್ಯ ವೇ। ದಾವಳಿ ಪ್ರಮಾಣಸಿದ್ಧ ಪ್ರಮೇಯಾವಸ್ತ। ಕೋವಿದ ಹರಿ ಪಾದ ಭಜಕರಸೇವಾಸಕ್ತ। ಆವಾವಕಾಲಕ್ಕೆ ನಡಕೊಂಡ ಯೋಗ್ಯಗೆ। ಈ ವಿಧ ತಿಳಿವಿಕೆ ಭಗವದ್ರೂಪಗಳೆಲ್ಲ। ಲಾವಣ್ಯ ಕಾಯದಲ್ಲಿ ಸುಳಿದಾಡುವ ಸುಖದಿ। ದೇವಕ್ಕಿನಂದನ ವಿಜಯ ವಿಠಲರೇಯ। ಕಾವ ಸರ್ವದಾ ನಮ್ಮ ಬಳಿಯಲಿಯಿದ್ದುನೋಡಿ ॥೫॥

### ಜತೆ

ಸಕಲಾಭರಣದಿಂದ ಒಪ್ಪುವ ಸಿರಿಕಾಂತ। ನಿಖಿಳೇಶ ವಿಜಯವಿಠಲ ಶೇಷಗಿರಿಯರಾಯ ॥೬॥

## ಸುಳಾದಿ ೮

ಸಪ್ತ (ಸಾವ:) ಕಾಲ ವಿವರ ತತ್ಪ್ರೇರಕ, ತನ್ನಿಯಾಮಕ ಕಾಲರೂಪಿ
ಹರಿಯ ಉಪಾಸನೆ, ಚಕ್ರಾಬ್ಜಾದಿಕ ಅಧ್ಯಾತ್ಮಿಕ ವಿಚಾರ

### ರಾಗ ರೇಗುಪ್ತಿ ಧ್ರುವತಾಳ

ಸಾಮೋಪಾಸನೆಮಾಡು ಶುದ್ಧಾಂತಃಕರಣದಲ್ಲಿ। ಸಾಮಸ್ತ ಬ್ರೊಹ್ಮಾಂಡವನ್ನೆ ತಿಳಿದೂ। ಶ್ಯಾಮ ಶಬಲವರ್ಣ ಇದ್ದ ಬಿಂಬ ಮೂರ್ತಿಯ ಭೂಮಾದಿ ಗುಣಗಳಿಂದ ಹರಿಯವೊಲಿಸೊ। ನೇಮ ನಿತ್ಯದಲ್ಲಿ ನಿಸ್ಸಂಗನಾಗಿ

ಇದೆ । ಕಾಮಿಸು ಕಾಲಕಾಲಕೆ ಯೋಗಮಾರ್ಗ। ಕಾಮಿನಿ ಮೊದಲಾದ ಭೋಗ ಭಾಗಗಳೆಲ್ಲ। ಶ್ರೀಮನೋಹರ ವಿಷ್ಣು ಸರ್ವೋತ್ತಮ । ರೋಮ ರೋಮಾಂತರದಿ ಮುಕ್ತಾ ಮುಕ್ತರನಿಟ್ಟು । ಸ್ವಾಮಿ ಮಮ ಸ್ವಾಮಿ ಸರ್ವಸ್ವಾಮಿ। ತಾಮಸ ತಾಮಸ ನಿರ್ಲೇಪ ತಾತ್ವಿಕ ಸಾತ್ವಿಕ । ಸಾಮಗಾಯನ ಪ್ರಿಯ ಭೂತಸ್ಥನೆ । ಪ್ರೇಮ ಪರಮನೆಂದು ಹಿಂಕಾರಾದಿ ಪಂಚ। ಸಾಮಾದಿ ಉಪದ್ರವ ಇಂತು ಗ್ರಹಿಸೊ। ಈ ಮಾತಿಗೆ ಪ್ರದ್ಯುಮ್ನ ವಾಸುದೇವ ನಾರಾಯಣ। ನಾಮಾ ಅನಿರುದ್ಧ ಸಂಕರುಷಣ ವರಹಾ । ನೃಮೃಗ ಸಪ್ತ ಭಗವದ್ರೂಪಗಳು ಅಲಿಗಲ್ಲಿ। ನೀ ಮೆದದಲ್ಲಿ ಧ್ಯಾನವ ಮಾಡೋ। ಧೂಮರಹಿತ ಅಗ್ನಿಯಂತಾಹನೊ। ಕಾಮಕ್ರೋಧಗಳೆಲ್ಲ ದಹಿಸಿ ಭಸ್ಮಮಾಡುವ। ಆ ಮೃತ್ಯು ಮಾರಿಗಳು ಭೃತ್ಯರಾಹರೊ। ಹೇಮ ವರ್ಣದಂತೆ ಪೊಳೆವ ಸಜ್ಜನರೊಡನೆ। ಭೂಮಿಯೊಳಗೆ ಅಪ್ರತಿಮಾನವಾ। ಭೀಮ ಭವ ವಾರಿಧಿ ಆವಾಗೆ ಗೋವತ್ಸ ಪಾದೋದಕ। ಸಾಮಿಪ್ಯದಲ್ಲಿ ಕಾಣಿಸುತಿಪ್ಪದೊ। ಶ್ಯಾಮ ಶಬಲವರ್ಣ ದೇವನೆ ಅತ್ಯಣು ನಿ। ಸ್ಸೀಮ ಇಂದ್ರಿಯಗಳಿಗಾಗೋಚರ ಪುರುಷ। ವ್ಯಾಮೋಹ ಪುಟ್ಟಿಸುವ ಈತನೆ ಇಷ್ಟ ದೈವ। ಕೋಮಲಗಾತುರ ಬಲು ಸುಲಭ। ಸಾಮಸ್ತ ವ್ಯಾಪ್ತ ವಿಶಿಷ್ಟಾವರಣ ಲಕುಮಿ ಮೀರಿ । ಸ್ವಾಮಿಯ ದಯದಿಂದಲಿ ( ಸಾಮದಿಂದಲಿ ) ಸ್ವಮಹಿಮಕಾಣೊ। ವ್ಯೋಮ ಕಾಲ ವೇದ ಗುಣ ಜೀವರಾಶಿ ತ್ರಿವಿಧ। ಈ ಮಾತಿನಂತೆ ಸರ್ವದ ಎಣಿಸೂ। ಸಾಮೋಪಾಸನೆ ಇದೆ ಮಾಡೊ ಮನುಜಾ। ಸಾಮವಂದಿತ ನಮ್ಮ ವಿಜಯ ವಿಠಲರೇಯಾ । ಕಾಮಿಸಿದಂತೆ ಫಲವ ಕೊಡುತಿಪ್ಪನೊ ॥೧॥

## ಮಟ್ಟತಾಳ

ಹಿಂಕಾರ ಪ್ರದ್ಯುಮ್ನ ಪ್ರಸ್ತಾವ ವಾಸುದೇವ। ಉದ್ಗೀಥ ನಾರಾಯಣ ಪ್ರತಿಹಾರ ಅನಿರುದ್ಧ। ಸಂಕರುಷಣ ನಿಧನ ಈಪರಿ ಪಂಚ ಸಾಮ । ಶಂಕೆ ಇಲ್ಲದೆ ಜನರು ಕೊಂಡಾಡಿ ಭಕುತಿಯಲಿ। ಮಂಕು ಬುದ್ಧಿ ಬಲು ದೂರಾಗಿ ಪೋಗುವದು। ಸಂಕಟ ತೊಲಗುವದು ದೇಹದೊಳಗಿದ್ದ । ಓಂಕಾರ ಮೂರ್ತಿ ವಿಜಯ ವಿಠಲನಲ್ಲಿ ಅ। ಲಂಕಾರನಾಗಿ ಪೂಜಿಪ ಜೀವ ಹೃದ್ಗತನಾ ॥೨॥

### ತ್ರಿವಿಡಿತಾಳ

ಬಿಂಬೋಪಾಸನೆಮಾಡು ಭಕುತಿ ಪೂರ್ವಕದಿಂದ । ಡಂಬಕವನೆ ತೊರೆದು ಶ್ರೀವೃದಲ್ಲಿ । ಡಿಂಬಾದೊಳಗೆ ಇದ್ದ ಹೃದಯಸ್ಥ ಮೂರ್ತಿಯ ಬೆಂಬಡದೆ ನೋಡುವದು ಬಹು ಪ್ರಕಾರ । ನಂಬು ಸಂತತ ಸಂಯೋಗ ಮೊದಲಾವರ್ತಿಲಿ । ಹೊಂಬಣ್ಣ ವರ್ಣನು ಆ ತರುವಾಯ । ಕಾಂಬ ಮೂರ್ತಿಗಳ ಪೆಸರು ಕೇಳು ಶ್ರೀವಿಷ್ಣು । ಅಂಬುಜ ಸಂಭವ ರುದ್ರನಾಮಾ । ಇಂಬಾಗಿ ಇಪ್ಪದು ಪರಿಚ್ಛೇದ ತ್ರಯದಲ್ಲಿ । ಅಂಬುಧಿ ನಂದನೆ ಲಕುಮಿ ನಾಣಿ । ಅಂಬಿಕ ನಾಮಾದಲ್ಲಿ ತತ್ತಸ್ಥಾನದೆಡಿಯಾ । ಬೆಂಬಲವಾಗಿ ಪಾಲಿಸುತಿಪ್ಪಳು । ತುಂಬಿದ ಪ್ರಕೃತಿ ಗುಣ ಸಾಮ್ಯ ಪರಮಾಣುಗಳು । ಎಂಬೊವು ಒಂದೊಂದಾನಂತ ಮಿಳಿತ । ಇಂಬುಗೊಂಡಿಹವು ಅವ್ಯಕ್ತಾದಿ ಮನ । ಅಂಬಕ ಮಿಕ್ಕಾದ ದಶ ಕರಣ । ಅಂಬರಾದಿಭೂತ ಪಂಚ ತನ್ಮಾತ್ರಿಗಳು ಎಂಬ ತತ್ವಗಳು ಇಪ್ಪತ್ತುನಾಲ್ಕು । ತುಂಬಿದ ಚಿತ್ತದಲ್ಲಿ ವಿಚಾರಿಸಿ ಹರು । ಷಾಂಬುಧಿಯೊಳಗಿರು ಹಗಲಿರಳು । ಶಂಬರಾರಿ ಜನಕ ವಿಜಯ ವಿಠಲ ರೇಯ । ನಂಬಿದ ಭಕ್ತರಿಗೆ ನಾನಾಪರಿ ಪೊಳೆವ ॥೩॥

### ಅಟ್ಟತಾಳ

ಗುಣ ಕಾಲ ದೇಶವು ಕರ್ಮ ನಾನಾ ಜೀವಾ । ನೆನೆಸೋದು ಅನಾದಿಯಿಂದ ಸಿದ್ಧವೆಂದು । ಎಣಿಸಿ ಕಾರ್ಯಗಳೆಲ್ಲ ಸೂಕ್ಷ್ಮ ಸ್ಥೂಲ ಬಹು । ಗಣನೆ ಇಲ್ಲದೆ ಬೊಮ್ಮಾಂಡ ಬಾಹ್ಯಾಂತರ । ಕ್ಷಣ ಬಿಡದಲೆ ಸಾಮವಿದ್ಯ- ವನುಗ್ರಹಿಸಿ । ಇನ ಮಂಡಲದಲ್ಲಿ ಉಪಾಸನೆ ಹೃ । ದ್ವನಜದಲ್ಲಿ ಇದೆ ವಿಧದಲ್ಲಿ ತಿಳದು । ಗುಣವಂತನಾಗು ಭವ ಬೀಜವ ನೀಗು । ತೃಣ ಮೊದಲಾದ ದ್ರವ್ಯದಲ್ಲಿ ಯೋಚಿಸು । ಗುಣಗಣ ಪೂರ್ಣ ಶ್ರೀ ವಿಜಯ ವಿಠಲನ್ನ । ಮನಮೆಚ್ಚಾ ಭಜಿಸಿ ಮಹತ್ಕಾರ ಸೇರೊ ॥೪॥

### ಆದಿತಾಳ

ಒಂದೆರಡು ಮೂರು ನಾಲ್ಕು । ಮುಂದೈದು ಆರೇಳೆಂಟು । ನಂದಾನ ಹತ್ತು ಹನ್ನೊಂದು ಹನ್ನೆರಡು ಇಂ । ತ್ತೊಂದು ಈಪರಿ ಇಪ್ಪತ್ತೆರಡರ ಪರಿಯಂತ ಸು । ನಂದದಿಂದಲಿ ಎಣಿಸಿ ಸಾಮೋಪಾಸನೆಮಾಡು । ಕುಂದದಲೆ ಕೇಶವಾದಿ ಮತ್ಸ್ಯಾದಿ ವಾಸುದೇವ । ವಂದಿಸಿ ಇನಿತು ನಿತ್ಯ ಕೊಂಡಾಡಿ

ಕಂಡಲ್ಲಿ। ನಿಂದಲ್ಲಿ ಧ್ಯಾನಮಾಡು ಸ್ಮರಿಸು ವಿವೇಕನಾಗಿ। ಎಂದೆಂದಿಗೆ ಕೇಳು ಪಾಪಲೇಪವೆ ಇಲ್ಲಾ । ಬಂಧನ ಪರಿಹಾರ ಭಕುತಿಮಾತುರವಾಡು ನಂದ ಮೂರುತಿ ನಮ್ಮ ವಿಜಯ ವಿಠಲರೇಯ । ಬಂದು ಹೃತ್ಕಮಲದಲ್ಲಿ ಸುಳಿದಾಡುವನಲಿದು ॥೫॥

**ಜತೆ**

ಸಕಲಬಗೆಯಿಂದ ಸಾಮವಂತನಾಗು। ರುಕುಮಣಿಪತಿ ವಿಜಯ ವಿಠಲನ್ನ ಸ್ಮರಿಸು ॥೬॥

## ಸುಳಾದಿ ೯

**ಧ್ಯಾನೋಪಾಸನೆ ತದ್ವಿವರ, ಧ್ಯಾನೋಪಾಸನೆಯ ಮೆಟ್ಟಿಲುಗಳು ತದಾಚರಣೆ ನಿಯಮ, ಧ್ಯಾನಗೈಯ್ಯಲು ಯೋಗ್ಯನಾಗುವಬಗೆ**

**ರಾಗ ಮಧ್ಯಮಾವತಿ ಧ್ರುವತಾಳ**

ಸಾಮನ್ಯಧಾನ್ಯವಿದು ಮಾನ್ಯವಂತರು ಕೇಳಿ। ತಾಮಸ ಭಕ್ತಜನಕೆ ಪೇಳಸಲ್ಲ। ಸ್ವಾಮಿ ಭೃತ್ಯನ್ಯಾಯಬಲ್ಲ ತಾತ್ವಿಕರಿಗೆ। ಈ ಮಹಾ ಮಹಿಮೆಯ ತಿಳಿವದೊ । ಕಾಮಕ್ರೋಧಗಳಳಿದು ತನ್ನ ಚಿತ್ತಕ್ಕೆ ಸುಖ। ಸ್ತೋಮವಾಗುವ ಸೂಚನೆ ಗ್ರಹಿಸಿ । ನೇಮವಾದ ಭೋಜನ ನಿದ್ರಾ ನಾನಾ ವ್ಯಾಪಾರ। ಭೂಮಿವೊಳಗೆ ನಿರ್ಭಯವೆ ಸರಿ । ಕೋಮಲನಾಗಿ ಮಾಡಿ ಸ್ವಧರ್ಮ ಬಿಡದಲೆ। ಯಾಮ ಯಾಮಕೆ ಹರಿ ನಾರಾಯಣ । ರಾಮಾನಂತ ಗೋವಿಂದ ಅಚ್ಯುತ ಕೃಷ್ಣನೆಂಬೊ। ನಾಮಾಮೃತದಲ್ಲಿ ವೋಲಾಡುತ। ಹೇಮ ರಜತ ರತುನ ಧನಧಾನ್ಯ ಪಶುವ್ರಾತ। ಧಾಮ ಸತಿ ಸುತರು ಕೇವಲವಾಗಿ। ತಾಮುನಿದು ಪೋಗದೆ ನಶ್ವರದೇಹದಲ್ಲಿ। ಪ್ರೇಮ ಅನವರತ ಇದ್ದದರೊಳು। ಕಾಮ ಅನುದಿನ ಹೊರ್ತು ಶ್ರೀರಮಣನ್ನ ಪಾದ ತಾಮರಸದಲ್ಲಿ ಏಕಾಗ್ರದಿ। ಪ್ರೇಮ ಉಳ್ಳವನಾಗಿ ಹರಿ ಪರ ಪರ ಬೊಮ್ಮ ಕಾಮಾದಿಗಳವೊಡೆಯ ಸುಲಭನೆಂದು। ಸಮಸ್ತ ವೇದಾತೀತ ನಿರವರಧಿಕ ನಿಗಮ। ತಮ ಸರ್ವ ಭವ ತಾರಕನೀತಾ ನಿತ್ಯ। ನಿಷ್ಕಾಮದಲ್ಲಿಗೆ ಮನಸು ಮಾಡಿ ಪ್ರಮೋದದಿಂದ । ರೋಮಾಂಚನಮಹಸ್ನೇಹದಿಂದ ಬಿಡದೆ। ಯಾಮಿನಿ ನಾಥ ವರ್ಣ ವಿಜಯ ವಿಠಲರೇಯ। ಕಾಮಿಸಿದ ಫಲಕೊಡುವನು ಭಕ್ತರಿಗೆ ॥೧॥

## ಮಟ್ಟತಾಳ

ತನಗಿಷ್ಟವಾದ ಪ್ರತಿಮೆಯನು ಸುಲ । ಕ್ಷಣ ಉಳ್ಳದೊಂದು ಕ್ಷಿಪ್ರ ಮತಿಯಲ್ಲಿ। ದಣಿ ದಣಿ ನೋಡುತ್ತ ಮುಂಭಾಗದಲ್ಲಿ ಯಿಟ್ಟು। ಮಣಿಮಯ ಮಕುಟ ಕಾಂಚನ ತೊಡಗಿಯ ತೊಡಿಸಿ । ಗುಣಗಣ ಪರಿಪೂರ್ಣ ಸಾಕಾರ ನೆಂದು। ಇನಿತು ಚಿಂತಿಸಿ ಪ್ರತೀಕದೊಳಗೆ ಇದೆ। ನೆನೆದು ತದ್ಗತವಾದ ಮೂರ್ತಿಯ ಮಧ್ಯದಲ್ಲಿ। ಅನಿಲದೇವನ ಸ್ಮರಿಸಿ ಇದರಂತೆ ಯೋ। ಚನೆ ಮಾಡು ವೊಳಗೆ ಚಿನುಮಯ ಕಾಯನ। ನಿನಗೆ ನೀನೆ ತಿಳಿ ದ್ವಯ ಬಿಂಬವ ತರುವಾಯ। ಸನುಮಾರ್ಗವನ್ನೆ ಸು(ಸ)ಜ್ಞನ ದಿಂದಲಿ। ಇನಿತು ಗೋಳಕನೆಂದು ನುಡಿಯದಿರೊ ಮಂದ। ಜನರಿಗೆ ಮಾತುರ ಪೇಳಿದೆ ನೋಡಿರೊ। ಘನ ಜ್ಞಾನಿಗಳೊಡೆಯ ವಿಜಯ ವಿಠಲರೇಯ। ಅನುದಿನ ಯೋಗ್ಯರಿಗೆ ಗೋಚರಿಸುವಕಾಣೊ ॥೨॥

## ತ್ರಿವಿಡಿತಾಳ

ಎದುರಿಲಿ ಮೂರ್ತಿಯ ಇಟ್ಟು ಪೂಜಿಸಿ ತನ್ನ । ಸದಮಲ ದೃಷ್ಟಿ ಯಲಿ ನೋಡಿ ನೋಡಿ। ಪದಮೂಲಪಿಡಿದು ಕಿರೀಟ ಪರಿಯಂತ । ಇದೆ ಇದೆ ಪರಿಯಲ್ಲಿ ನಿರೀಕ್ಷಿಸುತ್ತ। ಸುಧೆಯನ್ನು ಕುಡಿದಂತೆ ಇದ್ದ ಮೂರ್ತಿಯ ಬಾಹಿ। ರದ ಧ್ಯಾನ ಚನ್ನಾಗಿ ನಿಲ್ಲಲಾಗಿ। ಒದಗಿ ವಾಸನಮಯ ಜಡದಿಂದ ನಿರ್ಮಾಣ। ಹೃದಯದೊಳಗೆ ಬೇಗ ಮಾಡಿಕೊಂಡು। ಅದನೆ ಪೂಜಿಸ ಬೇಕು ಮರಳಿ ಮರಳಿ ಚಿತ್ತದಲ್ಲಿ। ನಿಂದಲ್ಲಿ ಕುಳಿತರೆ ಮಲಗಿದರೆ। ಇದೆ ಇದೆ ಅಭ್ಯಾಸಮಾಡಲು ಬಲು ಜ। ನ್ಮದಲ್ಲಿದ್ದ ವಾಸನಮಯ ಮೂರುತಿ । ಪದೊ ಪದಿಗೆ ಸಾಂಗೋಪಾಂಗದಿಂದಲೆ ಪೊಳೆವ। ಇದುರಲಿ ಇಟ್ಟಿದ್ದ ದ್ರವ್ಯ ದಂತೆ। ಮದನ ಜನಕ ನಮ್ಮ ವಿಜಯ ವಿಠಲರೇಯ। ಇದನೆ ಹಿಂದುಮಾಡಿ ಹೊಸಪರಿತೋರಿಸುವಾ ॥೩॥

## ಅಟ್ಟತಾಳ

ನಿರುತ ವಾಸನಮೂರ್ತಿ ಪೂಜಿಸಲು ಕಾಲ। ಪರಿಪಕ್ವಬರಲಾಗಿ ಹರಿಕರುಣದಿಂದ ಗುರುಕೃಪೆ ಮಾಡುವ। ಸರನೆ ಈ ಮೂರ್ತಿ ಇವನ ಕಣ್ಣಿಗೆ ಗೋ। ಚರಿಸೋದು ಈತನೆ ತೋರುವ ಪ್ರಾಜ್ಞಾಕ್ಷಿ ಪೆ। ಸರು ಉಳ್ಳ ಆತ್ಮ ಬಿಂಬ ನಾಮಕನೆಂದು । ಕರಿಸಿಕೊಳ್ಳುತಲಿಪ್ಪ ಕಡೆಮನೆ

ಧೊರೆಯೆಂದು । ಶರಣರಿಗೆ ಮಿರಗುವ ಅಂತರಂಗದಲ್ಲಿ । ಅರಿದೆ ಅವನ ಯೋಗ್ಯತವನ್ನೆ ಪಸರಿಸಿ । ಪರಮಪುರುಷ ನಮ್ಮ ವಿಜಯ ವಿಠ್ಠಲಮುಂದೆ ಕುರುಹ ತೋರುವ ನಿಜಸ್ವರೂಪದೇವನ್ನಾ ॥೪॥

**ಆದಿತಾಳ**

ಜೀವಾಂತರ್ಗತವಾದ ಮೂರ್ತಿಯೆ ತಾನಾಗಿ । ಆವಾಗ ಪೊಳೆಯಲು ಸಂಚಿತಾಗಾಮಿ ಕರ್ಮ । ಬೇರೋದು ಅನುಭವಿಪ ಪ್ರಾರಬ್ಧ ಕರ್ಮಂಗಳೆಲ್ಲ ನೋವು ಸುಖವಾದರು ಉಂಡು ತೀರಿಸಬೇಕು । ಆ ವಿರಾಜನದಿಯಲ್ಲಿ ಮುಳುಗುವ ಪರಿಯಂತ । ತ್ರೀವಿಧ ಯೆನಿಸುವ ದೇಹ ನಾಶವಿಲ್ಲ । ದೇವನ ಲೀಲೆಯಂತೊ ಅಧಿಕಾರಭೇದದಿಂದ । ತಾ ಪೊಳಗಿದ್ದು ಸರ್ವಬಗಿಯನ್ನು ಮಾಡಿಸುವ । ಪಾವನ ಜೀವಕ್ಕೆ ತಮಸ್ಸು ಎಂದಿಗೂ ಇಲ್ಲ । ಕೋವಿದರು ಕೇಳಿ ಕೌತುಕವೆನ್ನದಿರಿ । ಶ್ರೀ ವಲ್ಲಭ ನಮ್ಮ ವಿಜಯ ವಿಠಲರೇಯ । ಜೀವರ ಸ್ವರೂಪದಂತೆ ಧ್ಯಾನವಕೊಡುವಾ ॥೮॥

**ಜತೆ**

ಆಚಾರವಂತನಾಗಿ ಧ್ಯಾನಮಾಡಲಿಬೇಕು । ರೋಚನ ಪ್ರೀಯ ವಿಜಯ ವಿಠಲನ್ನ ಮೂರ್ತಿಗಳ ॥೬॥

## ಅಧ್ಯಾತ್ಮ ಸುಳಾದಿ ೧೦

**ಸ್ಥೂಲ ದೇಹಾರಂಭಿಸಿ ಪ್ರಾಕೃತ ಅನಿರುದ್ಧ ಅವ್ಯಕ್ತ ಲಿಂಗದೇಹ ವಿಚಾರಪೂರ್ವಕ ಅಧ್ಯಾತ್ಮ ಉಪಾಸನೆ, ತತ್ ಕಾರ್ಯಪ್ರವರ್ತಕ ಹರಿಯರೂಪಗಳ ಧ್ಯಾನ**

**ರಾಗ ಭೈರವಿ ಧ್ರುವತಾಳ**

ಸಪ್ತಾವರಣ ದೇಹ ಸತತ ಸಾಧನಗೇಹ । ಆಪ್ತನು ಅನಂತ ಗುಣ ರೂಪಾತ್ಮಕ ಹರಿ । ತಪ್ತ ಕಾಂಚನದಂತೆ ಪೊಳಗೆ ಸುಳಿವ ನಿ । ರ್ಲಿಪ್ತನು ಸಮಸ್ತ ದೋಷರಾಶಿಗಳಿಂದ । ತೃಪ್ತನು ಅನಾದ್ಯಂತಕಾಲದಲಿಂದ । ಪ್ರಾಪ್ತನಾಗುವ ಕೇವಲ ನಂಬಿದವರಿಗೆ । ಗುಪ್ತ ಮಹಿಮ ಗುಣಾಸಾಂದ್ರ ಸುಜನಾಬ್ಧಿ ಚಂದ್ರ । ವ್ಯಾಪ್ತ ಪ್ರಧಾನಪುರುಷ ಅಣುರೇಣುಸ್ಥಾನದಲ್ಲಿ । ಶಪ್ತಮಾಡಿದಮೇಲೆ ಭಕ್ತರ ಪೊರೆಯದಿರಾ । ಸುಪ್ತಿಕಾಲದಲ್ಲಿ ಏಕಮೇವ ನೆನಿಸುವ । ಕ್ಲಪ್ತಿಗೆ ಲೇಶಾಂಶ ಕೊರತೆ ಎನಿಸಾಶ್ರೀಶ । ಜಪ್ಪರ ಮನದಲಿ

ಮುಂದೊಲಿದು ಪೊಳೆವ। ದೀಪ್ತ ಮೂರುತಿ ನಮ್ಮ ವಿಜಯ ವಿಠಲ ಕಮಲಾಪ್ತನಂತೆ ಪೊಳೆದು ಅಜ್ಞಾನಾಂಧ ಓಡಿಸುವ ॥೨॥

### ಮಟ್ಟತಾಳ

ತ್ವಕ್ಚರ್ಮ ಮಾಂಸ ಮಜ್ಜ ಮೇದಸ್ಸು ಅಸ್ಥಿ । ರಕುತ ಸಮೇತ ಸಪ್ತಧಾತುಗಳು । ಯುಕ್ತಿವಂತರು ಮನಃಪೂರ್ವಕದಿಂದ। ಉಕ್ತಿ ತಿಳಿದು ಹರಿಯ ಕೊಂಡಾಡುವರು। ಭಕುತಿಯಿಂದಲಿ ಒಮ್ಮೆ ಸ್ಮರಣೆಮಾಡೇ । ಮುಕುತಿಗೆ ಇದೆ ಮಾರ್ಗ ಅನ್ಯಯೋಚನೆಸಲ್ಲ । ಕಕುಲಾತಿಯಿಂದ ಅನ್ಯ ಗ್ರಂಥವನೋದಿ । ಕರ್ಕಸ ಯಾತನೆಯ ಒಳಗಾಗುವದಲ್ಲ। ನಖ ಶಿಖ ಪರ್ಯಂತ ಗುಣಿಸಿ ಎಣಿಸುವದು। ಸುಖ ತೀರ್ಥರ ಮತದ ಮನುಜರ ನೆರೆನಂಬಿ । ಸುಖಪೂರ್ಣ ನಿತ್ಯ ವಿಜಯ ವಿಠಲರೇಯನ। ಭಕುತರೊಳಗೆ ನಲಿದು ಭವ ಉತ್ತರಿಸುವದು ॥೨॥

### ರೂಪಕತಾಳ

ತನುರೂಹದಲ್ಲಿ ಹಿಂಕಾರ ಪ್ರದ್ಯುಮ್ನ । ನನು ಕಾಣೋ ತ್ವಕ್ಕಿನಲ್ಲಿ ಪ್ರಸ್ತಾವನಾಮಕ । ಅನಿರುದ್ಧ ರಾಮನು ಚರ್ಮದಿ ಸಂಕರು। ಷಣನೆಂಬ ಪ್ರತಿಹಾರ ನಾಮಕ ಶ್ರೀಪತಿ । ಗುಣನಿಧಿ ಉದ್ಗೀಥ ನಾಮಕ ವಾಸುದೇ । ವನು ವರಾಹಾಮೂರ್ತಿಗಳು ಮಾಂಸದಲ್ಲಿ ಉಂಟು। ನೆನಿಸು ಶಾಂತಿ ಸಂವಿದ ನಿಧನ ನಾಮಕ ನಾರಾ। ಯಣ ದ್ವಯ ರೂಪಗಳು ಶೋಣಿತದಲಿ ವಾಸ। ಪ್ರಣವ ಪ್ರತಿಪಾದ್ಯ ವಷಟ್ಕಾರನಾಮಕನು ಷ। ಡ್ಗುಣನೆಂಬೊ ಎರಡನ್ನು ಮೇದಸ್ಸಿನಲ್ಲಿ ತಿಳಿ। ಘನಶೋಕ ಹರ ಸಾರನೆಂಬೊದಾದಿ ನಾರಾಯಣ ಮೂರ್ತಿ ಇಪ್ಪರು ಮಜ್ಜದಲ್ಲಿಬಿಡದೆ। ಜನನರಹಿತ ಹಂಸನಾಮಕ ಉಪೇಂ। ದ್ರನು ಪೊಳೆವ ಅಸ್ಥಿಗಳೊಳಗಿದ್ದು ತಪ್ಪದೆ। ಮನೋನಿಯಾಮಕ ನೊಡೆಯ ವಿಜಯ ವಿಠಲರೇಯ। ಅಣುರೇಣು ತೃಣಕಾಷ್ಟ ಬಹಿರಂತರ ಭರಿತ ॥೩॥

### ಝಂಪೆತಾಳ

ಪೇಳಲೇನು ಮುಂದೆ ಅಸ್ಥಿ ಮಜ್ಜದಲ್ಲಿ ಅಂ। ಗುಲಿ ಪರ್ವಗಳಲ್ಲಿ ಸಾವಿರದ ಎಂಭತ್ತು। ಮೇಲು ಭಗವದ್ರೂಪ ಮೂರುಕಡೆ ಇಪ್ಪದು। ಹೋಲಿಕೆಯ ಬಲ್ಲವರಾರು ಬುಧರು। ಏಳು ಧಾತುಗಳೊಳಗನ್ನಮಯಾದಿ

ಕೋಶ। ಮೇಲು ಕೆಳಗೆ ಕವಚದಂದದಿ। ನಾಲಯವಕ್ಕು ಅದರೊಳಗೆ ತನ್ನಾಮಕ। ಶ್ರೀಲೋಲನಿಪ್ಪನು ಅಯಿದುರೂಪಾ। ಏಳಲವಮಾಡದೆ ಸೂಕ್ಷ್ಮ ಸೃಷ್ಟಿಯಲ್ಲಿ। ನಾಲ್ಕು ಮೂರ್ತಿಗಳು ಅನಿರುದ್ಧಾದಿ। ಆ ಲಿಂಗ ದೇಹಕ್ಕೆ ಆವರಕವಾಗಿಹವು। ಆಲಿಸಿದರೆ ಅಂಗಿತೊಟ್ಟ ತೆರದಿ। ಪಾಲಿಸುವ ಪ್ರತಿದಿನ ವಿಜಯ ವಿಠಲರೇಯನ। ಊಳಿಗವನುಮಾಡೆ ಉದ್ಧಾರನಾಗುವಾ॥

## ತ್ರಿಪುಡಿತಾಳ

ಹದಿನಾರುಕೂಡಿದ ಅನಾದಿ ಲಿಂಗದೇಹ। ಇದು ಉಂಟು ಕವಳೆಯಂದದಿ ಜೀವಕ್ಕೆ ಮುಚ್ಚಿ। ಅದರೊಳು ಪುರುಷನಾಮಕ ಭಗವಂತನು। ಕದಲಿ ಪೋಗದೆ ಸರ್ವ ಸ್ವರೂಪದಿ। ಮುದದಿಂದ ಇಪ್ಪನು ಅಗಲನು ಕ್ಷಣಮಾತ್ರ। ಪದುಮಜವಿಡಿದು ಜೀವಿಗಳೊಳಗೆ। ಕುದುರೆಯ ಕೂದಲು ಸಹಸ್ರಭಾಗಮಾಡೆ। ಅದರ ಪ್ರಮಾಣ ನಿಶ್ಚಯ ಜೀವವೊ। ಇದೇ ಬ್ರಹ್ಮಾದಿಗಳಿಗೆ ಒಂದೇ ಪ್ರಕಾರವು। ಅಧಿಕಾರತನ ಭೇದ ಗುಣವನೋಡು ತ್ರಿದಶಗಣಕೆ ಅಂಶತೋವ್ಯಾಪ್ತಿ ಶರೀರ। ವದೆ ಮಿಕ್ಕಾದವರಿಗೆ ಪ್ರಕಾಶಿತಾ ಇದೆ ಇದೆ ಸಿದ್ಧ ಶ್ರುತಿ ಸ್ಮೃತಿ ಸಮ್ಮತ। ಪದೋಪದಿಗೆ ಹರಿಯ ಮರಿಯದಿರು। ವಿಧಯಿಂತು ಇರಲಿಕ್ಕೆ ಜೀವೇಶವೊಂದೆಂಬ। ಅಧಮಾಧಮರ ಕರ್ಮವೇನೆಂಬೆನೋ। ಕ್ಷುಧೆಯಗೋಸುಗಪೋಗಿ ಕಂಡ ಕಂಡ ಜನರ। ಪದಕೆ ಬೀಳುವ ಮನುಜ ಬೊಮ್ಮನೆಂತೊ। ಸುದತಿ ವಂಚಿಸಿ ಸುತರಪಡದ ಕಾರ್ಯವತಿಳಿಯಾ। ಮದ ಗರ್ವ ಮತಿತಾನು ದೈವ ಸಮನೇ। ಮದುವೆಯ ಮಾಡುವ ತನ್ನ ನಷ್ಟವ ತಿಳಿಯದೆ। ತದುಪರಿ ಶೋಕಿಸುವ ಕೆಲೆಗಾಣದೆ। ವೊದಗಿ ಪೋಗುವ ಪಯಣಗತಿಯಲ್ಲಿ ಗ್ರಾಮಕ್ಕೆ। ಹದುಳ ಗಾಣದಲಿಪ್ಪ ಸೇರುವದೊ। ಮದ ಸೊಕ್ಕಿದವರನ್ನು ಕೊಲ್ಲುವ ವಿಜಯ ವಿಠಲ। ಇದೇ ದೇಹ ನಿರ್ಮಾಣಮಾಡಿದ ಮಹಾಮಹಿಮ ॥೫॥

## ಧ್ರುವತಾಳ

ಆರಂಗುಲ ಪ್ರಮಾಣ ಪೊಕ್ಕಳಧೋಭಾಗ। ಶಿರಸು ಪರಿಯಂತ ಬ್ರಹ್ಮನಾಡಿ। ಘೋರ ನೋಡಿದರು ಕೇವಲ ಸೂಕ್ಷ್ಮ ನಿರ್ಮಳ। ಧಾರಾಳವಾಗಿಪ್ಪದು ಮಧ್ಯದಲ್ಲಿ। ಈ ರೀತಿ ಇದೆ ಸುಷುಮ್ನವೆಂದೆನಿಪದು।

ಮೂರೊಂದು ಇದಕೆ ಪ್ರಭೇದನಾಡಿ । ಚಾರು ವಜ್ರಿಕಾರ್ಯಕ ಪ್ರಕಾಶಿನಿ ವೈದ್ಯುತಿ। ಸೇರಿಸಿಕೊಂಡಿಪ್ಪವು ಚತುರ ಭಾಗ । ಸಾರಿರ್ದೈ ಹರಿತಾ ನೀಲ ಶ್ವೇತ ಪಿಂಗಳ ರಕ್ತ। ನಾರಾಯಣಾಂತ ಕೃತಿಪತಿತನಕ । ಮೂರೊಂದು ಒಂದು ನಾಡಿಯೊಳಗೆ ಈ ಕ್ರಮುವವರ್ಣ। ಮೂರುತಿಗಳಿಪ್ಪವು ವಾಸವಾಗಿ ಬೇರೆ ಬೇರೆ ನಾಡಿ ಸ್ಥಾನದಲ್ಲಿ ಲಕುಮಿ; ವಾರಿಜಾದ್ಯರಿಂದ ತುತಿಸಿಕೊಳುತ ಪಾರತಂತ್ರವಿಲ್ಲದ ವಿಜಯ ವಿಠಲರೇಯ। ಆರಾಧಿಸುವ ಜನಕೆ ಬೆಂಬಿಡದೆ ಬೆಂಬಲನು ॥೬॥

## ಮಟ್ಟತಾಳ

ಸತತ ಈ ನಾಡಿ ಮೂಲಸ್ಥಾನದಲ್ಲಿ । ಚತುರದಳ ಪದುಮರಕುತ ವರ್ಣ। ಹುತಾಶನ ಮಂಡಲ ತ್ರಿಕೋಣಾಕಾರ। ಅತಿಶಯವಾದ ನಾಭಿ ಸ್ಥಾನದಲ್ಲಿ। ಚತುರ ದ್ವಿದಳ ವನಜ ರಕ್ತವರ್ಣ। ಪತಿತನ ಶೋಷಿಸುವ ಆರುಕೋಣೆಯು ಮಾ। ರುತ ಮಂಡಲವೆನ್ನಿ। ಕೃತಿಪತಿ ಮೊದಲಾದ ಐದು ಮೂರುತಿಯು ಉ। ಕುತ ಕ್ರಮದಿಂದ ಇಪ್ಪವು ಅನುಗಾಲ। ಚ್ಯುತ ದೂರ ನಮ್ಮ ವಿಜಯವಿಠಲ ಕಾಣಿರೊ। ನುತಿಸಿದವರಿಗೆ ಸದ್ಗತಿಯನು ಪಾಲಿಸುವಾ ॥೭॥

## ತ್ರಿವಿಡಿತಾಳ

ಹೃದಯಸ್ಥಾನದಲಷ್ಟದಳದಿಂದಲೊಪ್ಪುವ। ಪದುಮ ಇದರ ಮೇಲೆ ರವಿ ಮಂಡಲ। ಅದನು ನೋಡಲಾಗಿ ಮೂರು ಕೋಣೆಯುಳ್ಳ। ತ್ರಿದಶ ಮೊಗ ಮಂಡಲ ಪೊಳೆವತಿದಕೊ । ಅದನು ಕಳೆದು ತಿಳಿ ಹನ್ನೆರಡು ದಳವುಳ್ಳ। ಪದುಮವೆವುಂಟು ಉರಃಸ್ಥಾನದಲ್ಲಿ। ದ್ವಿದಳ ಶುಕ್ಲ ಪದುಮ ತಾಲುದಲ್ಲಿ ನೋಡು। ವಿಧುಮಂಡಲವದರ ಮೇಲೆ ಸಿದ್ಧಾ। ಪದುಮ ಶುಭ್ರ ಎಸಳ ಎರಡರಿಂದೊಪ್ಪುತ । ಇದೆ ಭ್ರೂ ಮಧ್ಯಾಗ್ನಿ ಮಂಡಲ ತ್ರಿಕೋಣ। ಪದುಮ ದ್ವಾದಶ ಎಸಳು ಶುಕ್ಲವರ್ಣದಲ್ಲಿ। ಪ್ಪದು ಶಿರಸ್ಸಿನಲ್ಲಿ ವರ್ತುಳ ಮಂಡಲ। ನದಿ ಪತಿ ನಾಮದಲಿ ಕರಿಸಿಕೊಂಬದು। ಇದಕೆ ಮೊದಲು ಪೇಳಿದಂತೆ ಮೂರುತಿಗಳು। ಯದುಕುಲೋತ್ತಮರಂಗ ವಿಜಯ ವಿಠಲರೇಯ। ಪದವಿಯಕೊಡುವನು ಈಪರಿಧ್ಯಾನಿಸೆ ॥೮॥

## ಝಂಪೆತಾಳ

ಹಿರಿಯ ನಾಡಿಯಸುತ್ತ ಪೂರ್ವಾದಿವಿಡಿದು ಚ । ತುರ ನಾಡಿಗಳುಂಟು ಉತ್ಸಹದಲಿ । ಕರಿಸಿದವು ವಜ್ರಿಕಾ ಈಡಾಪಿಂಗಳಾಧಾರಣಿ । ತರುವಾಯದಲಿ ಗುಣಿಸು ಎಪ್ಪತ್ತೆರಡು ಸಾ । ವಿರ ನಾಡಿಗಳು ಸತ್ಯ ಸವ್ಯಾಪಸವ್ಯದಲಿ । ಬೆರದಿಪ್ಪುದು ಅರ್ಧಾರ್ಧ ಉಭಯಪಕ್ಷ । ಹರಿ ತಾನೆ ಸ್ತ್ರೀ ಪುರುಷರ ರೂಪವನ್ನೆ ಧರಿಸಿ । ಇರುಳು ಹಗಲು ಕ್ರೀಡೆಯಾಡುತಿಪ್ಪ ನರನುತ್ತಮನೊಬ್ಬ ವೈಷ್ಣವನ ಮನ್ನಿಸಿ । ಕರೆದು ಮೃಷ್ಟಾನ್ನ ಭೋಜನವ ಮಾಡಿಸೆ । ಪುರುಷಾಯು ಉಳ್ಳನಕ ನಿತ್ಯ ಕುಟುಂಬಕ್ಕೆ । ಪರಿತೋಷ ಬಡಿಸಿದಂತೆ ಕಾಣಿರೈ । ತುರಿಯನಾಮಕದೇವ ವಿಜಯ ವಿಠಲ । ಹರಿಯ ಕರುಣವನು ಪಡೆದವನು ಬಲುಧನ್ಯನು ॥೯॥

## ರೂಪಕತಾಳ

ಆ ಶಿಖೆಯಲ್ಲಿ ಬ್ರಹ್ಮನಾಮಕ ನಾರಾಯಣ । ಕೇಶದಲಿ ಪ್ರದ್ಯುಮ್ನ ತದಭಿಮಾನಿ ರುದ್ರ । ಕೇಶವ ಫಣಿಯಲ್ಲಿ ಬಲಗಣ್ಣಿನಲಿ ಸ್ತಂಭ । ವೇಷ ನಾರಾಯಣ ದಾಮರೂಪ ಲಕುಮಿ । ಆ ಸಮೀರನು ವತ್ಸರೂಪದಲಿಪ್ಪ ಉ । ಪಾಸನೆ ಸರ್ವ ದೇವತೆಗಳು ಮಾಳ್ಪರು । ಸುಶುಕ್ಲ ರಕ್ತ ನೀಲ ರೇಖೆಗಳಲ್ಲಿ । ವಸಿಷ್ಟ ಗೌತುಮ ವಿಶ್ವಾಮಿತ್ರರೆಂದು । ಈಶ ಇಂದ್ರ ಸೂರ್ಯ ನಾಮಕರಾಗಿ ಕ । ರಸಿ ಕೊಂಬರು ಕಾಣೊ ಉದಕಾಗಮದಲ್ಲಿ । ಲೇಸು ಭಾರದ್ವಾಜನಾಮಕ ಪರ್ಜನ್ಯ । ವಾಸ ವೂರ್ಧ್ವಯವೆ ಅಧೋಯವೆ ಪ್ರತಿಮೆ ಜೋ । ತಿಷಕ್ಕೆ ಅತ್ರಿ ಕಶ್ಯಪ ಕಪಿಲನಾಮಕಾ । ಕಾಶ ದೇವಾದ್ಯರು ಶೋಭಿಸುತಿಪ್ಪರು । ಈ ಸಮಸ್ತದ್ರವ್ಯ ಕಾಣಿಸಿಕೊಡುವ ಮಾ । ನಿಸ ವೊಗ ಹದಿನೆಂಟು ಒಂದು ಆನಿಯಮೋರೆ । ಏಸುಬಗೆಯಿಂದ ಮೆರೆವ ಸಪ್ತಾಂಗ ವಿಭೂಷಿತ ವಿಶ್ವನು ದಕ್ಷಿಣಾಕ್ಷಿಯಲ್ಲಿ । ಮೀಸಲ ಪದಾರ್ಥ ಶುಭ ರಸವನು- ಭವಿಪ । ಆಶೆಯಿಲ್ಲ ನಿತ್ಯ ತೃಪ್ತ ನಿರ್ದೋಷನು । ಈ ಸವ್ಯಗಣ್ಣಿನಲ್ಲಿ ವಾಮನ ದ್ವಯಗಣ್ಣಿ । ಗಾ ಸೂರ್ಯಗಭಿಮಾನಿಯಶ್ವಿನಿದೇವತೆಗಳು । ನಾಸಕ್ಕೆ ಸ್ಥಾನಿಗಳು ಅಲ್ಲಿ ಶ್ರೀ ಧನ್ವಂತ್ರಿ । ಶ್ವಾಸೋಚ್ಛ್ವಾಸದಲ್ಲಿ ಮುಖ್ಯಪ್ರಾಣ ಭಾರತಿ । ದ್ಯು ಸರಿತು ಮೊದಲಾದ ತೀರ್ಥಗಳು ಕಿವಿಯಲ್ಲಿ ಲೇಶಬಿಡದಿಪ್ಪರಲ್ಲಿ ತ್ರಿವಿಕ್ರಮ । ದೀಶಾ ದೇವತೆಗಳು ತದಭಿಮಾನಿಗಳು ।

ವೈಶ್ರವಣ ಚಂದ್ರಮ ಧರ್ಮಾದ್ಯರು ಕಾಣೋ । ದಾಸೋಹಮ್ಮೆಂದೆನಲು ತನ್ನನೆಕೊಡುವ ಜಗ । ದೀಶ ವಿಜಯ ವಿಠಲ ಸರ್ವರನಾಳುವಾ ॥೧೦॥

### ಧ್ರುವತಾಳ

ಗಲ್ಲ ಓಷ್ಠಗಳಲ್ಲಿ ಮಧುಸೂದನಾದಿಮೂರ್ತಿ । ಪಲ್ಲಿನಲ್ಲಿ ಓಜೋಭೃತ ಔರಸ । ಇಲ್ಲಿ ಪೇಳಿದವೆರಡು ಬಿಟ್ಟು ಉಳಿದ ಹದಿ । ನಾಲ್ಕು ಅಜಾದಿಗಳ ತಿಳಕೊಂಬೋದು । ಸೊಲ್ಲು ನುಡಿವ ಜಿಹ್ವೆಯಲ್ಲಿ ವರುಣದೇವ । ಅಲ್ಲಿ ಮತ್ಸ್ಯಾದಿ ಮೂರ್ತಿ ನಲಿದಾಡುವ । ಮೆಲ್ಲುವ ವದನದಲಿ ವನ್ಹಿ ಮತ್ತೆ ಭಾರ್ಗವ । ಸೊಲ್ಲಿನಲ್ಲಿ ಸರಸ್ವತಿ ನಾಮಕ ನಾರಾಯಣ । ಎಲ್ಲಾ ನುಡಿಗಳು ಉಮೆ ನಿಂದಾಡಿಸುವಳು । ಬಲ್ಲವರಿಗೆ ಇದೆ ಕರದರ್ಪಣ । ಉಳ್ಳ ಕಿರಿನಾಲಿಗೆಯಲಿ ಇಂದ್ರನಾಮಕ ಭಗವಾನ । ಅಲ್ಲಿಪ್ಪಕಕು ದಾಮೋದರ ದೇವತೆ । ಮೆಲ್ಲನೆ ಕಂಠದಲಿ ತೈಜಸ ವಿಶ್ವನಂತೆ । ಸಲ್ಲಲಿತವಾದ ಮನ ಮಂದಿರ । ಸಲ್ಲುವರದಕಭಿಮಾನಿ ದೇವತೆ ಶಚಿ । ವಲ್ಲಭಾದ್ಯರು ಉದಾನ ವಾಸಾ । ಸಲ್ಲದು ಎಚ್ಚರಿಕೆ ಸ್ವಪ್ನದಲಿ ಇಂದ್ರಾದ್ಯರಿಗೆ । ಬಲ್ಲಿದ ರುದ್ರನೊಬ್ಬಗೆ ಜಾಗ್ರತವೋ । ಬೆಳ್ಳಗಿರಿಯರಾಯ ತನ್ನ ರಾಣಿಯ ಸಹಿತ । ದಲ್ಲಿಯಭಿಮಾನಿಗಳು ಅಹಂ ಬುದ್ಧಿಗೆ । ದಲ್ಲಣ ಸರ್ಪಗಳಿಗೆ ಗರುಡ ಚಿತ್ತಕೆ ಚೇತನ । ದಲ್ಲಿಗೆ ಶೇಷದೇವರಿಗೊಡೆತನವೋ । ಎಲ್ಲರಿಗೆಧೊರೆ ವಿಜಯ ವಿಠಲರೇಯ । ಅಲ್ಲಲ್ಲಿ ತಾನೆ ನಿಂದ ವ್ಯಾಪಾರಮಾಡಿಸುವಾ ॥೧೧॥

### ತ್ರಿಪುಡಿತಾಳ

ಸಾರಭೋಕ್ತ ವಿಶ್ವ ತೈಜಸನೆ ಪ್ರಾಜ್ಞ । ಮೂರುತಿಗಳು ಮೂರು ಅವಸ್ಥಾಕ್ಕೆ । ಪ್ರೇರಣೆಕಾರರು ದಿನ ಪ್ರತಿದಿನದಲ್ಲಿ । ತೋರುವ ಕನಸು ಗಾಢನಿದ್ರಿಯು । ಧೀರ ವಿಶ್ವನು ಬಂದು ತೈಜಸನನ್ನು ಕೂಡೆ । ಹಾರುವದು ನರಗೆ ಬಾಹಿರ ಸ್ಮರಣೆ । ಕಾರಣಮಾಡುವ ವಾಸನಮಯ ಸೃಷ್ಟಿ । ವಾರುಣ ಹಯ ಛತ್ರ ಚಾಮರಗಳು । ಭೂರಿ ಧನ ಸತಿಸುತರು ನಾನಾಸೌಖ್ಯ । ತೋರುವ ಬಹು ಪರಿಕ್ಲೇಶಂಗಳು । ಆರೊಂದು ಜನುಮದ ಅನುಭವ ಮಾಡಿಸುವ । ಸಾರೆ ದೂರದಲ್ಲಿ ಯಿದ್ದವಸ್ತು । ಪಾರಗಣಿಸುವ ಕಂಠದಿಂದ ಈರ್ವರು । ಜಾರಿ ಪ್ರಾಜ್ಞನಲ್ಲಿ ಕೂಡಿಕೊಳಲು । ತೋರುವದು ಕನಸಿನ ವ್ಯಾಪಾರ ಮನಸಿಗೆ । ಭಾರಣೆ ನಿದ್ರೆಯಾಸಕ್ತನಾಗೆ । ಮಾರುತನು

ಶ್ರೀಹರಿಯು ತರ್ಕೈಸಿ ಜೀವಕ್ಕೆ । ಸ್ವರೂಪ ಸುಖಾಭಿವ್ಯಕ್ತಿಯಹದು । ಮೂರುತಿಗಳು ತಮ್ಮ ತಮ್ಮ ಸ್ಥಾನಕ್ಕೆ ಬರಲು। ಶಾರೀರವಾಡಿಸುವ ಎಚ್ಚರವ। ಈ ರೀತಿಯಲ್ಲಿ ಜೀವನ ಪ್ರಕಾಶವಸೆಳೆದು। ಈರ ಮೂರುತಿ ಗಳು ಮಾಳ್ಪರಯ್ಯಾ। ಆರು ಯೆಣಿಸುವರು ಹರಿಯ ವಿಚಿತ್ರವ। ಸಾರಿ ವೇದಗಳು ಹಿಂದಾಗುತಿವಕೋ। ಮೀರಿದವರಗಂಡ ವಿಜಯ ವಿಠಲರೇಯ ಕಾರುಣ್ಯನಿಧಿ ಕಾಣೊ ಕಂಡನೂತುರದಲ್ಲಿ ॥೧೨॥

## ಝುಂಪೆತಾಳ

ಸ್ಥೂಲಾಂಗುಟ ಪ್ರಮಾಣ ಮೂರುತಿ ಪ್ರಾಜ್ಞ । ಮೂಲೇಶನಂಗು-ಟಾಗ್ರ ಪರಿಮಿತನು। ಕೇಳಿ ಪ್ರಾದೇಶ ಪರಿಮಿತಿ ಪುರುಷನಾಮಕನು । ಕಾಲಕಾಲಕೆ ಬಿಡದೆ ಪೂಜಾರ್ಹರೂ। ಮೂಲ ಮುಖ್ಯ ಗುರುವು ಪವಮಾನ ದೇವತೆ। ಮೂಲೇಶನ ಪಾದಬಳಿಯು ವಾಸ। ವಾಲಗಮಾಡುವ ಸರ್ವೊಗ್ರ ವಾಗಿ ಹೀ। ಯಾಳದಿಂದಲಿ ಕರವಮುಗಿದು ನಿಂದು। ಬಾಳುವ ಜೀವನು ಪ್ರಾಣನಂಘ್ರಿಯರೇಣು। ತಾಳಿ ಆತನ ಪಾದ ಸಾಮಿಪ್ಯದಿ। ವ್ಯಾಳಿ ವ್ಯಾಳಿಗೆ ವಾಯು ಹಂಸಮಂತ್ರವ ಮೂರು। ಏಳುಸಾವಿರದಾರುನೂರ ಜಪಿಸಿ। ಆಳಾಗಿಯಿದ್ದ ಜೀವಕ್ಕೆ ಪುಣ್ಯತಂದೀವ। ಏಳಲಮಾಡುವ ಹರಿ ದ್ವೇಷಿಜನರ। ಖೂಳರಿಗೆ ಪ್ರಾಜ್ಞನು ಅನಿತ್ಯ ಸುಖವ ದಾ। ಶಾಳಪುಷ್ಪದ ಒಳಿಯಲಿ ಪಟಕಧರಳು। ಕೀಲಿಸಿದಂತೆ ಮಾಡುವನಲ್ಲದೇ ದೈತ್ಯ। ಜಾಲಕ್ಕೆ ಸುಖವಿಲ್ಲ ಪೊವರ್ಮ್ಯದರೂ। ಶ್ರೀಲೋಲ ನಾಭಿಯಲಿ ಅಜನಪಡದುದೇ ಸತ್ಯ ಮೂರ್ಲ್ಲೋಕ ಬಲ್ಲುದ್ದೈ (ದೇವರು) ಇವರು ತಮ್ಮ। ಆಳುತನವುಳ್ಳವರೇ ಪೊಕ್ಕಳಿಂದಲಿವಂದು। ಕೋಳಿಯನು ಪಡೆದರೆ ದೈವವೆಂಬೆ। ಹಾಳಾಗಿ ಹೋಗುವನು ಗತಿಯಿಲ್ಲ ನರಕದಲಿ। ಹೂಳುವರು ಯಮಭಟರು ತಿರುಗ ಗೊಡದೆ। ಫಾಲ ಲಿಪಿಯನು ತಿಳಿದು ಪೋದಿ ನಡೆಯದವನು। ಕಾಲ ಮೂರುತಿ ವಿಷ್ಣುವೆಂತಾಹನೋ। ಶೀಲಗುಣಸಂಪನ್ನ ವಿಜಯವಿಠಲರೇಯ ಆಲದೆಲೆಯಮೇಲೆ ಮಲಗಿದ ವಿನೋದಾ ॥೧೩॥

## ಮಟ್ಟತಾಳ

ಬಲಗಡೆ ಹಸ್ತದಲಿ ಮಧುಸೂದನ ಸಂಧಿ। ಗಳಲಿ ಕಪಿಲಾದಿ ಪಂಚ ಮೂರುತಿಗಳು। ಸಲೆ ಎಡ ಹಸ್ತದಲಿ ಶ್ರೀಧರನು ಸಂಧಿಗ। ಳಲಿ ಚರ್ವಾಂಗದಿ

ಈವನಲ್ಲಾ । ಒಂದುಕೊಟ್ಟರೆ ಮತ್ತೆ ಒಂದು ಕೊಡುವನಲ್ಲ । ಒಂದಕನಂತವ ಅನಂತಕೆ ಪೊಂದೀವಾ । ನಂದಮೂರುತಿ ರಾಮಗೋಪಾಲವಿಠ್ಠಲ । ಅಂದಿ ಕೈಗೆ ತೋರಿ ಅಂದದಂತೆ ಪೊಳೆವಾ ॥೪॥

## ತ್ರಿವಿಡಿ ತಾಳ

ಮಾಡುವ ಕರ್ಮಉಂಟು ನೋಡುವ ಕರ್ಮಉಂಟು । ಬೇಡುವ ಕರ್ಮಉಂಟು ಮಾಡಿಸುವದುಂಟು । ಮಾಡಿ ಮಾಡಿಸುವರು ಸಾಂಶ ಸುರಾದಿ ದಿವಿಜರು । ಮಾಡುವರೂ ಮಾತ್ರ ನಿರಂಶವ್ರೂ । ನೋಡುವರೊ ಉತ್ತಮರು ಕರ್ಮಾಧಮರೊ । ಬೇಡಿ ಮಾಡುವ ಕರ್ಮ ಸರ್ವ ಜೀವರಿಗಂಟು । ಕೂಡುವ ಮಲಗುವ ಓಡುವ ನಿಲ್ಲುವ । ಮಾಡುವ ನಾಲ್ಕು ಕರ್ಮದೇಹಿಗಳು । ಮಾಡಿಸುವ ಹರಿಯೆಂದು ತಿಳಿಯಬೇಕು । ಮಾಡಿಸುವರ ದಯ ಮಾಡುವರ ದಯ । ನೋಡುವರ ದಯ ಬೇಡು ನಿನಗೆ ಬೇಕು । ಮಾಡುವ ಕರ್ಮವು ಈ ಪರಿ ತಿಳಿಯದೆ । ಮಾಡಲು ಏನೇನು ಫಲಬಾರದು । ನಾಡನೆಲ್ಲವು ತಿರಿಗಿ ತೀರ್ಥಾದಿಗಳಮಿಂದು । ಮಾಡೆ ನಾನಾ ದಾನ ಯಜ್ಞಾದಿಗಳೆಲ್ಲ । ಕೂಡಿಸವು ಗತಿಗೆ ಎಂದೆಂದಿಗೂ । ಪಾಡಿದವರ ಪ್ರಾಣಾ ಗೋಪಾಲ ವಿಠ್ಠಲ । ಮಾಡಿ ಮಾಡಿಸುವಂಥ ಕರ್ತನರಿತು ಬಾಳು ॥೫॥

## ಅಟ್ಟತಾಳ

ಮುಕ್ತಾ ಅಮುಕ್ತಾ ಚೇತನದೊಳಗೆಲ್ಲ । ನಿತ್ಯಾನಿತ್ಯ ಜಡಗಳಪೊಳಗೆಲ್ಲ । ತತ್ತತದಾಧಾರಾ ಸತ್ಪ್ರವರ್ತಿಯೊ । ನಿತ್ಯ ಮುಕುತಾ ನಿರ್ಲಿಪ್ತನಿರಾಶ್ರಯಾ । ಸತ್ವಾದಿ ರಹಿತ ನಿತ್ಯಾನಂದ ಮೂರ್ತಿ । ಚಿತ್ರ ಚಾರಿತ್ರ ವಿಮಲ ಜ್ಞಾನಪೂರ್ಣ । ಭಕ್ತವತ್ಸಲ ಬಂಧಕ ಮೋಚಕ ದೇವಾ । ರಕ್ತ ಶುಕ್ಲ । ಶಾಮದಳವರ್ನಾ । ತತ್ತಳಿಸುವ ಹರಿ ಮೂರ್ತಿಯ । ಸುತ್ತ ಪರಿವಾರ ನಿಲ್ಲಿಸಿ ನಿನ್ನಯ । ಹೃತ್ಕಮಲದಲ್ಲಿ ನಿತ್ಯ ವಾಸವಾದ । ನಿತ್ಯಮೂರುತಿಯನು ಚಿತ್ತಜನಯ್ಯಾ ಸ । ಪೊರ್ತಮ ಹರಿಯ ಮತ್ತೆ ಪೇಳಿದಂತೆ ಭಗವಂತ ತದ್ರೂರೂಪಾ । ಕತ್ಯಂತ ಅಭೇದ ಚಿಂತಿಸಿ ತುತಿಸಿ । ಪ್ರತ್ಯೇಕ ಪ್ರತ್ಯೇಕಧಿಷ್ಟಾನಗಳಲ್ಲಿ । ಭಕ್ತಿ ಪೂರ್ವಕದಿ ಎತ್ತಿ ಕರವ ಮುಗಿದ । ತ್ಯಂತ ಮಹಿಮನೆ ನಿತ್ಯಕಾಯೊ ಎಂದು । ಉತ್ತಮರ ಸಂಗ ಜತ್ತಾಗಿ ಮಾಡಿಸ್ಸು । ಸತ್ಯಸಂಕಲ್ಪ ಗೋಪಾಲ ವಿಠ್ಠಲರೇಯಾ । ತುತ್ತ ಮಾಡಿಪ್ಪಂತೆ ಸಾಧನ ಮಾಡಿಪಾ ॥೬॥

### ಆದಿತಾಳ

ಎಂತೆಂತು ಬಿಂಬನ ಚಿಂತನೆ ಮಾಡಲು । ಅಂತಂತೆ ಬರುವನು ಪ್ರತಿ ಬಿಂಬಕ್ಕೆ ಸ್ವಾ । ತಂತ್ರವೊಂದು ಮಾತ್ರ ಹೊರತಾಗಿ । ಚಿಂತಿಸಿ ನೋಡಲು ಜೀವ ಚಿದ್ರೂಪನು । ಸಂತೋಷಾದಿಗಳಿಲ್ಲ ಹರಿಯಾಧೀನ ನಿ । ರಂತರ ಪರಾಧೀನ ಜೀವ ಸ್ವಾಮಿ । ಭೃತ್ಯ ನ್ಯಾಯವೆಂದು ಉಪಾಸನೆ ಎದುರಿಲಿ। ಚಿಂತಿಸಿ ಕರಮುಗಿದು ಚಿಂತನೆ ಮಾಡಲು । ಸಂತೋಷದಲ್ಲಿ ಪ್ರಾಣದ್ವಾರಾ। ಚಿಂತಾಯಕ ತಂತ್ರಮೂರ್ತಿ ತೋರಿ ಭವ । ಗ್ರಂಥಿಯ ಹರಿಸುವ ತಡವಿಲ್ಲದೆ । ಶಾಂತ ಮೂರುತಿ ನಮ್ಮ ಗೋಪಾಲ ವಿಠ್ಠಲ । ನಿಂತಲ್ಲೆ ನಿಧಾನವಾಗಿ ಉಣಿಸುವಾ

### ಜತೆ

ಚಲ ಅಚಲಗಳಲಿ ಈ ಪರಿಘೇನಿಸೆ । ಒಲಿವ ಗೋಪಾಲ ವಿಠ್ಠಲ ಇವಗೆ ಕರುಣದಲಿ ॥೮॥

## ಸುಳಾದಿ ೪೭

ಆಪ್ತ ವ್ಯಾಪ್ತನಾದ ಬಿಂಬನ ಗುಪ್ತ ಉಪಾಸನೆಕ್ರಮ.
ಜೀವಬಿಂಬನೇವೆ ಸಕಲ ಜಡ ತತ್ವಾದಿಗಳಲ್ಲಿ ಸಕಲ ಚೇತನರಿಗೆ ಬಿಂಬನಾಗಿ ಪ್ರವರ್ತಿಸುವ ಗುಣರೂಪ ಕ್ರಿಯಾದಿ ಬಿಂಬೋಪಾಸನೆ ವಿಷಯ ಸಕಲ ರಸವಿಭಾಗ ಬಿಂಬಾರ್ಪಣ.

### ರಾಗ ಕಾಂಬೋದಿ ಧ್ರುವತಾಳ

ಆವಾ ವಿಷ್ಣುನೆ ಜೀವದಂಗುಟ ಮಾತ್ರ ಮೂರ್ತಿ । ಆವಾ ವಿಷ್ಣುನೆ ಜೀವದಾಕಾರ ಮೂರುತಿ । ಆವಾ ವಿಷ್ಣುನೆ ಸರ್ವವ್ಯಾಪ್ತ ಮೂರುತಿ । ಆವಾ ವಿಷ್ಣುನೆ ಜೀವಕ್ಯಾವರ್ಕವಾದ ಮೂರುತಿ । ಆವಾ ವಿಷ್ಣುನೆ ಜೀವಾದಿಷ್ಠಾನ ದೇಹ ಮೂರುತಿ । ಆವಾ ವಿಷ್ಣುನೆ ಜಗದಾ ವ್ಯಾಪುತ ಮೂರುತಿ। ಆವಾ ವಿಷ್ಣುನೆ ಮೂಲಾದವತಾರ ಮೂರುತಿ । ಆವಾ ವಿಷ್ಣುನೆ ಮಧ್ಯ ಅಜಾದಿ ಮೂರುತಿ । ಆವಾ ವಿಷ್ಣುನೆ ಜೀವಾ ಸರ್ವವಿಶ್ವಾದಿ ಮೂರುತಿ । ಆವಾ ವಿಷ್ಣುನೆ ಅನಂತವತಾರ ಮೂರುತಿ । ಆವಾ ವಿಷ್ಣುನೆ ಜೀವದ ಪ್ರತಿಪಾದ್ಯ ಮೂರುತಿ । ಆವಾ ವಿಷ್ಣುವಿನ್ನಧೀನವಾಗದ ಠಾವಿಲ್ಲ ಎಲ್ಲಿನೋಡಾ। ಆವಾ ವಿಷ್ಣು ಸರ್ವಜ್ಞ ಸಾಕಾರ ಜ್ಞಾನಾನಂದಾ । ಯಾವತ್ತು ಏಕಮೇವಾ

ದೇವಾ । ಶ್ರೀವಿಷ್ಣು ನಮ್ಮ ಸ್ವಾಮಿ ಗೋಪಾಲ ವಿಠ್ಠಲ । ಪಾವನ್ನ ಮೂರುತಿ ಪರಮ ಪುರುಷ ನೋಡು ॥೧॥

## ಮಟ್ಟತಾಳ

ಪ್ರಥಿವಿ ಅಪ್ಪು ಅಗ್ನಿ ವಾಯುರಾಕಾಶವು । ತತು ತನ್ಮಾತ್ರಿ ಶಬ್ದಾದಿ ವಿಷಯಂಗಳು । ಜಿತ ತೈಜಸ ವೈಕಾರ ಸತು ಮಹಾ । ತತ್ವಾ ಹರಿಗೆ ಸ್ವರೂಪ ಭೂತಾ । ತತುಗಳು ಜಡವಲ್ಲ ಎಲ್ಲ ಆನಂದಮಯಾ । ಗತಿ ಕೊಡುವವು ಒಂದಕ್ಕೆ ಒಂದೊಂದೆ ಪೂರ್ಣಾ । ಖತಿಗೊಳಿಸುವವಲ್ಲ ಖಂಡ ಖಂಡವಲ್ಲಾ । ಚತುರವು ಇವು ಬಲು ಹರಿಯೆ ಇವು ಎನ್ನಿ । ಸತತ ತಾತನ್ನ ಸ್ವರೂಪಭೂತ ತತ್ವಪ್ರವೇಶವೆ । ಮತಿಯ ಪ್ರಕೃತಿ ಅಂಶಗಳಿಗೆ । ಸತತ ಬಿಂಬನಾಗಿ ಸವಿಯದೆ ಎಂದೆಂದು । ಕ್ಷಿತಿಯಲ್ಲಿ ಜೀವರಾಶಿಗೆ ಸಾಧನ ಮಾಳ್ಪ । ಪತಿತ ಪಾವನ ವಿಷ್ಣುಗೋಪಾಲ ವಿಠ್ಠಲ । ಸತತ ಕ್ರೀಡಿಯ ಮಾಳ್ಪ ಚೇತನ ತನದಿ ॥೨॥

## ರೂಪಕ ತಾಳ

ವಿಷ್ಣು ವರುಣ(ವರ್ಣ)ವಿನ್ನು ವಿಷ್ಣು ಕಾಲವು ನೋಡು । ವಿಷ್ಣುನೆ ಆಕಾಶ ಅವ್ಯಾಕೃತಕೆ ಬಿಂಬಾ । ವಿಷ್ಣುನೆ ಮಹದಾದಿ ವಿಷ್ಣುನೆ ಅಹಂಕಾರಿಕ । ವಿಷ್ಣು ವೈಕಾರಿಕ ವಿಷ್ಣುತೈಜಸವಿನ್ನು । ವಿಷ್ಣು ಪಂಚಮಹಾಭೂತ ವಿಷ್ಣು ತನ್ಮಾತ್ರಿಗಳು । ವಿಷ್ಣುನೇ ಕಾರ್ಯಕಾರಣ ತತ್ವ ಜಡಗಳಿಗೆ ಬಿಂಬ। ವಿಷ್ಣುನೇತತ್ವಾಭಿಮಾನಿಗಳಲ್ಲಿ ಬೇರೆ ತತ್ತ್ರದಾಕಾರನಾಗಿ ಇಪ್ಪರವೊಳಗಿನ್ನು। ವಿಷ್ಣುನೆ ಅವರವರ ಸತತ ಪ್ರಾವರ್ತಕನಾಗಿ । ಇಷ್ಟನಿಷ್ಟಗಳಿಗೆ ತೊಡಕ ದಿದ್ದು । ವಿಷ್ಣುನಾಮಕ ಚಲುವ ಗೋಪಾಲವಿಠ್ಠಲನ ಸರ್ವಾ೦ । ವಿಷ್ಣು ಮಯಂ । ಜಗತ್ತು ವ್ಯಾಪಿಸಿಪ್ಪ ॥೩॥

## ಝಂಪೆತಾಳ

ವಿಷ್ಣುನೆ ಇಪ್ಪ ತತ್ವರೂಪ ತಾನಾಗಿ । ಇಪ್ಪ ತತ್ವಗಳಿಗೆ ಬಿಂಬನಾಗಿ। ವಿಷ್ಣು ತಾನಿಪ್ಪದಾಶ್ಚರ್ಯವೆಂದೆನ್ನದಿರಿ । ವಿಷ್ಣುದಾಸರಿಗೆ ಸ್ವರೂಪ ಭೂತಾ । ಇಷ್ಟು ತತ್ವಂಗಳು ಜೀವ ಸ್ವರೂಪದಂತೆ। ಸ್ಪಷ್ಟವಾಗಿಪ್ಪದು ತಿಳಿ ದವರಿಗೆ। ಕಷ್ಟಬಡಿಸುವರೆಲ್ಲ ಎನ್ನೆ ಅನ್ಯಾಯ । ಪುಟ್ಟಿಸುವ ಒಂದೊಂದಾ ಭೇದವ । ನಷ್ಟವಾಗುವದಲ್ಲ ಜೀವರ ಸ್ವರೂಪ । ಬಿಟ್ಟುಹೋಗುವದಲ್ಲ

ಎಂದೆಂದಿಗೂ। ಸ್ಪಷ್ಟವಾಗಿ ಇದರ ಅನುಭವ ಎಂಬುವದು। ವಿಷ್ಣುದಾಸರೆ ಇದರ ವಿವರವು ಬಲ್ಲರು। ಇಷ್ಟವುೂರುತಿ ನಮ್ಮ ಗೋಪಾಲವಿಠ್ಠಲ। ಇಷ್ಟರಲ್ಲಿ ನಿಂತು ಹರಿ ಏನೇನುನೋಳ್ಪಾ ॥೪॥

ತ್ರಿವಿಡಿ ತಾಳ

ಭಿನ್ನವಾದ ವೃತ್ತಿರೂಪ ಸುಖದುಃಖವು। ಇನ್ನು ಸ್ವರೂಪನುಭವ ಉಂಟು। ಚಿನ್ಮಸಿನ ಮನಸಿನ ದ್ವಾರವಿನ್ನು ಅಭಿಮಾನದಲ್ಲಿ। ತನ್ನದೆಂದರಿವ ಭಿನ್ನವಾದ ದುಃಖವ। ತನ್ನ ಪ್ರಕಾಶ ಅಭಿಮಾನವಿದ್ದಲ್ಲೆಲ್ಲ। ತನ್ನದೆಂದೆ। ತಿಳಿವ ಅಭಿಮಾನದಿ। ಇನ್ನು ಹೀಗೆ ವೃತ್ತಿರೂಪ ದುಃಖವಿನ್ನು। ತನ್ನಭಿಮಾನದಿಂದಲೆ ಅನುಭವ। ಚನ್ನಾಗಿ ಲಿಂಗ ಭಂಗವಾಗುವ ತನಕ। ಇನ್ನು ಹೀಗೆ ಅನುಭವಿಪ ಜೀವನು। ಮುನ್ನೆ ವೃತ್ತಿರೂಪ ಸುಖವು ಮತ್ತೆ ಹೀಗೆ। ಇನ್ನು ಅನುಭವವೆಲ್ಲ ಒಂದೆ ನೋಡು। ತನ್ನದೆಂಬ ಅಭಿಮಾನ ಬಿಟ್ಟು ನಿರ್ಗುಣದಲ್ಲಿ। ಅನ್ನರಸ ಪಾನಂಗಳು ಎಲ್ಲ ಹರಿಯೆ ಉಣುವ। ವನೆಂದು ತಿಳಿದು ಉಂಬ ಜೀವರಿಗೆ। ಚಿನುಮಯ ಬಿಂಬ ತಾನುಂಡು ಎಲ್ಲ। ಭಿನ್ನರಸ ಸುಖ ವ್ಯಂಜಕಮಾಡಿ। ಆನಂದವನು ಇನ್ನು ಜೀವನಿಗೆ ಅಭಿವ್ಯಕ್ತಿಮಾಳ್ಪ। ಇನ್ನಿವನಿಗೆ ವಿಪರೀತ ದುಷ್ಟ ಜೀವನರಿಗೆ। ಇನ್ನು ದುಃಖ ಅಭಿವ್ಯಕ್ತಿಮಾಳ್ಪಾ। ಪುಣ್ಯಪಾಪಗಳೆರಡು ಜೀವಕೆ ಸಹಾಯವಾಗಿ। ತನ್ನದೆಂಬೊ ಮಾತು ಮಾತ್ರ ಇನ್ನುಪುಶಿಯು। ಖಿನ್ನನ(ನಾ) ಗ್ಯಾಡುವನು ಅಭಿಮಾನದಿ। ಅನಂತ ಗುಣಪೂರ್ಣ ಗೋಪಾಲವಿಠ್ಠಲ। ಚನ್ನಿಗನ ಮಹಿಮೆ ಚಿತ್ರವಿಚಿತ್ರವು ॥೫॥

ಅಟ್ಟತಾಳ

ಒಂದು ರಸದಲ್ಲಿ ಬಿಂದು ಉದರದಿ ಬಿದ್ದರೆ। ಇಂದಿರೆ ಉಂಟಲ್ಲಿ ವಿರಿಂಚಿ ಶಿವನುಂಟು। ಚಂದಾದಿ ಗರುಡ ಶೇಷ ಇಂದ್ರಾದಿ ಸುರರೆಲ್ಲ। ಹೊಂದಿರುವರು ತಮ್ಮ ತತ್ವದ ರಸ। ಇಂದಿರೇಶ ವಿಭಾಗವ ಮಾಡಿ ತರತಮ। ದಿಂದಲೆ ಆರಾರ ಭಾಗ ಪೊಂದಿಸಿ ಈವಾ। ಇಂದಿರಾ ದೇವಿಗಾವ್ಯಕ್ತ ರಸದಲಿ ಅಭಿಮಾನ। ಮಂದಜ ಜನಕಗೆ ಮಹಾ ತತ್ವರಸವಿನ್ನು। ಇಂದು ಮೌಳಿಗೆ ಅಹಂಕಾರ ರಸದಲ್ಲಿ। ಇಂದ್ರಾದಿ ಸುರರಿಗೆ ವೈಕಾರಿಕ ರಸ। ತಂದುಕೊಡುವ ತೈಜಸ ರಸ ತರಮ್ಯ। ದಿಂದ ಭೌತಿಕ ರಸ ಬಪ್ಪದು ಮನಜರ್ಗೆ।

ತಂದು ಕೊಡುವ ಒಂದರೊಳಗೆ ಎಲ್ಲ। ಒಂದೇ ವಿಷಯ ಬಹು ಮಂದಿಗೆ ಅನುಭೋಗ। ತಂದಿಪ್ಪದು ಪೃಥುವಿ ಗಂಧ ತನ್ಮಾತ್ರೆಯಂತೆ। ಮಂದ ಅಸುರ ದೈತ್ಯವೃಂದಕ್ಕೆ ಇದರೊಳು । ಗಂಧ ಬೇರೆ ಉಂಟು ಒಂದೆ ರಸದಲ್ಲಿ। ಮಂದಾಕಿನಿಯಲ್ಲಿ ಮೈಲಿಗೆ ವಸ್ತ್ರತೊಳಿದರೆ। ತಂದು ಕೊಡುವದು ತದ್ಭೂಷಣ ಆ ವಸ್ತ್ರಕ್ಕೆ। ಸುಂದರ ಮೂರುತಿ ಗೋಪಾಲ ವಿಠ್ಠಲ । ಒಂಧುವಾದನು ಸಾಧು ಜೀವರ್ಗೆ ॥೬॥

### ಆದಿತಾಳ

ದೇವಿಯಿಂದಲಿ ಕ್ರೀಡೆ ದೇವನಾಡುವ ತತ್ವ। ದೇವತೆಗಳನೆಲ್ಲ ಕಾವಲಿ ಇಟ್ಟನ್ನು । ಆವರ್ಣ ಪ್ರಕೃತಿಗಳಲಿ ತಾನಿಂತು। ತ್ರಿವಿಧ ಮೂಲರ ಜಗಕೆ ವೃಕ್ಷನಾಗಿ। ಶ್ರೀವಿಷ್ಣುನೆ ಅಲ್ಲಿ ವಿಟಪನಾಗಿ ಸರ್ವ । ಜೀವರಿಗಾಶ್ರಯನಾಗಿ ಪಾಲಿಸುವಾ। ಆವಾ ಈ ವೃಕ್ಷದ ಮೂಲ ಕಂಡವರಿಲ್ಲ। ದೇವದೇವೇಶನ ಲೀಲೆ ಎಷ್ಟೊ। ದೇವಿ ಲಕುಮಿ ಸಾಕಲ್ಯ ತಿಳಿಯದೆ ಶ್ರೀ। ಭಾವವನು ತಾನು ನಂದದೊಳು ಮುಣುಗಿ। ಶ್ರೀವರ ಪ್ರೇರಕನೆಂದು ತುತಿಸಿಯಿನ್ನು । ಭಾವೆ ಗಂಡನ ಕೊಂಡಾಡಿಹಳು । ಜೀವರು ತಮ ತಮ್ಮ ಯಾವತ್ತು ಶಕ್ತಿಲಿ ದೇವನ ಸ್ತುತಿಸಿ ಧೇನಿಸುವರು। ಗೋವರ್ಧನೋದ್ಧಾರ ಗೋಪಾಲ ವಿಠ್ಠಲನ್ನ । ದೇವನ್ನ ಮಹಿಮೆ ಬಲ್ಲವರಾರು ॥೭॥

### ಜತೆ

ಆಪ್ತ ಉಪಾಸನಿ ಗುಪ್ತದಿಯಿದುಮಾಡಿ। ಪ್ರಾಪ್ತನಾಗುವ ಗೋಪಾಲ ವಿಠ್ಠಲ ನಿಮಗೆ ॥೮॥

## ಗೋಪಾಲವಿಠ್ಠಲರ ಸುಳಾದಿ ೪೮

ಒಂದೇ ಅನಂತರೂಪ, ಅನಂತ ಒಂದೇ ರೂಪನಾದ ಹರಿಯ ಗುಣ, ರೂಪ ಕ್ರೀಯೆ, ಅಧಿಕಾರ ಭೇಧದಿಂದ ವಿಶ್ವರೂಪೋಪಾಸನಾ,

### ರಾಗ ಸಾರಂಗ ಧ್ರುವ ತಾಳ

ಒಂದೇ ರೂಪವು ನೋಡಾ ಅನಂತ ಪೂರ್ಣವಿನ್ನು। ಒಂದೊಂದು ಅವಯವವೆ ಪೂರ್ಣವಯ್ಯಾ। ಒಂದು ರೂಪದೊಳಗೆ ಅನಂತ ರೂಪಂಗಳು ಒಂದೊಂದು ರೂಪದಿಂದ ಭೇದಾಭೇದನಾಗಿಪ್ಪ। ಒಂದು ಧನುರ್ಧರ ಒಂದು

ಒಂದು ಅರಿಶಂಖಧರ। ಒಂದು ಚತುರ್ಭುಜ ಒಂದು ದ್ವಿ ಭುಜರೂಪ। ಒಂಡು ಚತುರ ಹಸ್ತ ಒಂದು ಸಾಸಿರ ಹಸ್ತ। ಒಂದು ಏಕಮುಖ ಒಂದು ಚತುರ್ಮುಖ। ಒಂದು ಸಾಸಿರ ಮುಖ ಒಂದು ಗಜಮುಖ। ಒಂದು ಮತ್ಸ್ಯಮುಖ ಒಂದು ಸೂಕರಮುಖ। ಒಂದು ಕ್ರೂರ ಮುಖ ಒಂದು ಶಾಂತಮುಖ। ಒಂದು ಶಾಮವರ್ಣ ಒಂದು ರಜೋವರ್ಣ। ಒಂದು ಪೀತ ವರ್ಣ ಒಂದು ಶುಭ್ರವರ್ಣ। ಒಂದು ಭಯಪ್ರದ ಒಂದು ಅಭಯಪ್ರದ। ಒಂದು ಅಣುವಾಗಿ ಪುನಃ ಒಂದೊಂದೆ ಮಹತ್ತಹ। ಒಂದು ಕುಳಿತಿಪ್ಪದು ಒಂದು ನಿಂತಿಪ್ಪದು। ಒಂದು ಕೆಲವು ಮಲಗಿ ಒಂದು ಕೆಲವು ಒಡ್ಯಾಟ। ಒಂದು ಕಡೆ ಸಂಹಾರ ಒಂದು ಕಡೆ ಸೃಷ್ಟಿಯು। ಒಂದು ಕಡೆ ಪಾಲಣೆ ಒಂದೆ ರೂಪದಲ್ಲಿನ್ನು। ನಿಂದು ನಾನಾ ವೈಚಿತ್ರನಾಗಿ ತೋರುವ ದೈವ। ಸುಂದರ ಮೂರುತಿ ಗೋಪಾಲ ವಿಠ್ಠಲ। ಒಂದಾನಂತಾನಂತರೂಪ ಅನಂತ ಒಂದೇರೂಪ।

## ಮಟ್ಟತಾಳ

ಒಂದು ರವಿಯ ತೇಜ ಒಂದು ದ್ವಿರವಿ ತೇಜ। ಒಂದಕ್ಕೊಂದು ಅಧಿಕ ಹತ್ತು ರವಿಯ ತೇಜ। ಒಂದೊಂದೆ ಬಲವಿಜ್ಞಾನ ಪೂರ್ಣವಾದ ರೂಪ। ನಿಂದಿವೆ ಮಲಗುವ ಮಲಗಿ ತಿರಗುವ। ಪೊಂದಿ ಕೊಡುವ ಏಕ ಇಂದ್ರಿಯ ಭೇದಗಳಿಲ್ಲ। ಮಂದ ಜನರ ಮನಕೆ ಮಹಾ ಅಲೌಕಿಕ। ಗಂಧಾದಿ ಶಬ್ದ ವೆಲ್ಲ ಸ್ವರೂಪ ಭೂತಾ। ಇಂದ್ರಿಯಂಗಳೆಲ್ಲ ಒಂದೊಂದೆ ಪೂರ್ಣವು। ಪೊಂದಿಪ್ಪವು ನೋಡಾನಂತ ಬೊಮ್ಮಾಂಡಗಳು। ಹಿಂದಿನ ಅತಿತ ಅನಾಗತ ವೆಲ್ಲಾ। ಒಂದೊಂದೆ ರೂಪದಿ ಹೊಂದಿ ಕೊಂಡಿಪ್ಪವು। ಒಂದು ಆದರು ಅಂತೆ ಕಂಡೆನೆಂಬವರಾರು। ನಂದ ನಂದನ ಕಂದ ಗೋಪಾಲ ವಿಠ್ಠಲ। ಒಂದು ತೋರುವ ತತ್ತ್ವತೈಸ್ಯಗ್ಯತೆಯನು ಸಾರ ॥೨॥

## ರೂಪಕ ತಾಳ

ಒಂದು ಕಡೆಯಲಿ ರಾವಣನ ಹನನ ಮಾಡುವ। ಒಂದು ಕಡೆಯಲಿ ತತ್ತ್ವಜ್ಞಾನ ಬೋಧಿಸುತಿಪ್ಪ। ಒಂದು ಕಡೆಯಲಿ ತುರುವುಗಳನು ಕಾಯುವನು। ಒಂದು ಕಡೆಯಲಿ ಕ್ರೂರ ಜನರ ಸದ ಬಡಿವು(ಯು)ವ। ಒಂದು ಕಡೆಯಲಿ ಕುರು ಪಾಂಡವರ ಕಡದಾಡಿಸುವ। ಒಂದು ಕಡೆಯಲಿ ಗೋಪ

ಸ್ತ್ರೀಯರ ಪ್ರೊಡನಾಟ । ಒಂದು ಕಡೆಯಲಿ ಗೋವರ್ಧನ ಗಿರಿಯನೆತ್ತಿಹ । ಒಂದು ಕಡೆ ಬ್ರಹ್ಮಾದ್ಯರಿಂದ ಪೂಜಿಸಿಕೊಂಬ । ಒಂದು ಕಡೆ ಕಂಸನ ಹನನ ಮಾಡುತಿಪ್ಪ ಒಂದು ರೂಪದಿ ಯಶೋದೆ ಮುಂದಾಡುತಿಪ್ಪ । ಒಂದು ಕಡೆ ಯಲಿ ಪಾಲು ಬೆಣ್ಣೆ ಕದ್ದದು ತಿಂದು । ಇಂದು ಮುಖಿಯರ ಮುಂದೆ ಇಲ್ಲೆಂದಾಡುತಿಪ್ಪೆ । ಒಂದು ರೂಪದಲ್ಲಿ ಈ ಪರಿ ಪರಿರೂಪ । ಛಂದದಿ ತೋರುವ ಒಂದೆರಡು ಎನಸಲ್ಲ । ಕಂದರ್ಪ ಜನಕ ಗೋಪಾಲ ವಿಠ್ಠಲ ತನ್ನ ಹೊಂದಿದವರ ಮನಕೆ ಒಂದಾನಂತಾಗಿ ತೋರ್ಪಾ ॥೩॥

## ಝಂಪಿತಾಳ

ಒಂದು ಕಡೆಯಲಿ ದ್ರೋಣ ಭೀಷ್ಮಾದಿಗಳನೆಲ್ಲ । ಕೊಂದು ಕೊಂದ ರ್ಜುನ ಕೊಲ್ಲೊ ನೀಯಂತಿಪ್ಪ । ಒಂದು ಕಡೆಯಲಿ ಅರಿಸೈನ್ಯಕೆ ಬಲವಾಗಿ। ಮುಂದರಿದು ಮತ್ತನರ ಮೋಹಗೊಳಿಸುತಲಿಪ್ಪ । ಒಂದು ರೂಪದಿ ಪಾರ್ಥ ನಿಗೆ ತತ್ವ ತಿಳಿಸುತ್ತ । ಬಂದ ಅರಿಗಳ ಅಸ್ತ್ರತಾನೆ ಧರಿಸುತಲಿಪ್ಪ । ಒಂದು ರೂಪದಲಿ ಅರ್ಜುನನ್ನ ಆಲಿಂಗಿಸಿ । ಬಂದ ಆಯಾಸಗಳ ಬಡಸವೆ ನಿಂತಿಪ್ಪ। ಒಂದು ರೂಪದಿ ದೇವದತ್ತ ಶಂಖವನೂದಿ । ತಂದೀವ ಬಲವ ಪ್ರತಿಕ್ಷಣಕೆ ಪಾರ್ಥನಿಗಿನ್ನು । ಮಂದ ಅಸುರರಿಗೆ ಇದೇ ಶಬ್ದದಿಂದ ಅವರ । ಕುಂದು ಮಾಡುವ ಬಲ ಒಂದು ರೂಪದಲ್ಲಿನ್ನು । ಒಂದೊಂದು ಅನಂತ ರೂಪನು ಆಗಿ । ಮುಂದರಿದು ಆ ಕುರು ಸೈನ್ಯ ಕೊಂದು ಕೊಂದ್ಹಾಕುತಿಹ । ಮುಂದಾ ಕಿನಿಯ ಜನಕ ಗೋಪಾಲ ವಿಠಲಗೆ ಹೀ । ಗೆಂದು ತಿಳಿದರ್ಚಿಪಗೆ । ಬಂಧ ನವ ಕಡಿವಾ ॥೪॥

## ತ್ರಿವಿಡಿತಾಳ

ಮತ್ಸ್ಯಾದಿ ಅಜಾದಿ ಕೇಶವಾದಿ ಚತುರಾದಿ ವಿಶ್ವಾದಿ ಹಯ ಶಿಂಶು ಮಾರ ಕಪಿಲ ವ್ಯಾಸ । ಸ್ವಚ್ಛವಾನಾನಂತ ರೂಪಂಗಳಲ್ಲವು । ನಿಚ್ಚ ನಿಚ್ಚ ಕೃಷ್ಣನಲ್ಲಿ ನಿತ್ಯವಾಗಿ । ಎಚ್ಚತ್ತಿಹವು ಕಾಣೊ ಲೇಶಸಂಶಯ ಸಲ್ಲಾ । ಅಚ್ಚ ನಿಟ್ಟಂತೆ ಮತ್ತೊಂದೆ ಪಟ್ಟದಲ್ಲಿನ್ನು । ಅಚ್ಯು ತನ್ನ ರೂಪ ಒಂದು ದುರ್ಲಭ ಪ್ರಬಲ । ನೀಜಕ್ಕೋಚ ವಿಲ್ಲಪ್ಪೊ ನಿತ್ಯ ವ್ಯಕ್ತಾ । ಅಚ್ಚು ಬೆಲ್ಲವು ಒಂದು ಅನಕಡೆ ತಿಂದರು । ಹುಚ್ಚು ಒಂದು ಕಡೆ ಹುಳಿ ಸೀಯು ಎನಿಸದೇ । ಮಚ್ಚರ ಜನರಿಗೆ ಮರಳುಗೊಳಿಸಿ ಹೀಗೆ । ನಿಚ್ಚವಾದ ನಿರಯ

ಪ್ರೊಂದಿಸುವ । ಸ್ವಚ್ಛ ಮೂರುತಿ ನಮ್ಮ ಗೋಪಾಲ ವಿಠ್ಠಲ। ಅಚ್ಚ ಕರುಣಿಕಾಣೊ ಆರ್ತ ಜನಕೆ ನಿತ್ಯ ॥೫॥

ಅಟ್ಟತಾಳ

ಅಣು ಅಣು ಪರಮಾಣು ಅತ್ಯಣು ಬಲು ಅಣು । ಘನ ಘನ ಘನ ರೂಪ ಘನತಾನು ಘನತಾನು। ಅಣು ರೂಪಾದಾ(ದ್ರವ್ಯ) ಮನಸ್ಸಿಗೆ ಮಂದನ್ನ । ಎಣಿಕೆ ಹಿಡಿದೆ ನೆನಲು ಮನಕೆ ನಿಲ್ಲುವದಲ್ಲಾ । ಘನರೂಪದಾ ದ್ರವ್ಯ ಆಕಾರ ದೊಳಗಿನ್ನು । ಅಣುವಾಗಿ ತೋರೋದು ಅವ್ಯಾಕೃತ ದ್ರವ್ಯ ಘನ ವ್ಯಾಪ್ತಿವುಳ್ಳದಾದರು ಸರಿಯೆವೆ। ಘನಹರಿ ದ್ರವ್ಯದಲ್ಲಿ ಅಣುವಾಗಿ ತೋರೋದು। ಚಿನುಮಯ ಹರಿತಾನು ಚಿದ್ರೂಪಕೆ ಬಿಂಬ। ಎನಸಲ್ಲಾ ಮನುಜಾ ಘನ ಸೋಜಿಗವುಂಟು। ಅನುವಾದ ಪಂಚ ಮಹಾಭೂತ ಅವ್ಯಕ್ತಕೆ। ಮನಸಿಜನಯ್ಯ ತಾ ಬಿಂಬನಾಗಿಪ್ಪನು । ಎಣಿಸಿ ಘೇಸಿಸಿಪ್ಪಂಗೆ ಎಲ್ಲಿಕ್ಕೆ ಹರಿಬಿಂಬ। ಘನ ಜಾಗ್ರತನಯ್ಯಾ ಗಣನೆಮಾಡನು ಅನ್ಯ। ಸನಕಾದಿಗಳೊಡಿಯಾ ಗೋಪಾಲ ವಿಠ್ಠಲ। ಅನಿಮಿಷರಿಗೆ ತಿಳಿಯಾ ಅಗೋಚರನಯ್ಯಾ ॥೬॥

ಆದಿತಾಳ

ಚತುರ ವಿಂಶತಿ, ತತ್ವ ಸ್ವರೂಪ ಭೂತವು। ಪತಿತ ಪಾವನನಾದ ಹರಿಯಲ್ಲಿಯಿಪ್ಪುದು। ತತು ತತು ರೂಪ ತದ್ವರ್ಣ ತದಾಕಾರ। ಗತಿಗೆ ನಿಯಾಮಕ ಸತತ ಬಿಂಬನಾಗಿ। ಖತಿ ಗೊಳಗಾದದ ಖಂಡಾ ಖಂಡನಾಗಿ। ಜಿತವಾದ ತನ್ನ ಸ್ವರೂಪದಿಂದಲೇ। ಇತರಾ ಪೇಕ್ಷೆಯು ಇಲ್ಲ ಈರ್ವರಿಂದಲಿ ಬಂದ। ಅತಿಶಯ ಬೇಕಿಲ್ಲ ಆಶ್ರಿತ ಜನಪಾಲಾ। ಜಿತವಾದ ಜಡಕ್ಕೆ ಬಿಂಬನಾದ ಬಳಿಕಿನ್ನು। ತತುವ ಜೀವರಿಗೆಲ್ಲಿ। ಬಿಂಬನಾಗೋವಾಶ್ಚರ್ಯ ಇತರ ಜೀವರಿಗೆಲ್ಲಿ ನಿಶ್ಚಯ ನಿಶ್ಯದಿ । ಗತಿ ಬೇಕಾದವನಿಗೆ ಇದೆ ಚಿಂತನೋಪಾಯ। ಇತರ ದೈವರ ಗಂಡ ಗೋಪಾಲ ವಿಠ್ಠಲ। ಚ್ಯುತ ದೂರ ನಿತ್ಯ ಆಶ್ರಿತ ಜನಪಾಲಾ ॥೭॥

ಜತೆ

ವಿಶ್ವರೂಪ ದರುದಶನಧಿಕಾರಿಗಳು ಅರಿದು । ವಿಶ್ವನಾಮಕ ಗೋಪಾಲ ವಿಠ್ಠಲ ಭಜಿಸಿ ॥೮॥

## ಗೋಪಾಲ ವಿಠ್ಠಲರ ಸುಳಾದಿ ೪೯

ಧ್ಯಾನವೇ ಮುಖ್ಯ, ಬಿಂಬಮೂರ್ತಿ ಧ್ಯಾನಕ್ಕೆ ಒಲಿಯೆ ಪ್ರಾರ್ಥನಾ, ಧ್ಯಾನೋಪಾಸನೆ ಮುಖ್ಯ ಧ್ಯಾನದೊಳಗೆ ಎಲ್ಲವೂ ಅಡಕ, ಸರ್ವಜ್ಞ ಸರ್ವಶಕ್ತಿಪ್ರದ ಯಾವತ್ತು ನಿನ್ನಲ್ಲೆ ಉಂಟು, ನಾನಾಸ್ಥಾವರ ಜನುಮಗಳಲ್ಲಿ ಬಂದುದು ನಿನ್ನ ಪೂಜೆ ಮಾನವಜನುಮದಲ್ಲಿಯ ದಶೇಂದ್ರಿಯ ಪ್ರವರ್ತಕನಾದ ಹರಿಯೆ ಧ್ಯಾನಕ್ಕೆ ನಿಲ್ಲೆಂದು ಪ್ರಾರ್ಥನೆ

### ರಾಗ ಭೈರವಿ ಧ್ರುವ ತಾಳ

ನಿಲ್ಲು ನಿಲ್ಲಯ್ಯಾ ದೇವಾ ನೀಲವರ್ಣದ ಸ್ವಾಮಿ। ಎಲ್ಲಿ ಪೋಗುತಯಿದ್ದಿ ಎನ್ನ ಠಕ್ಕಿಸಿ ಮುಂದೆ। ಸಲ್ಲದವನೆ ನಾನು ಸಾಕದಿದ್ದರೆ ನೀನು। ಬಲ್ಲಿದನೆ ಬಡವ ಬಡವ ಬಲ್ಲಿದನಯ್ಯಾ। ಎಲ್ಲ ಸಾಧನಗಳು ನಿನ್ನ ಬಳಿಯಲ್ಲುಂಟು। ಇಲ್ಲದ್ದೊಂದಿಲ್ಲ ಎನಗೆ ಇತ್ತ ನೀವೊಲಿದ ಮೇಲೆ। ಎಲ್ಲ ನಿನ್ನೊಳಗಡಕ ಯೋಚಿಸಲಾಗಿ ಇನ್ನು। ಕಲ್ಲು ಮೃದುವಾಗುವದು ಕಂಡ ಆಗಲಿ ನಿನ್ನ। ಹುಲ್ಲು ಪರ್ವತಭಾರ ಹರಿ ನಿನ್ನ ಕಾಣದಾಗ। ಎಲ್ಲಿ ಕೆಲ್ಲಿಯೊ ಆಗಿ ಎನಗೆ ತೋರುವದಿನ್ನು। ಗಲ್ಲ ಗಲ್ಲವ ಬಡಿದು ಗಂಟಲನೆ ಸೆಳೆದುಕೊಂಡು। ಗುಲ್ಲು ಎಬ್ಬಿಸ ದೋಡಿ ಪೋದವನಂತೆ ನೀನು। ಮೆಲ್ಲ ಮೆಲ್ಲನೆ ಮನಕೆ ಬಂದು ಸುಳಿದು ಪೋದರೆ। ಎಲ್ಲ ಸಂಪತ್ತು ಪೋಗಲಾಡಿಸಿ ಕೊಂಡವನು। ಎಲ್ಲಿತನಕ ಅವಗೆ ಕ್ಲೇಶವು ಆಗುವದೊ। ಇಲ್ಲಿ ಸಾದೃಶ್ಯ ಸ್ವಲ್ಪ ಆ ವಿಷಯದಲಿನ್ನು। ಎಲ್ಲ ಸುರರೊಡಿಯ ಗೋಪಾಲ ವಿಠ್ಠಲ। ಬಲ್ಲಿದ ನಿನ್ನ ಧ್ಯಾನ ಬಲ್ಲವಗನುಭೋಗಾ ॥೧॥

### ಮಟ್ಟತಾಳ

ಧ್ಯಾನ ಮಾಡಿದವ ಸ್ನಾನ ಮಾಡಿದವ। ಧ್ಯಾನ ಮಾಡಿದವ ದಾನ ಮಾಡಿದವ। ಧ್ಯಾನ ಮಾಡಿದವ ಮೌನ ಮಾಡಿದವ। ಧ್ಯಾನ ಮಾಡಿದವ ನಾನಾ ಕರ್ಮಗಳು। ತಾನು ಮಾಡಿದರ ನ್ಯೂನ ಒಂದು ಇಲ್ಲವು। ಧ್ಯಾನಕ್ಕೆ ಹರಿಯೆ ನೀನು ಬಾರದಿರೆ। ನಾನು ಕಂಡ ವಿಷಯವನ್ನು (ವನು) ಧೇನಿಸುವೆ। ಜ್ಞಾನ ಪೂರ್ವಕವಾಗಿ ಧ್ಯಾನ ಮಾಡುವನಿಗೆ। ಕಾಣದೊಂದುಯಿಲ್ಲ ಕರ್ಮಆದರೊಳಡಕ। ದೀನ ಜನ ಬಂಧು ಗೋಪಾಲ ವಿಠ್ಠಲ। ಧ್ಯಾನಕ್ಕೆ ಎನಗೆ ನೀನು ವಿಷಯನಾಗು ॥೨॥

## ರೂಪಕತಾಳ

ಆವಾವ ತೀರ್ಥವು ನಿನ್ನ ಬಳಿಯಲುಂಟು। ಆವಾವ ಕ್ಷೇತ್ರವು ನಿನ್ನ ಬಳಿಯಲುಂಟು। ಆವಾವ ತತ್ವವು ನಿನ್ನ ಬಳಿಯಲುಂಟು। ಆವಾವ ಸಜ್ಜನರು ನಿನ್ನ ಬಳಿಯಲುಂಟು। ಯಾವತ್ತು ನಿನ್ನಲ್ಲಿ ವುಂಟು ಯೋಚಿಸಲಾಗಿ। ಈ ವೇಳ್ಯ ಆ ವೇಳ್ಯ ಅನ್ನದೆ ಎಲೋ ದೇವಾ। ಪಾವನ ಪಾಪವು ಎಲ್ಲ ಶಕ್ತಿಗಳು। ದೇವಾ ನಿನ್ನಲ್ಲಿನ್ನು ತಾವಿಪ್ಪವು ನೋಡಾ। ಈ ವೇಳ್ಯಯಿತ್ತು ನೀ ನೋಡು ಯೋಚಿಸದೆ। ದೇವಾ ಒಬ್ಬರು ನಿಮಗೆ ಬೇಡವೆಂಬುವರಿಲ್ಲ। ದೇವಕ್ಕಿ ನಂದನ ಗೋಪಾಲ ವಿಠ್ಠಲ। ನೀ ವೊಲಿಯಿಲು ಎನಗಿಲ್ಲ ಒಂದಸಾಧ್ಯ ।੩॥

## ಝಂಪೆತಾಳ

ಏನು ಬಗೆ ಪೂಜೆಗಳು ನಿನಗೆ ವಾಡುವೆ ಎಂಬ್ಯಾ। ನೀನಿತ್ತು ಬಂದೆನಗೆ ವೋದ ವೋಲಕೆ ದೇವಾ। ನಾನಾ ಜಾಲ(ಜಲ)ಗಳಲ್ಲಿ ನಾನಾ ಯೋನಿಗಳೈದಿ। ನಾನು ಇದ್ದದನೆಲ್ಲ ಸ್ನಾನಂಗಳೂ ನಿನಗೆ। ನೀನು ಎನ್ನನು ಎಲ್ಲಿ ನಿಲಿಸಿದ ಸ್ಥಳವೆಲ್ಲ। ಶ್ರೀನಿವಾಸನೆ ನಿನಗ ಅದೆ ಪೀಠವು। ಧೇನು ಜನ್ಮಂಗಳಲಿ ಬಂದ ಕರದ ಪಾಲು। ಶ್ರೀ ನಾರಾಯಣಾ ನಿನಗೆ ಅಭಿಷೇಕವು। ನಾನಾ ಪರಿ ಪುಷ್ಪ ಸಿರಿ ತುಲಿಸಿ ಶಿರಿ ಗಂಧ ಮರ। ನಾನಾ ಜನುಮಗಳಾಗಿ ನಾನು ಬಂದುದುಯೆಲ್ಲ। ಶ್ರೀನಾಥ ನಿನಗೆ ಇವೆ ಪೂಜಿಗೆ ಆದೆನು। ನಾನಾ ವಸನವು ಜಡರೂಗ್ಮ(ರೂಹ)ಜನ್ಮಗಳಲ್ಲಿ । ನಾನು ಇದ್ದದೆನೆಲ್ಲ ನಿನಗೆ ಉಡಿಗಾಭರಣ। ಆನಿ ಕುದುರೆ ಅಂಡಜಾದಿಯೋನಿಗಳಲ್ಲಿ। ನಾನು ತಿರುಗಿದೆನೆಲ್ಲ ನಿನಗೆ ವಾಹನವಯ್ಯಾ। ನಾನಾ ಪದಾರ್ಥ ತಂಡುಲ ವೊದಲಾದವುಗಳು। ಏನು ಐದಿದವನೆಲ್ಲ ನಿನಗೆ ನೈವೇದ್ಯವು। ಭಾನು ಚಂದಿರ ಸಾಕ್ಷಿಯಾಗಿ ಮಾಡಿದ್ದೆ ದೀಪ। ನೀನು ಎನ್ನವನಾಗಿ ಇದ್ದು ಇದರೊಳಗೆಲ್ಲ। ಏನೇನು ಪರಿ ಪರಿ ಕರ್ಮ ವಾಡಿಸಿದದ್ದು। ಹೇ ನಾರಸಿಂಹ ಕಪ್ಪವು ನಿನಗೆ ಕಾಣೊ। ನೀನು ಮಂಗಳ ಮೂರ್ತಿ ಡಿಂಗರಿಗೆ ಬಲು ಸಾರ್ಥ। ನೀನಾಗಿ ಮಾಡಿಸಿದುದೆಲ್ಲ ನಿನಗೆ ಆರ್ತಿ। ಜ್ಞಾನ ಮಯಕಾಯ ಗೋಪಾಲ ವಿಠ್ಠಲರೇಯ। ನೀನಿತ್ತು ಬಾರೊ ನಿಜ ಭಕ್ತಜನರೊಡಿಯಾ ॥೪॥

### ತ್ರಿವಿಡಿತಾಳ

ಮಾನವಯೋಸಿಗಳು ಏನೇನು ಐದಿದವೆಲ್ಲ। ನಾನಾ ಬಗೆಯು ಪೂಜೆ ನಿನಗೆ ಸ್ವಾಮಿ। ನಾನು ನಿನ್ನನ್ನು ಬಿಟ್ಟು ಒಂದು ಕಾಲದಲಿಯುನ್ನು। ಏನಿಷ್ಟನೇನೊ ಚಲ್ವಚಿತ್ರ ಮಹಿಮಾ। ಕಾಣವೆ ಕೆಟ್ಟೆ ನಿನ್ನ ನಾನು ನನ್ನದು ಯಂಬೊ। ಹೀನ ಬುದ್ಧಿಯು ಮಾಯವು ಎನಗೆ ಪಚ್ಚಿ। ನಾನು ನೀನು ಎಂತೆಂಬೊ ಜ್ಞಾನವ ತಿಳಿಯದೆ। ಮಾನಸ ಪಶು ಪ್ಲೊ ನಾ ಏನಂಬಿನೊ। ನೀನೆ ಅಲ್ಲವೆ ಎನಗೀ ಮಂದ ಬುದ್ಧಿಯಿತ್ತವ। ಏನು ಎನಗೆ ಕೆಟ್ಟದೊಂದು ಇಲ್ಲ। ಏನಾದದಲ್ಲ ಹಿಂದೆ ನಾನಾ ಕರ್ಮಂಗಳೆಲ್ಲ। ಮಾನಸ ವಾಚಾ ಕಾಯಾ ಮಾಡಿದಷ್ಟು। ಶ್ರೀನಾಥ ನಿನಗೆ ಮತ್ತೀಗ ಪೊಪ್ಪಿಸುವೆನೊ ನಾನಲ್ಲ ಇದಕ್ಕೆ ಸ್ವಾತಂತ್ರನೆಂದು। ಏನು ಆದಷ್ಟು ಯೆಲ್ಲ ನೀನೆ ತೆಗೆದುಕೊಂಡು। ಹೀನನಾ ನೀನು ಸಾರ್ಥಕನಮಾಡು। ಭಾನು ಶತ ತೇಜ ಗೋಪಾಲವಿಠ್ಠಲ। ಕಾಣಿಸಿಕೊಂಡು ಕರ್ಮ ಕಾನನ ದಾಟಿಸೆನ್ನ ॥೫॥

### ಅಟ್ಟತಾಳ

ಎನ್ನ ದಶ ಇಂದ್ರಿಯಗಳು ನಿನ್ನ ವಿಷಯಕರಿಸಲಿ; ಎನ್ನ ಮನಸು ಬಂದು ನಿನ್ನಲ್ಲಿ ಎರಗಲಿ। ಅನ್ಯವೆಂದರೆ ಎನಗೆ ವಮನ ಸರಿ ಆಗಲಿ ನಿನ್ನನೆ ಹುಡುಕುತ ಎನ್ನ ಬುದ್ಧಿಯು ಇರಲಿ। ನಿನ್ನ ನೋಡಿ ನಲಿದಾಡಲೆನ್ನ ಚಿತ್ತ। ನಿನ್ನಲ್ಲ ದಿಲ್ಲೆಂಬೊ ಅಹಂಕಾರ ಎನಗಿರಲಿ। ಇನ್ನೇನು ಬೇಡುವದಿಲ್ಲವೊ ಹೇ ಸ್ವಾಮಿ। ನಿನ್ನದೆಲ್ಲ ಎಂಬುವದು ಪಾಲಿಸು। ಘನ್ನ ದಯಾನಿಧೆ ಗೋಪಾಲವಿಠ್ಠಲ। ನೀನಲ್ಲದರಿಯೆ ನಾ ಇನ್ನೊಂದು ಸುಖವ॥

### ಆದಿತಾಳ

ಮೂರು ದಿನಕೆ ಒಮ್ಮೆ ಆಹಾರವನು ಕೊಂಡು। ನೀರು ಮಾತ್ರವ ಕೊಟ್ಟು ನಿಲ್ಲಿಸಿ ದೇಹವ। ಆರು ಎನಗೆ ಹತ್ತದಂತಲಾದರು ಏನು। ನಾರಿ ಸುತರು ಸೇರದಂತಲಾದರುಮಾಡು। ಅ(ಆ)ರಿವೆ ರಿವರನ್ಯತ್ರರ ಕೂಡಿಸ ಧೋಗು। ಊರನೆ ಹೊರಡಿಸಿ ಕಾನನ ಸೇರಿಸು। ನಾರಾಯಣಾ ನಿನ್ನ ನಾನು ಬಿಟ್ಟವನಲ್ಲ। ಈ ರೀತಿ ಎನಗೆ ನೀ ಮಾಡದಿರು ಇನ್ನು। ಆರಾಭಾರಕ್ಕೆ ಸರ್ವ ಕಾರಣ ನೀನೆಂದು। ಶಾರೀರ ಪೊಪ್ಪಿಸಿ ಕರವ ಮುಗಿದೆ। ಘೋರ ಸಂಸಾರದ ಬೇರು ಕಿತ್ತುವದಕ್ಕೆ। ಭಾರಿಭಾರಿಗೆ ನಿನ್ನ ಸ್ಮರಣೆ

ಬಲವಯ್ಯಾ । ಭಾರತೀಶನೊಡಿಯ ಗೋಪಾಲವಿಠ್ಠಲ । ದೂರನೋಡದೆ ಮನಕೆ ಬಾರೊ ಸರ್ವದ ಸ್ವಾಮಿ ॥೭॥

**ಜತೆ**

ನೀನು ಧ್ಯಾನಕೆ ನಿತ್ಯ ನಿಲಿಕುತಲಿರು ಯೆಂದೆ । ಏನು ಅನ್ಯವನೊಲ್ಲೆ ಗೋಪಾಲವಿಠ್ಠಲ ॥೮॥

## ಗೋಪಾಲವಿಠ್ಠಲರ ಸುಳಾದಿ ೫೦

**ಭಗವದಪರೋಕ್ಷವಾಗಲು ಉಪಾಯ ತತ್ ಸಾಧನೆ, ಖಂಡಾಖಂಡ ಧ್ಯಾನದ ವಿಚಾರ, ಸಕಲ ಮೂರ್ತಿಗಳ ಗುಣರೂಪಕ್ರಿಯಾದಿಗಳ ಬಿಂಬೈಕ್ಯ ಧ್ಯಾನ ಮುಖ್ಯ**

**ರಾಗ ಮಾರವಿ ಧ್ರುವತಾಳ**

ಅಪರೋಕ್ಷವೆಂಬುವದು ಬಹುದೂರವಿಲ್ಲವಿನ್ನು । ಸ್ವಪರೋಕ್ಷದಾರಢ್ಯದಂತೀಲಿ ಯಿಪ್ಪುವದು । ಅಪವಾದದ ಮಾತಲ್ಲ ಆಲಿಸಿತಿಳಿವದು । ಕಪಟರಹಿತರಾದ ಕೋವಿದರೂ । ಶಪಥಮಾಡಲಿಬೇಕು ಸರ್ವೋತ್ತಮ ಹರಿಯೆಂದು । ಚಪಲ ಸಂದೇಹವನ್ನು ಬಿಟ್ಟು । ತಪಸು ಎಂದು ತಿಳಿದು ತ್ರಿವಿಧ । ತಾಪತ್ರಯವು ಅಪವರ್ಗಸುಪವರ್ಗ ದಾರಿ ಹಿಡಿದು । ಕುಪಿತವಾಗದೆ ದುಷ್ಟ ಉಕ್ತಿ ಸುವಚನಕ್ಕೆ । ಕ್ಲಿಪುತಕ್ಕೆ ಅಧಿಕ ಹ್ರಾಸ ಇಲ್ಲವೆಂದು । ಗುಪಿತಾದಲ್ಲಿ ಹರಿಯ ಗುಣಗಳ ಕೊಂಡಾಡಿ । ಸ್ವಪನ ಜಾಗ್ರತಿ ವ್ಯಾಪಾರಗಳ ತಿಳಿದು । ರಿಪು ಮಿತ್ರುಗಳವ್ಯಾಪಾರ ಹರಿಯೆ ಎಂದು । ಸಪುತ ಧಾತುಗಳನ್ನಮಯಾದಿ ಕೋಶಗಳು । ಸಪುತ ದಶ ಸಹಸ್ರ ದ್ವಿನಾಡಿಯಲಿ । ಗುಪಿತನಾಗಿದ್ದ ಹರಿಯ ಗೂಣರೂಪಕ್ರೀಯೆಗಳು । ಜಪಿಸು ಏಕೀಭೂತ ಬಿಂಬದಲ್ಲಿ । ಕಪಿಲ ಮೊದಲಾದ ಭಗವದವತಾರ । ತಪಮಾಡಿ ಚಿಂತಿಸು ಬಿಂಬಕ್ರೀಯಾ । ಗುಪಿತ ವ್ಯಕುತ ನಿತ್ಯಾ ಗೋಪಾಲವಿಠ್ಠಲ । ತಪಸಿಗೆ ಲಭ್ಯನಾಹ ಈಪರಿ ಚಿಂತಿಸೆ ॥೧॥

**ಮಟ್ಟತಾಳ**

ಒಂದು ಮೂರುತಿ ಒಂದೆರಡು ಮೂರ್ತಿ । ಪೊಂದಿ ಲಿಂಗದೇಹ ಯಿಪ್ಪುವ ಮೂರ್ತಿ । ಒಂದು ಮೂರು ಮೂರ್ತಿ ಅನಿರುದ್ಧ ಕಾಯ । ದಿಂದ ಒಳಹೊರಗೆ ವ್ಯಾಪ್ತವಾದ ಮೂರುತಿ । ಛಂದವಾದ ಹೃದಯಸದನದಲ್ಲಿ

ಯಿಪ್ಪವ ಮೂರುತಿ | ಒಂದೇಳು ದಳದಿ ಬಿಡದೆ ತಿರುಗುವ ಮೂರ್ತಿ | ಒಂದು ಹತ್ತು ಮೂರ್ತಿ ಚತುರವಿಂಶತಿ ಮೂರ್ತಿ| ಅಂದವಾದ ಐವತ್ತೊಂದು ಮೂರುತಿಗಳು | ಒಂದು ನವ ಮೂರುತಿ ಮತ್ಸ್ಯಾದಿಗಳನ್ನು | ವಂದಿಸಿರೋ ಕೃದ್ಧೋಲ್ಕಾದಿ ಮೂರುತಿಗಳು| ಒಂದು ಮೂರು ಮೂರ್ತಿ ವಟು ಜಾಮದಗ್ನಿ । ಸಂದಿಸಂದಿಗೆ ವ್ಯಾಪ್ತ ಮೂರುತಿಗಳ ತಿಳಿದು | ವಂದಿಸಿದರೆ ಎಲ್ಲ ಒಂದೇ ಮೂರುತಿ ಕಾಣೊ । ಇಂದಿರೆಯರಸ ಗೋಪಾಲವಿಠ್ಠಲ ರೇಯಾ । ವಂದಿಸಿದಂತೆ ತನ್ನ ವರ ಲಿಪ್ಪುವನು ಬಿಡದೆ ||೨||

**ರೂಪಕತಾಳ**

ಸಾಸಿರ ನಾಮಕ್ಕೆ ಸಾಸಿರ ಮೂರುತಿ । ಸಾಸಿರ ದಳದಲ್ಲಿ ವಾಸವಾದ ಮೂರ್ತಿ । ದಾಸೋಹಂ ಎಂದವಗೆ ಬಿಡದೆ ತೋರುವ ಮೂರ್ತಿ । ಲೇಸು ಹ್ರಾಸಗಳಿಗೆ ಹಿಗ್ಗಿ ಕುಗ್ಗದ ಮೂರ್ತಿ । ಕಾಶಿಗೆ ಬೆಲೆಯಾಗಿ ಕ್ರಯವಾಗದ ಮೂರುತಿ । ದೇಶದೇಶದಿ ವ್ಯಾಪ್ತವಾಗಿದ್ದ ಮೂರುತಿ । ನಾಶರಹಿತ ಸ್ವಪ್ರಕಾಶವಾದ ಮೂರುತಿ | ಶೇಷನ ಹಾಸಿಕೆಯಲಿ ಮಲಗಿಪ್ಪ ಮೂರುತಿ | ಈ ಸರ್ವ ಜಗವೆಲ್ಲ ವ್ಯಾಪಿಸಿದ ಮೂರ್ತಿ । ದೋಷರಹಿತ ಮೂರ್ತಿ ಗೋಪಾಲವಿಠ್ಠಲ | ವಾಸವಾಗಿ ಹೃದಯದೊಳಗಿಪ್ಪ ಮೂರುತಿ ||೩||

**ಝಂಪೆತಾಳ**

ಕಣ್ಣಿನೊಳಗೆ ಇದ್ದು ಕಾಣಿಸುವ ಮೂರುತಿ । ಕರ್ಣಂಗಳಲ್ಲಿ ನಿಂತು ಭಿನ್ನ ಭಿನ್ನ ಮೂರ್ತಿ ಬೀಜವಾದ ಮೂರ್ತಿ। ಅನ್ಯೋನ್ಯ ಆಶ್ರಯ ಆಗಿದ್ದ ಮೂರುತಿ | ತನ್ನ ನೆನೆವರಿಗೆ ತಗಲಿ ತೊಲಗದ ಮೂರ್ತಿ। ನಿನ್ನವ ನೆಂದವಗೆ ನೆಲೆಯಾದ ಮೂರುತಿ | ಚಿನ್ಮಯ ಮೂರುತಿ ಗೋಪಾಲ ವಿಠ್ಠಲ | ಅನ್ಯಜನರಿಗೆ ಅವೇದ್ಯನಾದ ಮೂರ್ತಿ ||೪||

**ತ್ರಿವಿಡಿತಾಳ**

ಏಸು ಜನ್ಮದ ಉಪಾಸನೆ ಮಾಡಲು | ವಾಸನ ರೂಪದಿ ಪೊಲಿದು ತೋರಿದ ಮೂರ್ತಿ| ಕೇಶವ ಮತ್ಸ್ಯಾದಿ ಅವತಾರ ರೂಪದಿ। ದಾಸ ಜನರಿಗೆ ಪೊಲಿದು ತೋರುವ ಮೂರುತಿ | ಈ ಶರೀರ ಹೃದಯಾಕಾಶದಲ್ಲಿ ನಿಂದು | ಸುಷುಪ್ತಿಲಾತ್ಮಗೆ ಸುಖವ ಉಣಿಸುವ ಮೂರುತಿ। ಭಾಸುರ ಮೂರುತಿ ಭವಗಳ ಕಳೆದಿನ್ನು। ವಾಸವಾಗಿ ನಿತ್ಯ ನಲಿದು ಆಡುವ ಮೂರ್ತಿ|

ವಾಸುದೇವಾಚ್ಯುತ ಗೋಪಾಲವಿಠ್ಠಲ। ಶ್ರೀಶ ಕೃಷ್ಣ ಎನ್ನ ಪೋಷಿಪ ಮೂರುತಿ ॥೫॥

## ಅಟ್ಟತಾಳ

ಸೃಷ್ಟಿಸ್ಥಿತಿಲಯ ಕಾರಣ ಮೂರುತಿ। ನಿಷ್ಟಾನಿಷ್ಟ ಪ್ರದವಾದ ಮೂರುತಿ। ಇಷ್ಟಾರಿಷ್ಟಕ್ಕೆ ತೊಡಕದ ಮೂರುತಿ। ಬಿಟ್ಟನೆಂದರು ಬಿಡಲೀಯದ ಮೂರುತಿ। ನಷ್ಟಜನರಿಗಿನ್ನು ವಂಚಿಸೊ ಮೂರುತಿ। ಮುಟ್ಟಿ ಭಜಿಸುವರಿಗೆ ಮುಂದೊಲಿದು। ಸ್ಪಷ್ಟವಾಗಿ ಸುಳಿದಾಡುವ ಮೂರುತಿ। ದಿಟ್ಟಿಸಿ ನೋಡಲು ಸರ್ವ ವಸ್ತುಗಳಿಗು। ಘಟ್ಟಿಯಾಗಿ ಬಿಂಬವಾಗಿದ್ದ ಮೂರುತಿ। ಇಷ್ಟ ದೈವವು ನಮ್ಮ ಗೋಪಾಲವಿಠ್ಠಲ। ಕಷ್ಟ ಸಂಸಾರದ ಕಡಲು ದಾಟಿಪ ಮೂರುತಿ ॥೬॥

## ಆದಿತಾಳ

ತಾರಕ ಕಾರಣವಾದ ಮೂರುತಿ। ತಾರಕ ಮಂತ್ರ ಉಪದೇಶಕ ಮೂರುತಿ। ಅರಬ್ಧಾಂತ ಗಾಮಿನಿಯಾದ ಮೂರುತಿ। ಭಾರಕರ್ತ ಅನಿಮಿತ್ಯ ಬಂಧು ಮೂರುತಿ। ನಾರಿ ದ್ರೌಪದಿ ಅಭಿಮಾನಕಾಯ್ದ ಮೂರುತಿ। ನಾರಿಯರ ವ್ರತಕೊಲಿದಂಥ ಮೂರುತಿ। ಪೋರರ ಒಡಗೂಡಿ ಆಡಿದ ಮೂರುತಿ। ನಾರಾಯಣರೂಪವಾದ ಶ್ರೀ ಮೂರುತಿ। ವಾರಿಜೋದ್ಭವಪಿತ ಗೋಪಾಲ ವಿಠ್ಠಲ। ಕಾರಣನಾಗೆನ್ನ ಕಾಯ್ವಂಥ ಮೂರುತಿ ॥೭॥

## ಜತೆ

ಖಂಡಾಖಂಡ ಧ್ಯಾನ ಬಿಡದೆ ನಿತ್ಯವು ಮಾಡಾ। (ಡಅ) ಖಂಡೇಶ ಗೋಪಾಲವಿಠ್ಠಲ ನಿನಗೆ ವೊಲಿವಾ ॥೮॥

## ಗೋಪಾಲವಿಠ್ಠಲರ ಸುಳಾದಿ ೫೧

### ಬಿಂಬನಾದ ಶ್ರೀಹರಿಯ ಭಕ್ತವಾತ್ಸಲ್ಯತೆ ಸ್ತೋತ್ರ ಪೂರ್ವಕ ಶ್ರೀಹರಿಯು ಕ್ರೀಯಾ ರೂಪೋಸನೆ ವಿವರಾದಿ

### ರಾಗ ಭೈರವಿ ಧ್ರುವತಾಳ

ಸೃಷ್ಟಿಗೊಡಿಯ ಕೇಳೊಂದೆಷ್ಟು ನಾ ತುತಿಸಲು। ದೃಷ್ಟಿಯಿಂದಲಿ ಎನ್ನ ಕಡಿಯ ನೋಡಲಿವಲ್ಲಿ। ಅಷ್ಟ ಸೌಭಾಗ್ಯವೆಂಬೊ ಎಷ್ಟು ಮದವೊ ನಿನಗೆ। ಘಟ್ಟ್ಯಾಗಿ ನೀನಲ್ಲಾ ದನ್ಯರಿಂದ ವೆಂದರೆ। ಸೊಟ್ಟ ತಿರುವಿ ಮೊಗ

ಅಟ್ಟವೇರುತಲದೆ। ಎಷ್ಟಿಲ್ಲವೆಂದು ಬಿಟ್ಟರಂಜುವನಲ್ಲಾ। ಘಟ್ಟಿ ಭಕುತಿ ಪಾಶಲಿ ಕಟ್ಟಿ ಎನ್ನುದರ ದೊ। ಳಿಟ್ಟು ಕೊಂಬೆನಯ್ಯಾ ಜಿಷ್ಣುಸಖನೆ ಕೃಷ್ಣ ಭ್ರಷ್ಟ ಎಂತೆಂದು ದೂರ ದೃಷ್ಟಿಲಿ ನೋಡಿದರೆ। ಬಿಟ್ಟುಕೊಡೊ ನಿನ್ನ ಭಕುತವತ್ಸಲನೆಂಬೊ ಬಿರುದು। ಅಷ್ಟ ಸಂಪತ್ತು ಮತ್ತಿಷ್ಟುಕೊಡೊ ಎಂತೆಂದು। ಕಷ್ಟಬಡಿಸಿ ನಿನ್ನ ಕಾಡಿ ಬೇಡುವದಿಲ್ಲಾ। ಕಷ್ಟಸಂಸಾರ ವೆಂಬ ಸುಳಿಯ ವೊಳಗೆ ಎನ್ನ। ಇಷ್ಟು ನೋಡೋದು ನಿನಗೆಷ್ಟು ಸುಖವೊ ಕಾಣೆೊ। ಮೆಟ್ಟಿ ತುಳಿಯೊ ಬೆನ್ನಟ್ಟಿ ಬಾಹೊ ದುರಿತಾ। ಕುಟ್ಟಿ ಬೀಸಾಡು ಬಲು ನಷ್ಟ ಸಂಸಾರ ಬೇರ। ಸೃಷ್ಟ್ಯಾದ್ಯಷ್ಟಕರ್ತಾ ಗೋಪಾಲ ವಿಠ್ಠಲರೇಯಾ। ಸ್ಪಷ್ಟರೂಪತೋರೊ ಮುಟ್ಟಿ ಭಜಿಸಲು ॥೧॥

## ಮಟ್ಟತಾಳ

ಭಕುತರಗಾಗಿ ನೀ ಜಗವಪುಟ್ಟಿಸಿದಯ್ಯಾ। ಭಕುತರಿಗಾಗಿ ನೀ ಅವ ತಾರ ಮಾಡಿದಯ್ಯಾ। ಭಕುತರು ನಿನ್ನನ್ನು ಭಜಿಸದಿದ್ದರೆ ದೇವಾ। ಸಕಲ ಲೋಕರು ನಿನ್ನರಹುವರೆಂತೊ। ಮುಕುತಿ ದಾಯಕ ಮೂಲ ದೈವ ವೆಂಬೋದು। ಸಕಲ ಲೋಕಕ್ಕೆ ಕರಿರಾಜ ತೋರಿಸಿದನು। ಉಕುತಿ ಗಳಿಂದ ಅರಸಲು ಬಾಹೋದು। ಪ್ರಕಟಮಾಡಿದಳಯ್ಯಾ ಶಕತಳು ದ್ರೌಪದಿ ಸಕಲರಲ್ಲಿ ನೀನು ವ್ಯಾಪಕನೆಂಬೋದು। ಭಕುತ ಪ್ರಲ್ಹಾದ ಇರುವು ತೋರಿಸಿದನು। ಭಕುತರಿಂದ ನೀನು ಭಕುತರಾಧೀನದೇವಾ। ಭಕುತ ವತ್ಸಲ ನಮ್ಮ ಲಕುಮಿಯರಮಣಾ। ಉಕುತಿ ಪತಿ ನಾಭಾ ಗೋಪಾಲ ವಿಠ್ಠಲರೇಯಾ। ಭಕುತರ ಮುಂದೆ ನಿನ್ನ ಯುಕುತಿ ನಡಿಯದಯ್ಯಾ ॥೨॥

## ತ್ರಿವಿಡಿತಾಳ

ಶೃಂಗಾರ ಗದ್ದುಗೆ ಬಂಗಾರಾಭರಣಿಟ್ಟು। ರಂಗ ವೊಲಿಯೊ ಎಂದು ಅಂಗೀಕರಿಸಲರಿಯೆ। ಮಂಗಳನೂರುತಿ ಮನವೆ ಕಳ್ಳಿರಪೀಠ। ಗಂಗಾ ಜನಕನೆಂದೆನಿಸಿ ಕೊಂಬೊದೆ ಸ್ನಾನ। ಅಂಗನೆ ದ್ರೌಪದಿ ಅಭಿಮಾನ ರಕ್ಷಕ ನೆಂಬ। ಶೃಂಗಾರ ಬಿರಿದೊ ವಸನಂಗಳು ನಿನಗೆ। ಅಂಗವೆ ಕೊರಡು ಶ್ರೀಗಂಧವೆ ತೇದಿಡುವೆನೊ। ಕಂಗಳೆರಡು ದೀಪ ಕರಉಭಯ ಚ್ಯಾಮರ। ಅಂಗದೊಳಿದ್ದಷ್ಟ ಕಮಲವು ಕುಸುಮವೊ। ಹಿಂಗದೆನ್ನ ಕಿಂಚಿತ್ತು ಭಕು ತಿಯೆ ನೈವೇದ್ಯ। ರಂಗಾ ದಿನದಿನದಿ ಮಾಡಿಸಿದ ಕರ್ಮವೆ ಕಪ್ಪವು।

ರಂಗ ಮಹಿಮನೆ ಜಠರಾಗ್ನಿಯೆ ಆರುತೀ ತು। ರಂಗವದನ ಸರ್ವಾಂಗ ಸಮರ್ಪಿಸಿ ಕ। ರಂಗಳು ಮುಗಿದೆ ಅಂತರಂಗದಿನಿಲ್ಲೊ ಸ್ವಾ। ಯಂಗಾಯನ ನಾಮಾ ಗೋಪಾಲ ವಿಠ್ಠಲರೇಯಾ । ಸಂಗವಿಡಿಸೊ ನಿನ್ನ ಡಿಂಗರಿಗ ರೊಡನೆ ॥೩॥

## ಅಟ್ಟತಾಳ

ಒಡಿಯ ನಿನಗೆ ಮೊರೆಯಿಡುತಲಿದ್ದರೆ ಎನ್ನ । ಕಡಿಯ ನೋಡಲುವಲ್ಲಿ ಬಡಿವಾರ ನಿನಗೆಷ್ಟು । ತಡಿಯದೆ ನಾನೊಂದು ನುಡಿಯ ನುಡಿವೆನಯ್ಯಾ । ಕಡು ಕುಷ್ಟ ನಾರುತ ಮಡುವಿನೊಳಗೆ ಸೇರು । ಬಿಡದೆ ಬೆಟ್ಟವಪೊತ್ತು ಕಡಲೊಳಗಿರು ಇನ್ನು । ಅಡವಿ ಸೂಕರಜನ್ಮ ಬರಲಿ ನಿನಗೆ। ಕೆಡಲಿ ನಿನ್ನ ರೂಪ ಕಡುಘೋರನಾಗೆಲೊ। ಒಡಲಿಗಿಲ್ಲದೆ ನೀನು ತಿರಕಿಯನೆ ಬೇಡು। ಕೊಡಲಿಯ ಪಿಡಿದಿನ್ನು ಅಡಿವಿಸಂಚಾರನಾಗೊ। ಮಡದಿಯ ಕಳಕೊಂಡು ಜಡಿಯಧರಿಸೊ ನೀನು। ತುಡುಗ ದನ ಕಾಯೆಂದು ನುಡಿಯಲಿ ಜನರೆಲ್ಲ। ಉಡೊ ವಸ್ತ್ರವಿಲ್ಲದೆ ಬತ್ತಲಾಗಿ ನಿಲ್ಲೊ। ಕಡು ವೇಗದಲಿ ನೀ ಕಲ್ಕಿರೂಪನಾಗೊ। ತಡಿಯದೆ ವರಗಳ ಕೊಡುವವನೆಂತೆಂದು। ನುಡಿದೆನೊ ನಾ ಇಂಥ ಬಿಡಿಮಾತುಗಳ। ಕಡು ದಯಾಸಾಗರ ಗೋಪಾಲ ವಿಠ್ಠಲ। ಒಡಿದು ಬಿಡೆನೊದೇವಾ ಬಡವರಾಧಾರಿ ॥೪॥

## ಆದಿತಾಳ

ಈಪರಿ ನುಡಿದರೆ ಪಾಪವೆಂಬಿಯಾ ಹರಿಯೆ। ಪಾಪವೆಲ್ಲದೊಂದೊ ನಿನ್ನ ವ್ಯಾಪಾರ ಇಂಥದೊ। ಪಾಪಗರಳಿನ ಕೂಪಾದೊಳಗೆ ಬಿದ್ದು ತಾಪಾರಾಗದೆ ನಿನ್ನ ಕೋಪದಿಂದಲಿ ನುಡಿದೆ। ಪಾಪಿ ಎಂತೆಂದು ಎನ್ನ ಹೋಪಾನೂಕಿದರೆ। ನೀ ಪತಿತಪಾವನನೆಂಬೊ ಬಿರುದುಂಟೊ ದೇವಾ। ಮೋಪರಾಗಿಹೆ ನಾನು ಕಾಮಕ್ರೋಧದಕೆಳಗೆ। ರಾಪುಮಾಡದೆ ದೋಷ ಉಷ್ಣೆಂದು ಹಾರಿಸು। ಕುಪಥವ ತಪ್ಪಿಸು ಸುಪಥವತೋರಿಸು। ಶ್ರೀಪತಿ ಎನ್ನ ಮೇಲೆ ನೀ ಪ್ರೀತಿಯನೆ ಮಾಡು। ಅಪಾರ ನಾಮಂಗಳು ಲೇಪಿಸೆನ್ನ ಜಿಂಹೆಗೆ। ಪಾಪಗಳಕಳಿಯೊ ದ್ರೌಪದಿಯ ಮಾನದೊಡಿಯ। ಭಾಪುರೆ ನಮ್ಮ ಗೋಪಾಲವಿಠ್ಠಲರೇಯಾ। ನೀ ಪರದೈವವೆಂದು ನಾ ಪಾದಪಿಡಿವೆನೊ ॥೫॥

### ಜತೆ

ಎಂದಿಗಾದರು ನಿನ್ನ ಬಳಿಗೆ ಬಾಹೊದೆ ಸತ್ಯಾ । ಇಂದೆ ಮುಂದಕೆ ಕರಿಯೊ ಗೋಪಾಲವಿಠ್ಠಲ ॥೬॥

## ಗೋಪಾಲವಿಠ್ಠಲರ ಸುಳಾದಿ ೫೨

**ಬಿಂಬನ ಗುಣೋತ್ಕರ್ಷಪೂರ್ವಕ, ಗುಣೋಪಾಸನೆ, ತತ್ಫಲ, ಹೃತ್ಕಮಲಸ್ಥ ಬಿಂಬಪೂಜಾ ಧ್ಯಾನಪ್ರಕಾರ ನಾನಾವತಾರ ಐಕ್ಯಚಿಂತನೆ**

### ರಾಗ ಭೈರವಿ ಧ್ರುವತಾಳ

ನಿನ್ನ ನಿರ್ದೋಷನೆಂದು ನಾ ನಿರ್ದೋಷಿ ಆಗುವೆ । ನಿನ್ನ ಸರ್ವಜ್ಞನೆಂದು ಜ್ಞಾನವಂತನಾಗುವೆ । ನಿನ್ನ ಬಲವು ಪೂರ್ಣನೆಂದು ನಾಬಲಿಷ್ಟನಾಗುವೆ । ನಿನ್ನ ಸುಖಪೂರ್ಣನೆಂದು ಇನ್ನು ನಾ ಸುಖಿಸುವೆ । ನಿನ್ನ ವ್ಯಾಪ್ತನೆಂತೆಂದು ಇನ್ನು ಶೋಕ ನೀಗುವೆ । ನಿನ್ನ ಸ್ವಾತಂತ್ರನೆಂದು ಎನ್ನ ಸ್ವಾತಂತ್ರಬಲಿಪೆ । ನಿನ್ನ ಅನಾದಿ ಎಂದು ಇನ್ನು ನಿತ್ಯ ನಾನಾಹೆ । ನಿನ್ನ ನಿರ್ಗುಣನೆಂದು ನಾ ನಿರ್ಗುಣನಾಗುವೆ । ಭಿನ್ನ ಕಾಮರಹಿತ ಗೋಪಾಲವಿಠ್ಠಲ । ನಿನ್ನಾಧೀನವು ದೇವಾ ಎನ್ನ ವಿಭವಾತಿಶಯಾ ॥೧॥

### ಮಟ್ಟತಾಳ

ಸ್ವಾಮಿಯೆಂದು ನಿನ್ನುಪಾಸನಿಯನು ಮಾಡಿ । ಸ್ವಾಮಿಯಾಗುವೆ ಸಯ್ಯಾ ಎನಗಿಂದವರರಿಗೆ । ಪ್ರೇಮನೆಂದು ನಿನ್ನುಪಾಸನಿಯನುಮಾಡಿ । ಪ್ರೇಮಪಡಿವೆನಯ್ಯಾ ಎನ್ನಿಂದುತ್ತಮರ । ಕಾಮಪೂರ್ಣನೆಂದು ನಿನ್ನ ವಂದಿಸಿ ಭಿನ್ನ । ಕಾಮರಹಿತ ಆತ್ಮ ಕಾಮವುಳ್ಳವನಾಹೆ । ಸಾಮಜ ವರದನೆ ಗೋಪಾಲವಿಠ್ಠಲ । ತಾಮಸ ಜನ ವೈರಿ ಆ ಮಹಾಗುಣಪೂರ್ಣಾ ॥

### ರೂಪಕತಾಳ

ಶುದ್ಧಾತ್ಮನೆಂದು ಅಶುದ್ಧ ಪದಾರ್ಥದಲಿ । ಇದ್ದವ ನಾನಿನ್ನ ಬುದ್ಧಿಂದ ಕೊಂಡಾಡಿ । ಅಧ್ಯಾತ್ಮ ಮೊದಲಾದ ತ್ರಿವಿಧ ತಾಪಂಗಳು । ಒದ್ದು ನಾ ಬಿಡುವೆನು ನಿನ್ನ ವಂದಿಸಿ । ಉದ್ಧಾರಕ ಸರ್ವ ಜಗಕೆ ನೀನೆಂತೆಂದು । ಉದ್ಧರಿತನಾಗುವೆ ದಿನದಿನ ನಿನ್ನಿಂದ । ಮಧ್ಯ ಆದಿ ಅಂತ್ಯ ರಹಿತನೆಂದು ನಿನ್ನ ತುತಿಸಿ । ಶುದ್ಧವಾದ ನಿನ್ನ ಲೋಕದಿ ಹೊಂದಿರುವೆ । ಭೇದ್ಯ ಭೇದ್ಯ ರಹಿತನೆಂದು ನಿನ್ನ ತುತಿಸಿ । ಭೇದಾ ಭೇದಗಳಿಗೆ ದೂರನಾನಾಗಿರುವೆ ।

ಭದ್ರಮೂರುತಿ ಚಲುವ ಗೋಪಾಲವಿಠ್ಠಲ । ಸಾದ್ರಶ್ಯ ರಹಿತನೆಂದು ಧನ್ಯನಾನಾಗುವೆ ॥೩॥

## ಝಂಪೆತಾಳ

ಜನನ ಮರಣ ರಹಿತನೆಂದು ನಿನ್ನನ್ನು ಭಜಿಸಿ। ಜನನ ಮರಣಗಳಿಂದ ದೂರನಾಗುವೆನಯ್ಯಾ। ತನವು ಅಪ್ರಾಕೃತನೆಂದು ನಿನ್ನ ತಿಳಿದೆನ್ನ। ತನುವಿನ ಭ್ರಮಣತ್ವನೆಲ್ಲ ನೀಗುವೆನಯ್ಯಾ। ನಿನಗೆ ನಿನ್ನವತಾರ ಕೈಕ್ಯವನು ಚಿಂತಿಸಿ। ತೊನಗದಾನಂದದಲ್ಲಿ ನಿನ್ನ ವಿಷಯಕರಿಸುವೆ। ನಿನಗೆ ನಿತ್ಯತೃಪ್ತ ಅನಿದ್ರನೆಂದರಿತು। ಎನಗಿಪ್ಪಹಸಿವಿ ತೃಷಿ ನಿದ್ರಿಗಳ ನೀಗುವೆ। ಅನಿಮಿಷರೊಡೆಯ ಗೋಪಾಲವಿಠ್ಠಲ ಎಂತು। ನೆನವುವರು ನಿನ್ನವರ ಗುಣದಂತೆ ಗುಣವೀವೆ ॥೪॥

## ತ್ರಿವಿಡಿತಾಳ

ತನು ಹೃದಯಾಕಾಶ ವನಜಮುಂಡಲದಲ್ಲಿ। ದಿನಕರನಂತೆ ತಾ ಹರಿ ನಿಲ್ಲಿಸಿ। ಘನ ಜ್ಞಾನವೆಂಬ ಕಿರುಣಗಳಲ್ಲಿ ಪಸರಿಸಿ। ಮನವೆಂಬ ರಥವೇರಿ ತಿರುಗಾಡುತಾ। ಅನುವಾದ ಬುದ್ಧಿಯನು ಅರುಣನ ಸಾರಥಿಮಾಡಿ। ಘನವಾದ ಭವಾಂಬುಧಿ ವಣಗಿಸುವ। ದಿನ ದಿನ ತನ್ನ ನೂತನ ಧ್ಯಾನವನ್ನೆ ನಿತ್ತು। ಜನನಿಯ ಮೊಲೆಹಾಲು ಉಣಿಸನಯ್ಯಾ। ತನು ಸಂಬಂಧಿಗಳಂತೆ ಬಂಧು ಅಲ್ಲವು ಕಾಣೊ। ಅನಿಮಿತ್ಯ ಬಾಂಧವ ಅಪ್ರಮೇಯಾ। ಸನಕಾದಿಗಳೊಡೆಯಾ ಗೋಪಾಲ ವಿಠ್ಠಲ। ಅನುವಾಗಿ ಅವರವರ ಗುಣದಂತೆ ಉಪಾಸ್ಯಾ ॥೫॥

## ಅಟ್ಟತಾಳ

ದುಃಖಿಷ್ಟರಿಗೆ ದುಃಖ ವ್ಯಕ್ತಿಮಾಡುವನಾಗಿ। ದುಃಖಿಯೇತೆಂದು ತಾ ಕರಿಸಿಕೊಂಬುವನಯ್ಯಾ। ರಕ್ಕಸರಿಗೆ ನೀಚರ ಮಾಡೋದರಿಂದ। ಚೊಕ್ಕ ತಾ ಅವರನೆಂತೆಂದು ಬಂಧನೆನಿಸಿಕೊಂಬ। ದಿಕ್ಕಾಗಿ ಅವರವರ ಸಾಧ್ಯ ಸಾಧನ ಕರ್ಮ। ವ್ಯಕ್ತಿ ಮಾಡೋದರಿಂದ ಬಾಧ್ಯ ಬಾಧಕನೆಂಬ। ಉಕ್ತಿಲಿ ಕರಿಸಿಕೊಂಬುವ ಹೇಯತ್ವಗಳಿಂದ। ಲಕ್ಕುಮಿ ಪತಿ ಆವ ದಾವಾ ನಿಷೇಧವಿಲ್ಲಾ। ಭಕ್ತವತ್ಸಲ ದೇವ ಗೋಪಾಲ ವಿಠ್ಠಲ। ಸಿಕ್ಕದೆ ಮನೆ ಮನೆ ತುಕ್ಕನ್ನತ ಚರಿಸುವ ॥೬॥

## ಆದಿತಾಳ

ಕಾರಕ ಹರಿ ಮುಖ್ಯ ಕಾರಣ ಕರ್ತಾ । ಮಾರ(ಅರಿ)ರಾರಿಬೊಮ್ಮ ಕಾರಣ ನೆನದಿರಿ।ಆರಾರಿ ಗೊರಗಳು ನೀವರು ಇವರೆಲ್ಲ। ಬಾರದಿದ್ದರೆ ಸರಿ ಹರಿತರಿದೊಟ್ಟುವ । ಮೀರ ಶಕ್ಯರು ಅಲ್ಲ ಈ ಶಕ್ತಿಯು ಒಬ್ಬ । ರಾರಾದರು ವಿಚಾರಿಸೆ ನೋಡಲು।ಭಾರ ನೀಹೇ ಭೂದೇವಿಯಾ, ಗೇಳ್ವಿವ।ತಾರ ಮಾಡುವಜೀವರ ಉದ್ಧರಿಸಲು ಈರೇಳು ಜಗವ ಸೃಷ್ಟಿಸಿ ಒಡನಿದ್ದು।ಆರ ಭಾರಕೆಯೆಲ್ಲ ಕಾರಣನಾಗಿಹ । ಈ ರೀತಿ ಸೃಷ್ಟಿ ಸ್ಥಿತಿಲಯ ವ್ಯಾಪಾರೆಲ್ಲ । ಮಾರನಯ್ಯಗೆ ಕ್ರೀಡಿನಾರಿಗೆ ಸಂಪತ್ತು । ಮೂರುವಿಧ ಜೀವರಗೆಲ್ಲ ಭೋಗ । ನಾರಾಯಣನ ವ್ಯಾಪಾರವಯ್ಯಾ । ವಾರಿಜ ಭವನಯ್ಯ ಗೋಪಾಲ ವಿಠ್ಠಲ । ದೂರಕೆ ದೂರತಿ ಸಾರೆಗೆ ಸಾರ್‍ಯಾ ॥೭॥

## ಜತೆ

ಎಂತೆಂತು ತನ್ನನ್ನು ಭಜನಿಯ ಮಾಳ್ಪರಿಗೆ । ಅಂತಂತೆ ಆಗಿ ಪೊಳವಾ ಗೋಪಾಲ ವಿಠ್ಠಲ ॥೮॥

## ರಾಮಚಂದ್ರ ವಿಠ್ಠಲರ ಸುಳಾದಿ ೫೩

ಪಿಂಡಾಂಡ ಬೊಮ್ಮಾಂಡದ ಸಮನ್ವಯ ಪೂರ್ವಕ ಅಧ್ಯಾತ್ಮ ಧ್ಯಾನೋಪಾಸನಾ ವಿವರ

### ರಾಗ ಮಾರವಿ ಧ್ರುವ ತಾಳ

ಸುಜನರೆಲ್ಲರು ಹರಿಯ ಪೂಜೆಯ ವಿವರವ ಕೇಳಿ । ತ್ರಿಜಗದೊಡಿಯ ಹರಿ ಬೇಗ ವೊಲಿವಾ । ಸೃಜಿಸಿ ಭೂಮಿಯ ಮೇಲೆ ದುಃಖ ಇನ್ನೆಲ್ಲಿದೂ, ನಿಜವಾಗಿ ಮುಕುತಿಯ ಕೊಡುವ ಬೇಗಾ । ಗಜರಾಜ ವರದನು ದೇಹಾಂಡದಲಿ ಸೃಷ್ಟಿ । ಅಜಾಂಡದಲಿದ್ದವಷ್ಟು ಮಾಡಿಯಿಪ್ಪ । ದ್ವಿಜರನುಗ್ರಹದಿಂದ ಹರಿ ಪ್ರೇರಣೆಯಿಂದ । ನಿಜಗುರುಗಳ ಪ್ರಸಾದದಿಂದ। ಭುಜಗಾ ದ್ವಿಜ ರುದ್ರಾದಿ ಸಕಲ ವಿಭುಧರಿಗೆ। ನಿಜ ಗುರುವಾದ ಪೂರ್ಣ ಪ್ರಜ್ಞರೇ। ಸೃಜಿಸಿದ ಜ್ಞಾನದಿ ನುಡಿವೆ ನಲ್ಲದೆ ಎನಗೆ । ಭಜನೆ ಮಾಡಲು ಲೇಶ ಸ್ವಾತಂತ್ರವೇ । ಅಜನ ಜನಕರಾಮಚಂದ್ರ ವಿಠ್ಠಲನ್ನ । ಯಜಿಸುವ ಉಪಾಯ ನಾನರಿಯೆ ॥೧॥

ವರ ಓಂಕಾರ ಘಂಟಾನಾದವುಂಟು। ಸರಸಿಜನಾಭ ರಾಮಚಂದ್ರವಿಠಲಗೆ । ನಿರುತ ಸೇವಿಸುವರು ದೇಹದೊಳಗೆವುಂಟು ॥೫॥

### ಧ್ರುವತಾಳ

ಮಡದಿ ಬುದ್ಧಿ ಭಕುತಿ ಎಂಬ ಸುತರನ್ನ । ಪಡದು ಪೂಜಿಸುವದು ಹರಿ ಪ್ರತಿಮೆ । ಪೊಡವೇಶ ಹರಿ ಎಂಬ ಜ್ಞಾನ। ಷಡುರಸ ಧೂಪಾದೀಪ ಪುಷ್ಪ ಸಮರ್ಪಿಸಿ। ಮಡದಿ ಮಕ್ಕಳಿಂದ ಅನಕೂಲ ಮಾಡಿಸಿ। ಮೃಡ ವಂದಿತನ ಪಾದ ಪೂಜಿಸಿರಿ । ಬಡವರಿಗೆ ವೊಲಿವ ರಾಮಚಂದ್ರ ವಿಠ್ಠಲ । ಕಡುಸುಖ ಪೂರ್ಣ ಕೊಟ್ಟಂತೆ ಕೊಂಬನಯ್ಯಾ ॥೬॥

### ತ್ರಿವಿಡಿತಾಳ

ವೈಲಿಗೆಯಿಂದ ಪೂಜೆಯ ಮಾಡಬಾರದು ಮಡಿವಂತನಾಗಿ ತಾ ಬಾಳಬೇಕು । ಭೂಲೋಕದೊಳಗೆ ಅಂತಿಜರನ ಮುಟ್ಟಬಾರದು ದೇಹ ದೊಳಗೆ ಹೊಲೆ ಕೋಪವಯ್ಯಾ। ವೇಳೆ ವೇಳೆದಲಿ ಕೋಪಕ್ಕೆ ದೂರಾಗಿ ಬಲು ಸಂತೋಷದ ಸ್ನಾನ ಮಾಡಬೇಕು। ಸೀಲಾ ಚಾರರಿಗೆ ವ್ಯಭಿಚಾರ ಸಲ್ಲದು ಈ ದೇಹದಲ್ಲಿ ವ್ಯಭಿಚಾರ ವುಂಟು । ಬಾಲ ತನದಿ ಅಂತ್ಯಕಾಲ ಪರಿ ಪರಿಯಂತ। ಕಾಲರ ಘಳಿಗೆ ಬಯಕೆ ಸಲ್ಲದೊ। ನೀಲ ಮೇಘಶ್ಯಾಮ ರಾಮಚಂದ್ರ ವಿಠಲನ ಫಲ ಬೇಡದಲೆ ಭಜಿಸಬೇಕು ॥೭॥

### ಅಟ್ಟತಾಳ

ಜ್ಞಾನಾನಂದ ಪೂರ್ಣನಿತ್ಯ ಸುಖಪೂರ್ಣ । ವೇಣು ಗೋಪಾಲ ಅಗ ಣಿತ ಗುಣ ಪರಿಪೂರ್ಣ। ವಾಣಿ ಜನಕ ಬೊಮ್ಮಾದಿಗಳಗಾಗಮ್ಯ। ಮಾನ ವರ ಪೂಜೆಯಿಂದಲಿ ತೃಪ್ತನೆ। ಶ್ರೀನಾಥ ಸ್ವರವರ್ಣ ಚರಾ ಚರಾದಿಗಳಿಗೆ। ಪ್ರಾಣದೊಳು ನಿಯಾಮಕನು ತಾನು । ಹೀನರಿಗೆ ಅಲ್ಪರಿದು ಹರಿಯ ಪೂಜಿಪೆನೆಂದು। ನೀನು ತರಬೇಡ ಹರಿ ಬಡವನಲ್ಲಾ। ಧ್ಯಾನ ಮಾತ್ರ ದಿಂದ ತುಷ್ಟಿಬಡುವನು ಶ್ರೀಶ। ದೀನ ವತ್ಸಲ ರಾಮಚಂದ್ರ ವಿಠಲಾ ॥೮॥

### ಆದಿತಾಳ

ಸಕಲ ಕರ್ಮಗಳನ್ನು ಮಾಡಿ। ಅಕುಟಿಲಾಗುವದೆಂತೊ। ಅಕುಟಿಲ ನಾಗಿ ಸಕಲ ಪರಿಯಲ್ಲಿ ಹರಿಯ। ಭಕುತರ ಪಾದವೆ ನಂಬೊ ಪರಿ ಪರಿ। ಲಕುಮಿ ವಲ್ಲಭನ ವರ ಕರುಣ। ಕಕುಲಾತಿ ಬಿಡಿಸುಧಯ್ಯಾ। ಮುಕುತ

ಕೊಡಿಯು ವೊಲಿವನು ಬೇಗ। ಸುಖ ಪಡುವರೂ ಭೂಸುರರ ದೇಹವು। ಹರಿಗೆ ಕ್ಷೇತ್ರವೆಂದು ತಿಳಿದನುದಿನ। ಭಕುತಿಯಿಂದಲಿ ವಿಪ್ರರ ಪಾದಾಬ್ಜಕ್ಕೆ। ಮುಕುಟ ಚ್ಯಾಚಿ ಧನ್ಯನಾಗೊ ಮುಕುತಿ । ನಖದಿಂದಲಿ ನದಿ ಪಡದ ರಾಮಚಂದ್ರ ವಿಠಲ। ಬ್ರಾಹ್ಮರವಶನೊ ॥೯।

## ಜತೆ

ಬೊಮ್ಮಾಂಡದೊಳಗಿಪ್ಪ ಹರಿಯ ಕಾಂಬುವದೆಂತೊ। ನಮ್ಮೊಳಗಿಪ್ಪ ರಾಮಚಂದ್ರ ವಿಠಲಾ ॥೧೦॥

## ಪ್ರಾಣೇಶವಿಠಲರ ಸುಳಾದಿ ೫೪

ಹೃದಯಸ್ಥ ಅಷ್ಟಪತ್ರ ಕಮಲ ವಿವರ ಅಲ್ಲಿಪ್ಪ ಅಗ್ರೇಶ ಪ್ರಾದೇಶ ಮೂಲೇಶನ ಕಾರ್ಯ, ಮುಖ್ಯ ಪ್ರಾಣಾಂತರ್ಗತ ಬಿಂಬಧ್ಯಾನ

### ರಾಗ ಕಾಂಬೋದಿ ಧ್ರುವ ತಾಳ

ಧ್ಯಾನವ ಮಾಡು ಮನುಜಾ ದೇಹಾಂತರ್ಗತ ಹರಿಯ। ಭಾನು ಸನ್ನಿಭ ಭಕತ ವತ್ಸಲ ದೇವಾ। ಜ್ಞಾನವಂತರು ಎಲ್ಲ ಈತನ ಮನದಲ್ಲಿ। ಧೇನಿಸಿ ಅಪವರ್ಗ ಐದುವರೂ। ದಾನವಾಂತಕ ರಂಗ ಆಪ್ತ ಜನನಿಯಂತೆ। ತಾನೆ ಕರುಣದಿಂದ ಕಡು ಪಾಲಿಪಾ। ಈ ನುಡಿ ಸಿದ್ಧವೆನ್ನು ಎಂದಿಗೂ ಪುಶಿ ಅಲ್ಲ। ಧೇನಿಪ ಮಾರ್ಗವ ಈಪರಿ ತಿಳಿವದು। ಈ ನವದ್ವಾರದಿಂದ ಬಲು ಪರಿ ಶೋಭಿಪ। ನಾನಾವರಣವುಳ್ಳ ದೇಹಾಖ್ಯ ನಗರದಿ। ಪ್ರಾಣಾನೆಂಬೊ ಮಂತ್ರಿಯಿಂದ ಲೊಪ್ಪುತದೇವಾ। ಆನಳಿನ ಭವರುದ್ರಾದಿಗಳಿಂದ। ತಾನು ಪೂಜೆಯುಗೊಳುತ ದಹರ ಹೃತ್ಪದ್ಮವೆಂಬ । ನಾನಾ ಶೃಂಗಾರ ಸಿಂಹಾನದಲ್ಲಿ ಕುಳಿತಿಪ್ಪಾ। ಜ್ಞಾನಾನಂದಪೂರ್ಣ ಬಿಂಬನೋಪಾದಿಯಲ್ಲಿ। ಆ ನಳಿನ ಕರ್ಣಿಕೆಯಲ್ಲಿ ಶ್ರೀದೇವಿಯು । ಆ ನಾಳದಲ್ಲಿ ವಾಸಾ ಭೂದೇವಿಯೂ। ಭಾನು ತೇಜದಲ್ಲಿ ದುರ್ಗಾದೇವಿಯೂ ನೀತಿ। ಯಾನು ತಿಳಿ ಕಮಲ ತ್ರಿ ಸ್ಥಳದಲ್ಲಿ । ಪ್ರಾಣನಿವಾಸ ನಮ್ಮ ಪ್ರಾಣೇಶ ವಿಠಲನ್ನ। ಮಾನಸದಲ್ಲಿ ನೋಡಿ ಸುಖಿಸು ಸತತ ॥೧॥

### ಮಟ್ಟತಾಳ

ಕಮಲದಿ ಶೋಭಿಪ ಅಷ್ಟ ಪತ್ರಗಳು। ವಿಮಲ ಕಾಂತಿಯಿಂದ ವಿದಿಶ ದಿಶಗಳಲ್ಲಿ। ಸಮವಾಗಿಪ್ಪವು ಅದರೊಳು ಶಕ್ತ್ಯಾದಿ। ರಮೆಯರಸನ ನಿತ್ಯ

ರೊಡಿಯು ಪೊಲಿವನು ಬೇಗ । ಸುಖ ಪಡುವರೂ ಭೂಸುರರ ದೇಹವು । ಹರಿಗೆ ಕ್ಷೇತ್ರವೆಂದು ತಿಳಿದನುದಿನ । ಭಕುತಿಯಿಂದಲಿ ವಿಪ್ರರ ಪಾದಾಬ್ಜಕ್ಕೆ । ಮುಕುಟ ಚ್ಯಾಚಿ ಧನ್ಯನಾಗೊ ಮುಕುತಿ । ನಖದಿಂದಲಿ ನದಿ ಪಡದ ರಾಮಚಂದ್ರ ವಿಠಲ । ಬ್ರಾಹ್ಮರವಶನೊ ॥೯।

ಜತೆ

ಬೊಮ್ಮಾಂಡದೊಳಗಿಪ್ಪ ಹರಿಯ ಕಾಂಬುವದೆಂತೊ । ನಮ್ಮೊಳಗಿಪ್ಪ ರಾಮಚಂದ್ರ ವಿಠಲಾ ॥೧೦॥

## ಪ್ರಾಣೇಶವಿಠಲರ ಸುಳಾದಿ ೫೪

ಹೃದಯಸ್ಥ ಅಷ್ಟಪತ್ರ ಕಮಲ ವಿವರ ಅಲ್ಲಿಪ್ಪ ಅಗ್ರೇಶ ಪ್ರಾದೇಶ ಮೂಲೇಶನ ಕಾರ್ಯ, ಮುಖ್ಯ ಸ್ವಾಣಾಂತರ್ಗತ ಬಿಂಬಧ್ಯಾನ

ರಾಗ ಕಾಂಬೋದಿ ಧ್ರುವ ತಾಳ

ಧ್ಯಾನವ ಮಾಡು ಮನುಜಾ ದೇಹಾಂತರ್ಗತ ಹರಿಯ । ಭಾನು ಸನ್ನಿಭ ಭಕತ ವತ್ಸಲ ದೇವಾ । ಜ್ಞಾನವಂತರು ಎಲ್ಲ ಈತನ ಮನದಲ್ಲಿ । ಧೇನಿಸಿ ಅಪವರ್ಗ ಐದುವರೂ । ದಾನವಾಂತಕ ರಂಗ ಆಪ್ತ ಜನನಿಯಂತೆ । ತಾನೆ ಕರುಣದಿಂದ ಕಡು ಪಾಲಿಪಾ । ಈ ನುಡಿ ಸಿದ್ಧವೆನ್ನು ಎಂದಿಗೂ ಪ್ರುಶಿ ಅಲ್ಲ । ಧೇನಿಪ ಮಾರ್ಗವ ಈಪರಿ ತಿಳಿವದು । ಈ ನವದ್ವಾರದಿಂದ ಬಲು ಪರಿ ಶೋಭಿಪ । ನಾನಾವರಣವುಳ್ಳ ದೇಹಾಖ್ಯ ನಗರದಿ । ಪ್ರಾಣಾ ನೆಂಬೊ ಮಂತ್ರಿಯಿಂದ ಲೊಪ್ಪುತದೇವಾ । ಆನಳಿನ ಭವರುದ್ರಾದಿಗಳಿಂದ । ತಾನು ಪೂಜೆಸುಗೊಳುತ ದಹರ ಹೃತ್ಪದ್ಮವೆಂಬ । ನಾನಾ ಶೃಂಗಾರ ಸಿಂಹಾನದಲ್ಲಿ ಕುಳಿತಿಪ್ಪಾ । ಜ್ಞಾನಾನಂದಪೂರ್ಣ ಬಿಂಬನೋಪಾದಿಯಲ್ಲಿ । ಆ ನಳಿನ ಕರ್ಣಿಕೆಯಲ್ಲಿ ಶ್ರೀದೇವಿಯು । ಆ ನಾಳದಲ್ಲಿ ವಾಸಾ ಭೂ ದೇವಿಯೂ । ಭಾನು ತೇಜದಲ್ಲಿ ದುರ್ಗಾದೇವಿಯೂ ನೀತಿ । ಯಾನು ತಿಳಿ ಕಮಲ ತ್ರಿ ಸ್ಥಳದಲ್ಲಿ । ಪ್ರಾಣನಿವಾಸ ನಮ್ಮ ಪ್ರಾಣೇಶ ವಿಠಲನ್ನ । ಮಾನಸದಲ್ಲಿ ನೋಡಿ ಸುಖಿಸು ಸತತ ॥೧॥

ಮಟ್ಟತಾಳ

ಕಮಲದಿ ಶೋಭಿಪ ಅಷ್ಟ ಪತ್ರಗಳು । ವಿಮಲ ಕಾಂತಿಯಿಂದ ವಿದಿಶ ದಿಶಗಳಲ್ಲಿ । ಸಮವಾಗಿಪ್ಪವು ಇದರೊಳು ಶಕ್ರಾದಿ । ದಮೆಯರಸನ ನಿತ್ಯ

ವಿಮಲ ಮೂರ್ತಿಗಳು । ಶಮಲ ನಾಶಕವಾಗಿ ಪೊಳೆವವು ಹನ್ನೆರಡು । ಕ್ರಮದಿಂದಲಿ ಪೂರ್ವ ಮೊದಲಾದ ದಿಶಗಳಲಿ। ರಮಿಸುತಿಪ್ಪವು ನೋಡು ಎರಡೆರಡು ಮೂರ್ತಿ । ಪ್ರಮತಿಯಿಂದಲಿ ಗುಣಿಸು ಎಂಟಾದವು ನೋಡು । ಭ್ರಮಿಸದೆ ತಿಳಿವದು ನಾಲ್ಕು ವಿದಿಶಗಳಲಿ । ಕ್ರಮ ಮೀರದಂತೆ ಪೊಳವು ತಿವೆ ನಾಲ್ಕು । ಸುಮನಸರಲ್ಲೆಲ್ಲಿ ದಿಕ್ಪಾಲಕರಾಗಿ । ನಮಿಸುತಿಪ್ಪರು ಕಾಣೊ ದ್ವಾದಶ(ರೂಪಗಳು)ಮೂರ್ತಿಗಳು । ಅಮಿತತೇಜದ ಶಕ್ತ್ಯಾದ್ದೇಕಾ ದಶರೂಪಗಳು । ಪ್ರಮದಾ ಕಾರಗಳು ತರುವಾಯದಿ ಒಂದು । ಪು(ಪ್ರ)ಮಾ ಕೃತಿ ಧರಿಸಿನ್ನು ಹೃದಯದಿ ಶೋಭಿಪವು । ಕಮಲಸಂಭವ ವಾಯು ಅಧಿ ಷ್ಠಾನದ್ವಯದಲ್ಲಿ । ಕುಮುದ ಪತಿಯ ತೇಜ ಪ್ರಾಣೇಶವಿಠ್ಠಲ । ಸುಮತಿ ಯಿಂದಲಿ ನೆನಿಯೆ ಮನದಲ್ಲಿ ಪೊಳೆವನು ॥೨॥

## ರೂಪಕತಾಳ

ಹೃದಯಕಮಲದಲ್ಲಿಪ್ಪ ಕರ್ಣಿಕಾಗ್ರದಲ್ಲಿ । ಸದಮಲ ಆಗ್ನೇಶ ಸದಾ ವಾಸವಾಗೀ । ಅದುಭೂತ ಚರ್ಯನು ಆತನೆ ಪ್ರಾಜ್ಞನು ಕಾಣೊ । ತದು ತದು ಜೀವರಿಗೆ ಸುಪ್ತಿದಾಯಕನೆನಿಸಿ । ಮುದದಿಂದ ಅಂಗುಷ್ಟ ಮಾತ್ರ ರೂಪವ ಧರಿಸಿ । ಮಧುಸೂದನ ಹರಿ ತಾನು ಅದುಭೂತ ಕಾರ್ಯವಮಾಳ್ಪ । ತದನಂತರದಲ್ಲಿ ಶ್ರೀ ಪದುಮನಾಭನೆ ಸರ್ವ । ಹೃದಯಾಕಾಸದಲ್ಲಿ ಮೊದಗಿ ತಾ। ಪ್ರಾದೇಶಪರಿಮಿತರೂಪದಲಿ। ಸದಕಾಲದಲ್ಲಿದ್ದು ಪುರುಷನಾಮಕನಾಗಿ ಸುದರುಶನ ಧರನು ತಾನಲ್ಲಿಪ್ಪ ಬಿಡದಂತೆ। ಪದುಮ ಕರ್ಣಿಕೆಯ ಮೂಲ ದೇಶದಲ್ಲಿ ಶ್ರೀ । ಪದುಮೆಯರಸ ಹರಿ ಮೂಲೇಶ ನೆನಸುತಲಿ। ಮುದ ಭರಿತನಾಗಿ ಅಂಗುಷ್ಟಾಗ್ರ ರೂಪನಾಗಿ । ಮದನನ್ನ ಜನಕ ವಿಜ್ಞಾನಾತ್ಮಾ ಎಂಬ ನಾ। ಮದಲಿ ಶೋಭಿಸುತಿಪ್ಪ ಮುರವೈರಿ ಮುದದಿಂದ । ಉದಧಿ ಶಯನ ನಮ್ಮ ಪ್ರಾಣೇಶವಿಠ್ಠಲ । ಸದಧೇನಿಪರ ಮನ ಪದುಮಕೆ ತುಂಬಿ ಎನಿಪಾ ॥೩॥

## ಝಂಪಿತಾಳ

ಮೂಲೇಶ ಹರಿಪದ ಕೀಲಾಲಜ ಯುಗಳ । ಮೂಲವನ್ನೆ ಕರದಿ ಮೇಲು ಭಕುತಿಯಿಂದ। ಶೀಲ ಗುಣ ಭಾರತಿಲೋಲ ತಾನಾದರದಿ । ಮೂಲೇಶಗಭಿಮುಖದಿ ಶ್ರೀ ಲಕುಮಿಪತಿಗುಣ । ಜಾಲನೆನಿಸುತ ಧರಿಸಿ

ಕಾಲವಂದರಘಳಿಗೆ। ಸೋಲದಲೆ ಇದ್ದು ಶಚಿಲೋಲ ದಿಶಗಭಿಮುಖಿಸಿ। ಲೀಲೆಯಿಂದಿರುತಿಪ್ಪ ಮೂಲೋಕಪತಿ ಮುಖ್ಯ। ಪ್ರಾಣನಲಿ ಶುಚಿಷತ್ ಮೇಲು ನಾಮದಲಿಂದ ಮೆರೆವ ಶ್ರೀಹರಿಯಿಪ್ಪ। ಘಾಳುಕ ಪ್ರಾಜ್ಞ ಅಪರಾಜಿತ ವೈಕುಂಠ। ಶ್ರೀಲೋಲನಾದಂಥ ಇಂದ್ರನೆಂಬೊನಾಮ। ಮಾಲಿಕೀಯಲಿಂದ ಬಲು ಶೋಭಿಸುತಲೀ। ಪಾಲ ಸಾಗರಶಾಯಿ ಪ್ರಾಣೇಶ ವಿಠ್ಠಲ। ಮೂಲೇಶನಾಗಿ ತಾ ಲೀಲೆ ಈಪರಿಮಾಳ್ಪ ॥೪॥

## ತ್ರಿವಿಡಿತಾಳ

ಶ್ರೀ ಮುಖ್ಯಪ್ರಾಣನು ಸರಸದಿಂದಲಿ ನಿತ್ಯ। ಈ ಮೂರು ವಿಧ ಜೀವರೊಳಗೆ ಇದ್ದೂ। ಯಾಮ ಯಾಮಕೆ ಬಿಡದೆ ತಾಮೇಲು ಕರುಣದಿ। ಶ್ರೀ ಮುಕುಂದನ ಹಂಸ ಮಂತ್ರಗಳ। ತಾಮರಸದಿ ಪೊಂದಿ ಮನವಿಡಿದು ತಿರುಗಿ। ಆ ಮುಹೂರ್ತ ಪರಿಯಂತ ಜಾಗ್ರತೆಯಿಂದ। ತಾ ಮೀರದಂತೆ ಇಪ್ಪತ್ತೊಂದುಸಾವಿರ ಮೇಲಾರುನೂರು ಶ್ವಾಸಂಗಳ। ಶ್ರೀ ಮಾಧವನ ಸಂಪ್ರೀತಿಗೋಸುಗ ಜಪಿಸಿ। ಈ ಮಹಿಯೊಳು ಯೋಗ್ಯಜೀವರಿಂದ। ಸಾಮಜವರದಗರ್ಪಣೆ ಮಾಡಿಸುವ। ಈ ಮಹಿಮನು ತನ್ನ ದ್ವಾರದಿಂದ। ಕಾಮಿತಪ್ರದ ನಮ್ಮ ಪ್ರಾಣೇಶವಿಠ್ಠಲ। ಕಾಮಿತಪ್ರದನಾಹ ಈ ಪರಿ ಧೇನಿಸೆ ॥೫॥

## ಅಟ್ಟತಾಳ

ಕುದುರೆಬಾಲದ ತುದಿಯ ಕೂದಲು ಶತ। ವಿಧ ವಿಭಾಗವಮಾಡಿ ಅದರೊಳಗೊಂದನು। ಅದರಂತವೇ ನೂರು ವಿಧದಿ ವಿಭಾಗಿಸ। ಲದರೊಳಗುಳಿದ ಒಂದಂಶದ ಪರಿಮಿತ ಕಾಣೊ। ವಿಧಿ ಭವಾದಿಗಳ ವಿಡಿದು ತೃಣ ಪರಿಯಂತ। ಒದಗಿ ಜೀವರ ಮಿತಿ ಸದಕಾಲ ತಿಳಿವದು। ಇದೆ ಜೀವ ಪವನವ ಪದಕಂಜಗಳ ವಿಡಿದು ಬಲು ತಾ ಸಮೀ। ಪದಲಿ ನಿರುತಲಿದ್ದು ಸದಸತ್ಕರ್ಮವಮಾಳ್ಪ। ಆದುಭೂತ ಸಹಸ ಪ್ರಾಣೇಶವಿಠ್ಠಲ। ಸದಮಲನಾಗಿ ಸರ್ವದ ಕಾರ್ಯಗಳಮಾಳ್ಪ ॥೬॥

## ಆದಿತಾಳ

ಹಂಸನಾಮಕನು ಹೃದಯಕಮಲದಲ್ಲಿ। ಹಂಸದಂತೆ ಸಂಚರಿಸುವ ದಳದಲ್ಲಿ। ಕಂಸಾರಿಯು ಅಷ್ಟಭುಜದಲ್ಲಿ। ಹಿಂಸೆ ಇಲ್ಲದೆ ಸದ ಧರಿಸಿ ಸುಂದರ

ಪದ। ಪಾಂಸುಗಳಿಂದಲಿ ಪರಿಹರಿಸುತಲಿ । ಸಂಸಾರಿಗೆ ದಳಭೇದದಿಂದ ಕರ್ಮಗಳನು ತಾ ಕೊಡುತಲಿಪ್ಪ ಹರಿ। ಭ್ರಂಶವಿಲ್ಲದಲೇ ಬಹುವಿಧ ಫಲ ವೀವ। ಸಂಸೃತಿನಾಶ ಪ್ರಾಣೇಶವಿಠ್ಠಲ ಸೀ। ತಾಂಶುವದನ ಪಾಲಿಪ ಪೊಳೆವುತಲಿ ॥೬॥

ಜತೆ

ಈಪರಿಯಲಿ ನಿತ್ಯ ಶ್ರೀಪತಿಯ ಧೇನಿಸು। ಅಪಾರಮಹಿಮ ಪ್ರಾಣೇಶ ವಿಠ್ಠಲ ಪೊಳೆವಾ ॥೮॥

॥ ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥



# ಧ್ಯಾನೋಪಾಸನಗಳನ್ನು ವಿವರಿಸುವ

## ಕೆಲವು ಪದಗಳು

### ಶ್ರೀ ಪುರಂದರ ವಿಠಲ ಪದ ೧

ಶ್ಲೋಕ

ಹೃದಿಸ್ಥಿತಂ ಪಂಕಜಮಷ್ಟಪತ್ರಂ। ಸಕೇಸರಂ ಕರ್ನಿಕಪದ್ಮನಾಳಂ। ಅಂಗುಷ್ಟಮಾತ್ರಂ ಮುನಯೋವದಂತಿ । ಧ್ಯಾಯೇತವಿಷ್ಣುಂ ಪುರುಷಂ ಪುರಾಣಂ ॥೧॥

ಪದ

ಹೃದಯಕಮಲಾಷ್ಟದಳ ಹೃಷಿಕೇಶನಾರಾಯಣ ಹಂಸಗಮನಾ। ತುದಿತುದಿಲಿ ಕೇಸರದೊಳು ಮುಕ್ತಿನಾಳ ಕರ್ನಿಕದೊಳು ॥೧॥

ಶ್ಲೋಕ

ನಾಭಿಸ್ಥಳಿಸ್ಥಿತಂ ಪದ್ಮಂ । ನಾಭ್ಯಾಂತರದಶಾಂಗುಲಂ । ಕಮಲಂ ತಸ್ಯತನ್ನಾಳಂ ನಿಮ್ನಪದ್ಮಮಧೋಮುಖಂ ॥ ಕದಳೀಪುಷ್ಪಸಂಕಾಶಂ ಚಂದ್ರಕಾಂತಿಸಮಪ್ರಭಂ। ವಿಶಾಲಂ ದಿಶಿಸಂಪೂರ್ಣಂ ಚಾರುಹಾಸಂ ಸುನಿರ್ಮಲಂ। ಪದ್ಮಕಿಂಜಲ್ಕಸದೃಶಂ। ತಪ್ತಕಾಂಚಸನ್ನಿಭಂ ॥೨॥

ಪದ

ಕಮಲವಮೂಲನಾಭಿಗೆ ಹೃ । ತ್ಕಮಲಕೆ ಹತ್ತು ಅಂಗುಲ । ಕಮಲ ಕೋಮಲನಾಳ । ಕಮಲ ಅಧೋಮುಖ । ಕಮಲ ಕದಳಿಪುಷ್ಪದಂತೆ । ಕಮಲ ಚಂದ್ರ ಕಾಂತಿಯಂತೆ । ಕಮಲ ವಿಶಾಲ ಪೂರ್ಣ ದಶ ದಿಕ್ಕು । ಕಮಲ ಸ್ವರ್ಣದಂತಿಪ್ಪದು ॥೨॥

ಶ್ಲೋಕ

ಅಷ್ಟಪತ್ರಂ ತು ಹೃತ್ಪದ್ಮಂ ದ್ವಾತ್ರಿಂಶತ್ಕೇಸರಾನ್ವಿತಮ್ । ತಸ್ಯ ಮಧ್ಯೇ ಸ್ಥಿತಂ ದೇವಂ ಇಂದ್ರಾದ್ಯೈಸ್ತು ಸುಸೇವಿತಮ್ ॥೩॥

ಪದ

ಅಷ್ಟದಳ ಹೃತ್ಕಮಲ ಅದಕೆ ಮೂವತ್ತೆರಡು ಕೇಸರಾ । ಅಷ್ಟರೊಳು ಕರ್ಣಿಕೆ ನಾಳ ಅರಿಸಿ ಶ್ರೀ ಭೂದೇವಿಯು । ಅಷ್ಟಬಾಹು ಅಷ್ಟಾಯುಧ ಅಂಗುಷ್ಟಮಾತ್ರ ವಿಷ್ಣು । ಅಷ್ಟದಿಕ್ಪಾಲರಿರಲು ಅಲ್ಲಿ ಬ್ರಹ್ಮಾದಿಗಳಿಂದ ॥೩॥

ಶ್ಲೋಕ

ಕೃತೇ ಶ್ವೇತಂ ಹರಿಂವಿಂದ್ಯಾ । ತ್ರೇತಾಯಾಂ ರಕ್ತವರ್ಣಕಂ । ದ್ವಾಪರೆ ಪೀತವರ್ಣಂತು । ಕೃಷ್ಣವರ್ಣಂ ಕಲೌ ಯುಗೇ । ಶಂಖಚಕ್ರಗದಾಪದ್ಮಂ ಮುಸಲಂ ಖಡ್ಗಮೇವ ಚ । ಧನುಃ ಸಹಿತ ಬಾಣಂ ಚ ಅಷ್ಟಬಾಹುಧರಂ ಹರಿಂ ॥೪॥

ಪದ

ಶ್ವೇತವರ್ನ ಕೃತಯುಗದಿ । ತ್ರೈತಾಯುಗದಿ ರಕ್ತವರ್ನಾ । ಪೀತ ವರ್ನ ದ್ವಾಪರದಿ । ಕಲಿಯುಗದಿ ಕೃಷ್ಣವರ್ನಾ । ಧೃತ ಧನು ನೇಣು ಬಾಣ ದರ ಚಕ್ರ ಗದಾ ಪದುಮ । ಅತುಂಬ್ರ(ಧನು) ಖಡ್ಗ ಮುಸುಲ ಅಷ್ಟ ಬಾಹುಗಳಲ್ಲಿ ಧರಿಸಿ ॥೪॥

ಶ್ಲೋಕ

ಪೂರ್ವದಲೇ ಪುಣ್ಯಬುದ್ಧಿ ಅಗ್ನೌ ನಿದ್ರಾಲಸ್ಯಾಧಿಕಮ್ । ಯಾಮ್ಯ ದಲೇ ಕ್ರೂರಬುದ್ಧಿಃ ನೈರುತ್ಯಾಂ ಪಾಪಕರ್ಮಕೃತ್ ॥೫॥

ಪದ

ಪೂರ್ವದಳದಿ ವಿಷ್ಣುಬರಲು । ಪುಣ್ಯಮಯದಿ ಜೀವನಿರುವ । ಆರೂಢ ಅಗ್ನಿದಳದಿ ಆಲಸ್ಯ ನಿದ್ರಾರೋಗಣಿಗೆ । ಮನವೀವ ತೋರುತಿಹ

ಯಮದಿಕ್ಕಿನಲಿ ತುಂಬಿದ ಕ್ರೋಧವು ಮಿಗೆ । ಪರಿದೊಡನೆ ನೈರುತ್ಯ ಪಾಪಕೃತ್ಯಾ ॥೫॥

ಶ್ಲೋಕ

ವರುಣೇವ ಪರಿಕ್ರೀಡಾಂ ವಾಯವ್ಯಾಂ ಗಮನಾಗಮನ್ । ನುತ್ತರೆ ರತಿಬುದ್ಧಿಸ್ಯಾತ್ ಈಶಾನ್ಯೆ ದ್ರವ್ಯದಾನಕೃತು ॥೬॥

ಪದ

ವರುಣದಿಕ್ಕಿನಲ್ಲಿ ವಿನೋದ ವಾಯುವ್ಯದಿ ಗಮನಾಗಮನ । ಕುರುಹು ಕುಬೇರನದಿಕ್ಕಿಲಿ ಕೊಡುವ ರತಿಬುದ್ಧಿಯಾ । ತೆರಳಿ ಬಂದು ಈಶಾನ್ಯದಲಿ ದ್ರವ್ಯದಾನವಮಾಡಿಸುವ । ನೆರಡು ದಿಕ್ಪಾಲಕರಿರಲು ನಿಂತು ನಿಂತು ಬರುವಾ ॥೬॥

ಶ್ಲೋಕ

ಮಧ್ಯೆ ವೈರಾಗ್ಯಬುದ್ಧಿಸ್ತು ಜಾಗ್ರಾವಸ್ತಂತು ಕೇಸರೆ । ಸ್ವಪ್ನಾವಸ್ಥಂ ಕರ್ನಿಕಾಯಾಂ ಲಿಂಗೇತು ಸುಷುಪ್ತಿಕೃತ್ ॥೭॥

ಪದ

ಜೀವಕೀವ ವೈರಾಗ್ಯ ಜಗದೀಶನು ಮಧ್ಯನಿಂದು । ಮೂವತ್ತೆರಡು ಕೇಸರದಿ ಮುಕುಂದ ಬರಲು ಜಾಗ್ರತಿ । ಭಾವವಿತ್ತು ಕರ್ನಿಕೆಲಿ ಬಂದು ಸ್ವಪ್ನಂಗಳತೋರಿಹುನು । ಕರ್ನಿಕೆ ಬಿಂದುಮಣಿಗಳಿಹದಿ ಸುಷುಪ್ತಿನೀವಾ ॥

ಶ್ಲೋಕ

ತಸ್ಯ ಮಧ್ಯೆ ಗತೋ ಭಾನುಃ ಭಾನುಮಧ್ಯೆ ಗತಃ ಶಶೀಃ । ಶಶೀ ಮಧ್ಯೆ ಗತೋವನ್ಹಿಃ ವನ್ಹಿಮಧ್ಯೆ ಗತಪ್ರಭಾಮ್ । ಪ್ರಭಾಮಧ್ಯೆ ಗತಂ ಪೀಠಂ ನಾಳರತ್ನೋಪಶೋಭಿತಂ । ಸಹಸ್ರಫಣಿಸಂಯುಕ್ತಂ ಮಧ್ಯೇ ದೇವಂ ಸ್ಥಿತಂ ಭಜೇತ್ ॥೮॥

ಪದ

ಮಧ್ಯಕಮಲದಿ ಸೂರ್ಯ ಮಧ್ಯಸೂರ್ಯನಲಿ ಚಂದ್ರ । ಮಧ್ಯ ಚಂದ್ರನಲಿ ಅಗ್ನಿ । ಮಧ್ಯ ತೇರು ಶೃಂಗಾರ ಮಧ್ಯ ಜಗುಲಿ । ಕಲ್ಪವೃಕ್ಷ ಮಧ್ಯ ಮಂಟಪ ಸ್ವರ್ಣಪೀಠ ಮಧ್ಯ ಮಂಟಪ । ಸಹಸ್ರಫಣಿಮಧ್ಯ ಶ್ರೀ ಭೂ ನಾರಾಯಣಾ ॥೮॥

ಶ್ಲೋಕ

ವಿದ್ರುಮಸ್ಫಟಿಕಾಕಾರಂ ಶತಸ್ತಂಭಸಮನ್ವಿತಂ । ಅನೇಕಸೂರ್ಯ ಸಂಕಾಶಂ ವಿಮಾನೇನ ವಿರಾಜಿತಂ । ಮುಕ್ತಾದಾಮಯುತಾ ನಾಢ್ಯಂ ಚಿತ್ರಧ್ವಜಪತಾಕಿನಂ ॥೯॥

ಪದ

ಹವಳಸ್ಫಟಿಕಸ್ತಂಭನೂರು ಹಾಟಕ ನವರತ್ನತೇರು । ಹವಣ ನಾಲ್ಕು ಮೂಲೆ ಜಗಲಿ ಹಲವುರತ್ನ ಶೃಂಗಾರ । ವಿವಿಧ ಮುತ್ತಿನಗೊಂಚಲು ವಿಚಿತ್ರ ಧ್ವಜಪತಾಕಿಗಳು । ರವಿಕೋಟಿಪ್ರಕಾಶದಲಿ ರಥ ಹೊಳಿಯು ತಿಹುದು ॥೯॥

ಶ್ಲೋಕ

ಮಲ್ಲಿಕಾಕುಂದಮಂದಾರಃ ಕೇತಕೈಶ್ಚಂಪಕಾದಿಭಿಃ । ಅನ್ಯೈಶ್ಚ ಗಂಧಪುಷ್ಪೈಶ್ಚ ಸಮಂತ್ಸದವಕೀರ್ತಿತಂ । ಮಹಸಾಲ್ವ್ಯಮಿದಂ ಪುಷ್ಪಂ ಕಲ್ಪವೃಕ್ಷಾಂತರೇ ಸ್ಥಿತಂ । ಏತನ್ಮಂಟಪಮಧ್ಯಸ್ಥಂ ಸ್ವರ್ಣಪೀಠೋಪರಿ ಸ್ಥಿತಂ । ಸಿಂಹಾಸನೇ ಸಮಾಸೀನಂ ಕೋಟಿಸೂರ್ಯಸಮಪ್ರಭಂ । ವಿಷ್ಣುಃ ಚತುರ್ಭುಜಂ ಲಕ್ಷ್ಮೀಭೂಮಿಭ್ಯಾಂ ಪಾರ್ಶ್ವಶೋಭಿತಂ ॥೧೦॥

ಪದ

ಮಲ್ಲಿಗೆ ಕುಂದ ಮಂದಾರ ಮರುಗ ಕೇತಕಿ ಸಂಪಿಗೆ । ಅಲ್ಲಿ ಮಂಟಪ ಶೃಂಗಾರ ಅನೇಕ ಹೂವಿಲಿ ಮಂದಿರಾ । ಸಲ್ಲುವ ಕಲ್ಪವೃಕ್ಷದಕೆಳಗೆ ಸ್ವರ್ಣ ಪೀಠ ಸಿಂಹಾಸನಪ್ರಭೆ । ಅಲ್ಲಿ ಕೋಟಿಸೂರ್ಯಪ್ರಕಾಶ ಇರುವ ವಿಷ್ಣು ಚತುರ್ಭುಜದಿ ॥೧೦॥

ಶ್ಲೋಕ

ಅನೇಕಸೂರ್ಯಸಂಕಾಶಂ ಮುಗುಟಾಟೋಪಮಸ್ತಕಂ । ಕಟಿ ಸೂತ್ರಂ ಬ್ರಹ್ಮಸೂತ್ರಂ ನೂಪುರೇಣ ವಿರಾಜಿತಂ । ಶ್ರೀವತ್ಸವನಮಾ ಲಾಢ್ಯಂ ತುಲಸೀದಾಮಭೂಷಿತಂ ॥೧೧॥

ಪದ

ಅನೇಕಕೋಟಿ ಸೂರ್ಯಸಂಕಾಶ ಅಲ್ಲಿ । ಮುಕುಟಾಟೋಪಮಸ್ತಕ ವನಜಾಕ್ಷ ಅಚ್ಯುತಗೆ । ಶ್ರೀವತ್ಸ ಕೌಸ್ತುಭ ಕೇಯೂರ ಕನಕಾಂಬರಹಾರ

ಕುಂಡಲ ಕಟಿಸೂತ್ರ ಯಜ್ಞೋಪವೀತ । ವನಜ ಗಂಧ ಪುಷ್ಪ ತುಲಸಿ ವೈಜಯಂತಿಮಾಲೆ ಧರಿಸಿಹಾ ॥೧೧॥

ಶ್ಲೋಕ

ಅನೇಕದಿವ್ಯಾಭರಣಂ ಕರಕಂಕಣ ಶೋಭಿತಂ । ವರದಭಯ ಹಸ್ತಾಭ್ಯಾಂ ಶಂಖಚಕ್ರಸ್ಫುರತ್ಕರಂ । ಪೀತಾಂಬರಮುದಾರಾಗಂ ವನ ಮಾಲಾ ವಿಭೂಷಿತಂ। ಮನೋಹರಂ ದಯಾಮೂರ್ತಿಂ ಮಂದಹಾಸ ಮುಖಾಂಬುಜಮ್ ॥೧೨॥

ಪದ

ಅನೇಕ ದಿವ್ಯಾಭರಣದಿ ಅಂಗನೇರು ತಾ ಅಲಂಕೃತದಿ। ವನಜ ನಾಭಗೆ ಕಡಗ ಕಂಕಣ ವರದಭಯ ಹಸ್ತದಿ । ಕನಕಾಂಬರ ಕಸ್ತುರಿ ನಾಮ ಕರುಣಿ ಪ್ರಸನ್ನವದನ ಶುಭಂ । ಮನೋಹರ ದಯಾಮೂರ್ತಿ ಮಂದಹಾಸ ಮುಖಾಂಬುಜದಿ ॥೧೨॥

ಶ್ಲೋಕ

ಅಣಿಮಾದ್ಯೈಃ ಮೂರ್ತಿಮದ್ಭಿರಷ್ಟೈಶ್ವರ್ಯಮುಪಾಸಿತಮ್ । ಬದ್ಧಾಂಜಲಿಸ್ಫುಟೆ ಭಕ್ತ್ಯಾ ಬ್ರಹ್ಮರುದ್ರಾದಿಭಿಸುರೈಃ । ಗಾಯದ್ಭಿನಾರದಾದ್ಯೈಶ್ಚ ಅಸ್ಯ ರಾಗೇಣ ಸೇವಿತಮ್ ॥೧೩॥

ಪದ

ಅಣಿಮಾದಿ ಅಷ್ಟೈಶ್ವರ್ಯ ಅಧೋಮುಖದಿಂ ಆರಾಧಿಸಲು। ಅಣಿ ಯಾಗಿ ಬ್ರಹ್ಮರುದ್ರಾದ್ಯರು ಅಂಜಲಿಮಾಡಲು। ಅಣಿಯಾಗಿ ನಾರದಾದ್ಯರು ಕೈ ಮುಗಿದು ಗಾನವಮಾಡಲು । ಕುಣಿವರೂರ್ವಸಿ ರಂಭೆ ಮೇನಕಿ ತಿಲೋತ್ತಮೆಯರು ॥೧೩॥

ಶ್ಲೋಕ

ಸನಕಾದ್ಯೈಃ ಸೇವ್ಯಮಾನೈಃ ಸೂತಮಾಗದಬಂದಿಭಿಃ। ಅನ್ಯೈಶ್ಚ ಕರಣಾಭರಣೈಃ ಕರಕಂಕಣಶೋಭಿತೈಃ । ದಿವ್ಯಸ್ತ್ರೀಕರಯುಗ್ಮಾಭ್ಯಾಂ ಚಾಮರಾಭ್ಯಾಂ ಸುಸೇವಿತಮ್ । ಮಾಧವಂ ಪರಮಾತ್ಮಾನಂ ಭಕ್ತವತ್ಸಲ ಮೀಶ್ವರಂ। ಧ್ಯಾಯೇದ್ದೇವಂ ಹೃದಿ ಸೂರ್ಯಮಂಡಲೇನಂತ ರಂಜಯೇತು॥

ಪದ

ಸನಕಾದಿಯೋಗಿಯರು ಸ್ತೋತ್ರಗಳಮಾಡಲು । ಮನ ಮೆಚ್ಚಲು ಬಂದಿ ಸೂತ ಮಾಗಧರು ಹೊಗಳಲು। ಅನೇಕ ದಿವ್ಯಾಭರಣದಿ ಅಲ್ಲಿ ಕಂಕಣದುಭಯಪಾರ್ಶ್ವದಿ । ಕನಕ ಕಾಮಿನಿ ಛತ್ರ ಚಾಮರಕಾಂತೆರಿಬ್ಬರು ಢಾಳಿಸಲು ॥೧೪॥

ಶ್ಲೋಕ (ಅರ್ಜುನವಾಚ)

ದುರ್ವಿಜ್ಞೇಯಂ ದುರಾರಾಧ್ಯಂ ದುಷ್ಪ್ರಾಪ್ಯಂ ಜನಾರ್ದನಂ ।
ಅಧೋಮುಖಮಧೋಭೂತ್ವಾ ಹೃದಯಂಕೇನ ಗಚ್ಛತಿ ॥೧೫॥

ಪದ

ದುರ್ವಿಜ್ಞೇಯ ದುರಾರಾಧ್ಯ ದುಷ್ಪ್ರಾಪ್ಯ ಜನಾರ್ದನ। ನಿರ್ವಿತ್ಯಾದಿ ಅಧೋಮುಖದಿ ನೆಲಿಸಿ ನೆಟ್ಟಗಿಹನ । ಉರವಿಲಿ ಮಾನಸಾಂಬುಜೆ ಉಪಾಸ್ಯ ಅರ್ಜುನ ಕೇಳಲು । ಸರ್ವಾಂತರ್ಯಾಮಿ ಕೃಷ್ಣ ಉಪಾಯ ಪೇಳಿದನು ॥೧೫॥

ಶ್ಲೋಕ (ಶ್ರೀಭಗವಾನುವಾಚ)

ಅಧೋಮುಖಂತು ಹೃತ್ಪದ್ಮಮುಧೃತ್ಯ ಪ್ರಣವೇನ ತತ್ । ಗತ್ವಾತು ಪದ್ಮಕೋಶಂತು ವಿಕಸೇ ವ್ಯಾಹೃತಂ ಪುನಃ। ತತಃ ಪಶ್ಚಾದ್ಭವೇತ್ಪದ್ಮ ಸರ್ವ ಗಾತ್ರಸುಖಾವಹಂ । ಆವಾಹನಾಸನಪಾದ್ಯಮರ್ಘಮಾಚಮನಾದಿಕಂ ।

ಪದ

ಭಾವ ಪ್ರಣವ ವ್ಯಾಹೃತಿ ವಾಯುಬದ್ಧದಲಿ ಹೃತ್ಕಮಲ । ನೋವಿಲ್ಲದೇ ಅಧೋಮುಖದಿ ನೂಕುತ ಉನ್ನತದರಳುವದು। ಆವಾಹನವು ಆಸನವು ಆಂತರದಲಿ ಪಾದ್ಯವು । ದೇವಗರ್ಘ್ಯ ಆಚಮನಾದಿಗಳು ಉಪಚರಿಸೋ ॥೧೬॥

ಶ್ಲೋಕ

ಸ್ನಾನಂ ವಸ್ತ್ರೋಪವೀತಂಚ ಆಚಮ್ಯಂ ಚೋತ್ತರೀಯಕಂ। ಆಚಮ್ಯ ಗಂಧಪುಷ್ಪಂ ಚ ಧೂಪದೀಪಂ ನಿವೇದಯತುಃ । ನೈವೇದ್ಯಂ ಪುನರಾಚಮ್ಯಂ ತಾಂಬೂಲಂಚ ನಿವೇದಯೇತ್ । ಪ್ರದಕ್ಷಣಂ ನಮಸ್ಕಾರಂ ಕೃತ್ವಾ ಸ್ತುತ್ವಾ ಸಮರ್ಪಯೇತ್ ॥೧೭॥

ಪದ

ಅಭಿಷೇಕಂಗಳು ವಸ್ತ್ರವು ಅರ್ಪಿಸು ಯಜ್ಞೋಪವೀತವು। ಉಭಯಾಚಮನೋತ್ತರಿಯಾ ವೊಮ್ಮೆ ಮತ್ತೊಂದು ಆಚಮನ। ಪ್ರಭುವಿಗೆ ಗಂಧಪುಷ್ಪವಿಟ್ಟು ಧೂಪ ದೀಪ ನೈವೇದ್ಯ। ವಿಭುವಿಗೆ ಆಚಮನ ತಾಂಬೂಲ ಪ್ರದಕ್ಷಣ ನಮಸ್ಕಾರ ॥೧೭॥

ಶ್ಲೋಕ

ತೈಲಾಜ್ಯವರ್ತಿ ಸಂಯುಕ್ತಂ ದೀಪಂ ಚ ಜೋತಿರೂಪಕಂ। ತಾದೃಶಂ ಪರಮಾತ್ಮಾನಂ ಸ್ಮರೇತ್ಪಾರ್ಥಹ್ಯನನ್ಯಭಾಕ್। ಶುದ್ಧಂ ಸೂಕ್ಷ್ಮಂ ನಿರ್ವಿಕಾರಂ ಶ್ರೀನಿವಾಸಂ ನಿರಂಜನಂ। ಅಪ್ರಮೇಯಮಜಂ ದೇವಂ ತಂ ವಿಂದಾತ್ ಪುರುಷೋತ್ತಮಂ ॥೧೮॥

ಪದ

ತವಕದಿಂದಲಿ ಸ್ತುತಿಸಿ ತೈಲಾಜ್ಯಭಕ್ತಿಯಲಿ। ಹವಣಿಸಿದ ಜ್ಯೋತಿಯಂತೆ ಹರಿಯ ಮೂರುತಿಕಾಣೊ। ಪವನೇಶನ ಇಂತು ಧ್ಯಾನಿಸಿ ಪರಮಾತ್ಮ ಶುದ್ಧ ಸೂಕ್ಷ್ಮ ಶ್ರೀ। ನಿವಾಸ ನಿರ್ವಿಕಾರ ನಿರಂಜನ ಅಪ್ರಮೇಯಾ॥

ಶ್ಲೋಕ

ಮಚ್ಛಕೂರ್ಮವರಾಹಂ ಚ ನಾರಸಿಂಹಂ ಚ ವಾಮನಂ। ಭಾರ್ಗವಂ ರಾಘವಂ ಕೃಷ್ಣಂ ಬುದ್ಧಂ ಕಲ್ಕಿನಮೇವಚ। ಅನಂತಂ ವಿಶ್ವರೂಪಂ ಚ ಈಶಾಂಚಾಗ್ರೆ ಪ್ರಪೂಜಯತು ॥೧೯॥

ಪದ

ಮಚ್ಛ ಕೂರ್ಮ ವರಹಾ ಮತ್ತೆ ಶ್ರೀನಾರಸಿಂಹ। ಹೆಚ್ಚಾಳು ವಾಮನ ಹಿರಿದ ಪರಶುರಾಮ। ಅಚ್ಚರಾಮಕೃಷ್ಣ ಬೌಧ್ಯ ಅಶ್ವವೇರಿದ ಕಲ್ಕಿಯು। ಅಚ್ಯುತ ದಶಾವತಾರದಿ ಅನಂತ ಅವತಾರ ಆದರೂಪಾ ॥೧೯॥

ಶ್ಲೋಕ

ಪದಾದಧಸ್ತಲಂ ವಿಂದ್ಯಾ ತ್ಪಾದೋರ್ಧ್ವಂ ವಿತಲಮ್ ಭವೇತ್। ಸುತಲಂ ಜಂಘದೇಶೇತು ಜಾನುದೇಶೆ ರಸಾತಲಮ್। ತಳಾತಳಂ ಊರು ದೇಶೇ ಗುಹ್ಯದೇಶೇ ಮಹಾತಲಂ। ಪಾತಾಲಂ ಕಟಿದೇಶೇತು ಸಪ್ತಮಂ ಪರಿಕಲ್ಪಿತಂ ॥೨೦॥

ಪದ

ಅತಳದಲಿ ಪಾದವಿಹುದು ಆಪಾದೂರ್ಧ್ವ। ವಿತಳದಲಿ ಸುತಳದಲಿ ಜಂಘೆಗಳು। ಚೋದ್ಯ ಜಾನು ರಸಾತಳದಿ ಇಹದು ತತ್ರಿ। ಲಿ ತೊಡೆ ತಳಾತಳದಿ ಮಹತಳದಿ ಗುಹ್ಯವಿಹದು। ಪ್ರತಿ ಇಲ್ಲದ ಕಟಿಭಾಗದಲಿ ಪಾತಾಳವಿಹದು ॥೨೦॥

ಶ್ಲೋಕ

ಭೂಲೋಕನಾಭಿ ಮಧ್ಯಸ್ಥಂ ಭುವರ್ಲೋಕಂತು ಕುಕ್ಷಸೀ । ಜನೋಲೋಕಂ ಕಂಠದೇಶೇ ತಪೋಲೋಕಂ ಲಲಾಟಕೇ । ವಕ್ಷಸ್ಥಲೇ ಸುವರ್ಲೋಕಂ ಕುಕ್ಷಸು ಮಹರ್ಲೋಕಂ। ಸತ್ಯಲೋಕಂತು ಮೂರ್ಧ್ನಿಸ್ತು ಭುವನಾನಿ ಚತುರ್ದಶಾ ॥೨೧॥

ಪದ

ಭೂಲೋಕ ನಾಭಿ ಮಧ್ಯ ಭೂರ್ಲೋಕದಲಿ ಕುಕ್ಷಿ। ಮೇಲು ಸುವರ್ಲೋಕದಲಿ ವ್ಯದು ಹೃದಯ ಶ್ರೀವತ್ಸ। ಶ್ರೀಲೋಲನ ಕುಕ್ಷಗಳು ಸೇರಿ ಇಹವು ಮಹರ್ಲೋಕದಿ । ಮಾಲೆ ಕೌಸ್ತುಭ ಜನೋಲೋಕದಿ ಮತ್ತೆ ಕೊರಳು ಇಹದು। ತಪೋಲೋಕ ಲಲಾಟವು ತಲೆ। ಸತ್ಯಲೋಕದಲಿ **ವಿಪರೀತವಿರಾಟ್‌ರೂಪ** ವಿಶ್ವ ತೈಜಸ ಪ್ರಾಜ್ಞತುರ್ಯ। ಉಪೇಂದ್ರ ಎಪ್ಪತ್ತೆರಡು ಸಾಸಿರ ಉಪನಾಡಿಯಲ್ಲಿಹ । ಉಪಾಸ್ಯನಾಗಿ ಇಹ ಕಾಣೊ ಶ್ರೀ ಹೃದಸ್ಥನಾಗಿ। ಕಪಟನಾಟಕ ಸೂತ್ರಧಾರಿ ಕಾಣೋ ಶ್ರೀ ಪುರಂದರ ವಿಠ್ಠಲ ॥೨೧॥

॥ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

---

ಟೀಪು: ಇದು ಆಗ್ನೇಯಪುರಾಣೋಕ್ತ ಮಾನಸಪೂಜಾಕ್ರಮವನ್ನು ಶ್ರೀ ಪುರಂದರ ದಾಸರು ಆಧಾರಪೂರ್ವಕ ರಚಿಸಿದ್ದಾರೆ. ಇದರಲ್ಲಿ ೨೦-೨೧ ಶ್ಲೋಕದಲ್ಲಿ ಪರಮಾತ್ಮನ ವ್ಯಾಪ್ತಿ ಎಲ್ಲಕಡಿಯಲ್ಲಿಯೂ, ಮತ್ತು ಇದರ ವಿಪರೀತವಾಗಿ ಒಂದೊಂದವಯವದಲ್ಲಿಯೂ ಸಹ ಪಾತಾಳಾದಿ ಲೋಕಗಳು ಅವೆ. ಸರ್ವಾವಯವ ಪರಿಪೂರ್ಣನೆಂದು ಉಪಾಸನೆ ಒಂದರೊಳಗೊಂದು ಬೆರದಿಹ ಇಂದಿರೇಶನರೂಪಗಳು ಅಧಿಕಾರ ವಿವಕ್ಷತೆಯಿಂದ ಚಿಂತಿಸದು ವಿಪರೀತ ವಿರಾಟರೂಪ ಧ್ಯಾನ ಚಿಂತನೆ ಭಾಗವತಕ್ಕೆ ವಿರೋಧವಿಲ್ಲ.

## ಶ್ರೀ ವಿಜಯವಿಠಲರ ಪದ ೨

**ರಾಗ ಕೇತಾರಗೌಳ ಝಂಪೆತಾಳ**

ಮನಸು ನಿಲ್ಲಿಸುವದು ಬಹಳ ಕಷ್ಟ। ಗುಣಿಸುವದು ನಿಮ್ಮೊಳಗೆ ನೀವು ನೆರೆಬಲ್ಲವರು ॥ಪಲ್ಲ॥ ಮುರದೋಡಿಬರುವ ರಣರಂಗ ನಿಲಿಸಬಹುದು ಹರುವ ನದಿಗಳ ತಿರುಹಿ ನಿಲಿಸಬಹುದು ॥ ಕರಿಸೊಕ್ಕಿಬರುತಿರಲು ತಡೆದು ನಿಲಿಸಲಿ ಬಹುದು। ದುರುಳಮನ ನಿಲಿಸುವದು ಸುರರಿಗಳವಲ್ಲಾ ॥೧॥ ಭೈರವನ ದಾಡಿಯನು ಬಡದು ನಿಲಿಸಲಿಬಹುದು। ಮಾರುತನ ತರುಬಿ ನಿಲ್ಲಿಸಲಿ ಬಹುದು ॥ ಮಾರಿಗಳ ಮುಂಜರಗುತುಡಕಿ ನಿಲಿಸಲಿ ಬಹುದು । ಹಾರಿ ಹಾರುವ ಮನಸು ನಿಲಿಸನೆಲೆನ್ನ ವಳಲ್ಲ ॥೨॥ ಶರಧಿಗಳ ಭೋರ್ಗರೆವಧ್ವನಿಯ ನಿಲಿಸಲಿಬಹುದು। ಸುರಿವ ಬಿರಿಮಳೆಯನ್ನು ನಿಲಿಸಬಹುದು ॥ ಹರಿದೋಡುವ ಮನಸ್ಸು ನಿಲಿಸಲೆನ್ನಾರಳವೇ । ಸಿರಿಯರಸ ವಿಜಯವಿಠಲ ತಾನೇ ಬಲ್ಲಾ ॥೩॥

### ಪದ ೩

( ಐತಿಹಾಸಿಕ ) ಬಿಂಬಾಹ್ವನೆ ಪ್ರಾರ್ಥನೆ.

**ರಾಗ ತೋಡಿ ಅಟ್ಟತಾಳ**

ಹರಿಮಣಿವರ್ಣ ವಿಠಲಾ ನಿನ್ನವನೋ । ಪರಮ ಪ್ರೀತಿಯಿಂದ ಪಾಲಿಸಬಾರಯ್ಯಾ ॥ಪಲ್ಲ॥ ಹೃದಯ ಪಂಕಜದಳ ಕೂಡಿತುನೋಡು । ಮುದರಿ ಕೊಂಡವು ಕುಮುದಾವೆಂಬೊ ಕಂಣು ॥ ಪದುಮನಾಭನೆ ನಿನ್ನ ನಖವೆಂಬೊ ರವಿವದನವೆಂಬೊ ಚಂದ್ರಮ ವುದಿಸಲಿ ॥೧॥ ಬಿರಿದಾಗಿ ಕಿವಿಯೆಂಬೋ ಮನೆಯಿಪ್ಪವು। ಸ್ಪರಿಶಾಮಾಡುವೆನೆಂದು ಕಲಿಸುಳಿದಾ ॥ ಹರಿ ನಿನ್ನ ಗೆಜ್ಜೆಧ್ವನಿಯಿಂದಾ ಕರ್ನಮಂದಿರವೆ ತುಂಬಲಿ। ಕಲಿಅಡಿಗಿಪೋಪಾ ॥೨॥ ನಾಸ ದುರ್ವಾಸನೆಗೆ ಯಿಚ್ಛೆಮಾಡಿತು। ಹೇಸಿಕೆ ರಸಗಳಿಗೆ ಜಿಂಹ್ವೆ ಪೋಗುವದು ॥ ಪೂಸಿದಾ ದಿವ್ಯಗಂಧ ದಿವ್ಯವಾಸನೆ ಬರಲಿ। ಲೇಸು ನಿನ್ನ ನಾಮರಸ ಸುರಿಸುವಂತೆ ಮಾಡು ॥೩॥ ನೀನಿಲ್ಲದೆ ತುಲಾ ಕಾವೇರಿಯೊಳಗೆ। ಸ್ನಾನ ಜಪತಪಂಗಳು ಮಾಡುವದ್ಯಾಕೆ॥ ಕಾಣದಿರೆ ನಿನ್ನ ಚರಣ ಸಿರಿ। ಪ್ರಾಣರಿಗೆ ಪ್ರಾಣನಾದ ಬಲು ಮೋಹನ್ನ ॥೪॥ ಈ ಕ್ರೋಧ

ನಾಬ್ದ ಅಶ್ವಿಜ ನಿನ್ನ ಪಕ್ಷಾದ। ಯೇಕಾದಶಿ ರಾತ್ರಿಯೊಳು ಬಾ ಹೃದಯ ದೊಳಗೆ॥ ಯ್ಯಾಕೆ ಕೊಡದಯ್ಯಾ ಜೀಯಾ ಪೇಳೊ ಯನ್ನೊಡೆಯಾ। ಲೋಕಚರಿಸುವದೇನು ನಿನ್ನ ಪೋಗಾಡಿ॥೫॥ ಧವಳಗಂಗೆಯೊಳಂದ ಬಿದ್ದು ಬಂದಾಗ। ಕವಿ ವಾದಿರಾಜಗೊಲಿದೂ ಬಂಲಿಲ್ಲಿವೇ॥ ಅವರ ದಾಸಾನು ದಾಸನು ಸತತ ನಾನು। ತವಕದಿಂದಲಿ ಬಾರೊ ಭಕ್ತವತ್ಸಲಾ॥೬॥ ಅರ್ಚಿಸಬಲ್ಲೆನೆ ದೇವಾ ನಿನ್ನನುದಿನಾ। ಗಚ್ಚರಿತವಂದಲ್ಲದೆ ಮತ್ತಾವದರಿಯೆ ಅಚ್ಚುತದಾಸರ ಪ್ರೀಯಾ ವಿಜಯುತಲಾ। ಬೆಚ್ಚಿಸಿದೋಪಾದಿಯಲ್ಲಿ ಪೊಂದಿ ಬಾರಯ್ಯಾ॥೭॥

## ಪದ ೪

### ರಾಗ ಭೈರವಿ ತ್ರಿವಿಡಿತಾಳ

ಆವಾವ ಬಗೆಯಿಂದ ಹರಿಗರ್ಪಿಸೋ। ಭಾವಶುದ್ಧನಾಗಿ ಮುಖ್ಯತ್ವ ವೊಹಿಸದೆ॥ಪಲ್ಲ॥ ನೋಡುವ ನೋಟಗಳು ಹರಿಯೇ ನೋಡಿದನೆನ್ನಿ। ವೋಡುವಾಟಗಳು ಹರಿಯೇ ವೋಡಿದನೆನ್ನಿ॥ ಆಡುವಾ ಮಾತುಗಳು ಹರಿನುಡಿದನೆನ್ನಿ॥೧॥ ನಡೆವ ನಡಿಗೆಯೆಲ್ಲ ಹರಿಯೇ ನಡೆದನೆನ್ನಿ। ಕೊಡುವ ದಾನಗಳು ಹರಿಯೇ ಕೊಟ್ಟನೆನ್ನಿ॥ ಒಡನಾಡುವಾ ಲೀಲೆ ಹರಿಯೇ ಆಡಿದ ನೆನ್ನಿ। ಪಿಡಿವಚೇಷ್ಟಿಗಳೆಲ್ಲ ಹರಿಯೇ ಪಿಡಿದನೆನ್ನಿ॥೨॥ ಕೇಳುವಶಬ್ದಗಳು ಹರಿಯೆ ಕೇಳಿದನೆನ್ನಿ। ಹೇಳುವ ವಿಧವನಿತ್ತುದು ಹರಿಯೇ ಎನ್ನಿ॥ ಮಾಲೆ ಧರಿಸುವಾದು ಹರಿಯೆ ಧರಿಸಿದನೆನ್ನಿ। ಮೇಲು ಸುಖಬಡುವದು ಹರಿಯೆ ಎನ್ನಿ॥೩॥ ವಾಸನೆಕೊಂಬುವದು ಹರಿಯೆಕೊಂಡದನೆನ್ನಿ। ಭೂಷಣ ವಿಡುವದು ಹರಿಯೇಯೆನ್ನಿ॥ ಲೇಸು ಬಯಸುವದು ಹರಿಯೇ ಬಯಿಸಾ। ಗ್ರಾಸಮೆಲ್ಲುವದೆಲ್ಲ ಹರಿಯೇಯೆನ್ನಿ॥೪॥ ಸತಿಯಕೂಡುವದೆಲ್ಲ ಹರಿಯೆ ಕೂಡಿದನೆನ್ನಿ। ಹಿತವಾಗಿಪ್ಪೋದು ಹರಿಯೇ ಎನ್ನಿ॥ ಸುತರ ಪಡದದ್ದೆಲ್ಲ ಹರಿಯೇ ಪಡದಾನೆನ್ನಿ। ಪ್ರತಿಕೂಲವಾಗುವದೇ ಹರಿಯೇ ಎನ್ನಿ॥೫॥ ಬಳಗಸಾಕುವದೆಲ್ಲ ಹರಿಯೆ ಸಾಕಿದನೆನ್ನಿ। ಸುಲಭರಾದರೆ ಹರಿಯಾದ ನೆನ್ನಿ॥ ಗಲಭೆಮಾಡುವದೆಲ್ಲ ಹರಿಯೆಮಾಡಿದನೆನ್ನಿ। ಸುಳಿದಾಡುವದೆಲ್ಲ ಹರಿಯೆ ಎನ್ನಿ॥೬॥ ಏನಂಬೆ ಹರಿ ಲೀಲೆ ನಿರ್ದೋಷ ನಿಸ್ಸಂಗಾ। ಅನಂತ

ಕಾಲಕ್ಕು ಯೆಲ್ಲಿದ್ದರೂ ॥ ಜ್ಞಾನಮಯ ಕಾಯ ವಿಜಯವಿಠ್ಠಲರೇಯಾ । ನಾನಾ ವ್ಯಾಪಾರಂಗಳಮಾಳ್ಪ ನೆನ್ನಿ ॥೬॥

### ಪದ ೫

ಅಧ್ಯಾತ್ಮ ಉಪಾಸನಾ

ರಾಗ ರೇಗುಪ್ತಿ ಅಟ್ಟತಾಳ

ಅರ್ಚನೆ ಬಗೆ ಕೇಳಿ ಲೋಕ ॥ಪಲ್ಲ॥ ಕಣ್ಣುಮುಚ್ಚಿ ಕುಳಿತರೆ ಕೊಡ ಹರಿ ಮುಕ್ತಿಲೋಕಾ ॥ಅ ಪಲ್ಲ॥ ಜಡವಪೂಜಿಸಿದರಲ್ಲೇನೂ ತಾನು । ಜಡ ತುಲ್ಯ । ನಾಗಿದ್ದದಕೆ ಸಮವೇನೋ ॥ ಕೆಡದಿರು ಇದರೊಳು ನೀನು । ತಿಳಿ ವಡನೆ ಕರ್ಮಂಗಳಲ್ಲೇನುಂಟು ಕಾಣೊ ॥೧॥ ಯೇಕಾಂತದಲ್ಲಿ ನಿನ್ನ ಮನಸ್ಸು । ಅನೇಕವಾಗುವದು ನಿರಂತರಗುಣಿಸು ॥ ನೀ ಕೇಳು ಯೋಚಿಸಿ ಗಣಿಸು ಸರ್ವ । ಆಕಾರದಲ್ಲಿ ಶ್ರೀಹರಿಯನ್ನೆ ನೆಸಿಸು ॥೨॥ ತ್ರಿವಿಧ ಜೀವರು ಮಾಡುವಂಥ । ನಡತಿ । ಹವಣವ ನೋಡಿದು ಪಂಥ ॥ ಕವಿಗಳೊಡನೆ ಸುಪಂಥ ದಿಂದ । ಪವಮಾನಮತ ಪೊಂದಿ ಭಜಿಪದು ಯಿಂಥಾ ॥೩॥ ದ್ವ್ಯಣುಕವಿಡಿದು ಬಹುಕಾಲಾ । ತನಕ । ಎಣಿಕೆ ಮಾಡುತಲಿರು ನಿತ್ಯ ಸುಶೀಲ ॥ ಗುಣವಂತನಾಗೊ ನೀ ಬಹಳ ಸುಖ । ವನಧಿ ರಂಗನ್ನ ವ್ಯಾಪಾರ ವೆನ್ನು ಬಾಲಾ ॥೪॥ ಆವಾಗ ಮರಿಯದಿರು ಹರಿಯಾ । ಕಂಡ ಠಾವಿನಲಿ ಯೋಚಿಸು । ಅರಘಳಿಗೆ ಒಯಸದಿರು ಸಿರಿಯಾ ॥ ದೇವ ವಿಜಯವಿಠ್ಠಲ ಧೊರೆಯಾ । ನಿನ್ನ । ಭಾವದಲ್ಲಿ ತಿಳಿಯೊ ಆತನ ಚರಿಯಾ ॥೫॥

### ಪದ ೬

ರಾಗ ಕಾಂಬೋದಿ ಝಂಪಿತಾಳ

ಅಂತರಂಗದ ಕದವು । ತೆಗೆಯಿತಿಂದು ॥ ಎಂತು ಪುಣ್ಯದ ಫಲಾ ಪ್ರಾಪ್ತಿ ಫಲಿಸಿತೊ ಎನಗೇ ॥ಪಲ್ಲ॥ ಯೇಸು ದಿನವಾಯಿತೊ ಬೀಗ ಮುದ್ರೆಯುಮಾಡಿ । ವಾಸವಾಗಿದ್ದರು ದುರುಳರಲ್ಲೀ ॥ ಮೋಸವಾಗಿತ್ತು ಇಂದಿನ ತನಕ ಮಸಿನ । ರಾಶಿವೊಳಗೆ ಹೂಳಿಕಾಣಿಸುತ್ತಿದ್ದಿಲ್ಲಾ ॥೧॥ ಗುರು ಕರುಣವೆಂಬಂಥ ಕೀಲಿ ಕೈದೊರಕಿತು । ಹರಿಕರುಣವೆಂಬಂಥ ಶಕ್ತಿಯಿಂದ ಪರಮಭಾಗವತರ ಸಹವಾಸದಲಿ ಪೋಗಿ । ಹರಿ ಸ್ಮರಣೆಯಿಂದಲಿ ಬೀಗವನು ತೆರದೆ ॥೨॥ ಸುತ್ತಲಿದ್ದವರೆಲ್ಲ ಪಲಾಯನರಾದರೂ । ಬತ್ತಿಕಕ್ಕಡಿಜ್ಞಾನ

ವೆಂಬ ದೀಪಾ ॥ ಜತ್ತಾಗಿ ಹಿಡಕೊಂಡು ದ್ವಾರವನು ಪೋಗಲು। ಎತ್ತ ನೋಡಿದರತ್ತ ಶ್ರಿಂಗಾರಸದನಾ॥೩॥ ಹೊರಗೆ ದ್ವಾರವು ನಾಲ್ಕು ವೊಳಗೈದು ದ್ವಾರಗಳು। ಪುರದ ದ್ವಾರಾದಿಗೆ ಪ್ರಾಣಾದಿ ಜಯರೂ ॥ ಮಿರಗುವ ಮಧ್ಯ ಮಂಟಪ ಕೋಟಿ ರವಿಯಂತೆ। ಸರಸಿಜಾನಾಭನ ಅರಮನಿಯಸೊಬಗೂ ॥೪॥ ಸ್ವಮೂರ್ತಿ ಗಣ ಮಧ್ಯ ಸಚ್ಚಿದಾನಂದೈಕ। ರಮೆಯಧರದಿಂದಲಾ ಲಿಂಗತ್ವದೀ ॥ ಕಮಲಜಾದಿಗಳಿಂದ ನುತಿಸಿಕೊಳ್ಳುತ ಹೃದಯ। ಕಮಲ ದೊಳಗಿರ್ದ ವಿಜಯವಿಠ್ಠಲನ್ನ ಕಂಡೇ ॥೫॥

## ಪದ ೭

### ರಾಗ ಭೈರವಿ ತ್ರಿವಿಡಿತಾಳ

ವಿಗ್ರಹವನೆ ನಿಲ್ಲಿಸೊ ವೆಂಕಟ ನಿನ್ನ ಗಗ। ನಾಗ್ರಕೆ ಬೆಳೆದು ಗಂಗೆಯ ಪಡೆದ ನಿನ್ನ ॥ಪಲ್ಲ॥ ರನ್ನದ ಮುಕುಟ ಸುವರ್ಣ ಕುಂಡಲತೇಜ। ಚನ್ನ ಗಂಡಸ್ಥಳದಿ ತೂಗಿ ವೊಳೆವ ನಿನ್ನ ॥೧॥ ಕೊರಳು ತ್ರಿರೇಖೆಯುಕ್ತ ಕೌಸ್ತುಭ ಹಾರಾ। ಉರದಲ್ಲಿ ಸಿರಿವತ್ಸ ಧರಿಸಿ ಮೆರೆವ ನಿನ್ನ ॥೨॥ ಕುಕ್ಷಿಯೊಳಗೆ ಅಕ್ಷಲೋಕವನು ಅಡಗಿಸಿ। ಪೇಕ್ಷೆಯಿಂದಲಿ ಸುರರ ರಕ್ಷಿಸಿ ನಗುವ ನಿನ್ನ ॥೩॥ ನಖದೊಳಾನಂತ ಬ್ರಹ್ಮಾಂಡವನಡಗಿಸಿ। ಮುಕ್ಕಳಾಟಿಕೆಯಿಂದ ಮರಳು ಮಾಡುವ ನಿನ್ನ ॥೪॥ ಉತ್ಪತ್ತಿ ಸ್ಥಿತಿಲಯ ಕಾರಣಕರ್ತ ಜಗ। ತ್ಪತಿ ವಿಜಯವಿಠ್ಠಲ ವೆಂಕಟ ನಿನ್ನ ॥೫॥

## ಪದ ೮

### ರಾಗ ಶಂಕರಾಭರಣ ಅಟ್ಟತಾಳ

ಮಾನಸ ಪೂಜೆಯನು ಮಾಡು। ಧ್ಯಾನಪೂರ್ವಕದಿಂದ ಕುಳಿತು। ಜ್ಞಾನ ಭಕುತಿಯ ವಿಡಿದು। ಲಕುಮಿ ಪ್ರಾಣನಾಥನ್ನ ಪ್ರೇರಣೆಯಿಂದ ॥ಪಲ್ಲ॥ ಕಾಮಕ್ರೋಧವ ಹಳಿದು ವಿಷಾದ। ಸ್ತೋಮಗಳನು ತೊರೆದು। ರಜೋ ತಾಮಸ ಬುದ್ಧಿಯಬಿಟ್ಟು। ನೇಮನಿತ್ಯ ತೀರಿಸಿ ॥ ಶ್ರೀಮದಾನಂದ ತೀರ್ಥರ। ಕೋಮಲಾಂಘ್ರಿಯ ಕಮಲದಲ್ಲಿ ಈ ಮನಸು ಇಟ್ಟು ನೀ ನಿಷ್ಕಾಮದಲಿ ಬಗೆಯ ತಿಳಿದು ॥೧॥ ಹೃದಯ ಪದುಮದೊಳಗೆ ಹರಿಯ ಪದುಮಗಳಿಟ್ಟು । ದೇಹ। ಕದಲದಂತೆ ಇಷ್ಟು ಜ್ಞಾನ। ಉದಿತವಾದ

ದೃಷ್ಟಿಯಾ ॥ ಹದುಳದಿಂದಲಿ ತಿಳಿದು ಅಂತರಂಗದಲಿವ್ರುಳ್ಳವೆಲ್ಲ ನೋಡಿ । ಕದವ ತೆರದಕೊಟ್ಟು ತೆರದಿ । ಮುದದಿ ಧೃಡವಸಂಪಾದಿಸಿ ॥೨॥ ನೀಲ ರತುನದಂತೆ ಹೊಳೆವ ಪಾಲಸಾಗರ ತನುಜೆ । ಅಲುಮೇಲು ಮಂಗರಮಣ ನಾದ ಮೇಲುಗಿರಿಯ ತಿಮ್ಮನ ॥ ಲಾಲಣೆಯಿಂದ ತುತಿಸಿ ತವಕ । ಬೀಳದಲೆ ಪೂಜಾವಿಧ । ಸಾಲುಗಳನ ತಿಳಿದು ವಿಶಾಲಬುದ್ಧಿ ಯುಕುತಿ ಯಿಂದ ॥೩॥ ವೇದಮಂತ್ರಗಳನ್ನು ಪೇಳಿ ಆದಿಯಲ್ಲಿ ಪೀಠಪೂಜೆ । ಯಾದ ತರುವಾಯ ವಿ । ನೋದದಿಂದಲಾವರಣಾ ॥ ಆದುಣೆಯಾದ ಬಳಿಕ । ಮಾಧವಂಗೆ ಸಕಲ ಭೂಷ । ಣಾದಿಗಳನು ರಚಿಸಿ ನೀ ಪುಣ್ಯ । ಹಾವಿಯನು ತಪ್ಪದೆ ॥೪॥ ದೋಷರಾಶಿಗೆ ದ್ವೇಷನಾಗಿ । ಈ ಶರೀರವ ಘಾಸಿಮಾಡದೆ । ನಾಶರಹಿತನಾದ ಹರಿಯ । ಆ ಶಿರಸು ಪಾದಾ ॥ ಲೇಶಿನಿಂದ ಭಜನೆಗೈದು । ವಾಸವಾಗುವ ಪದವಿಯಲ್ಲಿ । ಶ್ರೀಶ ವಿಜಯವಿಠಲರನ್ನ । ದಾಸದಾಸರ ದಾಸನೆಂದು ॥೫॥

## ಪದ ೬

ರಾಗ ಶಂಕರಾಭರಣ ಅಟ್ಟತಾಳ

ಭಜಿಸಿದ್ಯಾ ಈ ಭಾಗ್ಯನಿಧಿಯಾ । ಭಜಿಸಿದ್ಯಾ ಈ ಭಾಗ್ಯಸಿಧಿಯಾ । ನೋಡು । ತ್ರಿಜಗವಂದಿತ ಗುಣಾಂಬುಧಿಯಾ ॥ ಹಾಹಾ ॥ ಸುಜನರ ಹೃದಯಪಂಕಜ ಕರ್ನಿಕೆವಾಸ । ಅಜ ಸುರಾರ್ಚಿತಪಾದ । ರಜತಮೋ ದೂರನ್ನ ॥ಪಲ್ಲ॥ ಮಣಿಮಯ ಖಚಿತ ಕಿರೀಟ । ಚಂದ್ರ । ಮನ ಸೋಲಿ ಸುವ ಲಲಾಟ । ಸಣ್ಣ ಫಣಿ ಕಸ್ತೂರಿನಾಮಮಾಟ ನ । ಮ್ಮನು ನೋಡುವ ವಾರೆ ನೋಟ ॥ ಹಾಹಾ ॥ ಕನಕ ಮಕರ ಮೋಹನ ಕುಂಡಲ ಕರ್ನ । ಮಿನಗುವ ಕದಪು ಅವಿನ ಸೋಲಿಸೆ ನಿತ್ಯಾ ॥೧॥ ಭೃಂಗಕುಂತಳ ನೀಲ ಕೇಶಾ । ಪುಬ್ಬು ಅಂಗಜ ಚಾಪವಿಲಾಸ ಉ । ತ್ತುಂಗ ಚಂಪಕ ಕೋಶನಾಸ ರಸಾ । ರಂಗುದುಟಿ ಮಂದಹಾಸ ॥ ಹಾಹಾ ॥ ತಿಂಗಳ ಎಳೆಬೆಳದಿಂಗಳ ಮಿಗೆ । ಭೂ । ಮಂಗಳಾಕೃತಿ ತಿರುವೆಂಗಳ ಸ್ವಾಮಿಯ ॥೨॥ ಪರಿಮಳವೀಳ್ಯೆ ಕರ್ಪುರ । ವಿಟ್ಟು । ಕರಡಿಗೆ ಬಾಯ ಮಧುರ । ವಾಣಿ । ಸ್ವರನಾದಾ ಜಲಧಿ ಗಂಭೀರ । ದಂತ । ಪರಿ ಪಂಕ್ತಿ ಸಮವಿಸ್ತಾರ ॥ ಹಾಹಾ ॥ ಮಿರಗುವಾನಂತ ಚಂದಿರ ತೇಜಾಧಿಕ ಮುಖ । ಪರಿಪರಿ ವೇದ ಉಚ್ಚರಿಸುವ ಚತುರನ್ನ ॥೩॥

ಬಕುಳಾರವಿಂದ ಮಲ್ಲಿಗೆ ಕುರು। ವಂಕ ಪನ್ನೀರು ಸಂಪಿಗೆ। ಪೊಂಗೇ । ತಕಿ ಮರುಗು ಶಾವಂತಿಗೆ । ಭೂಚಂ। ಪಕ ಜಾಜಿ ಇರವಂತಿಗೆ ॥ ಹಾಹಾ ॥ ಸಕಳವು ತುರುಬಿರೆ(ಗೆ) ಮುಕುಳಿತಾ ವಿಕಶಿತ। ಮಕರಂದ ಮಾರಂದೋ। ದಕ ಸುರಿಯುಲಿಂದು ॥೪॥ ಕಡಗ ಕಂಕಣಮುದ್ರೆ ಬೆರಳಾ। ಪಾಣಿ। ನಿಡಿ ದೋಳು ಕಕುಭುಜ ಕೊರಳಾ। ಸ್ಕಂಧ ಪಡಿ ಸಪ್ತಪರ್ನಾದಿ ಸರಳಾ ಬೆನ್ನು। ಮುಡಿಯಲ್ಲಿಟ್ಟಾ ಮಣಿ ಹರಳ ॥ ಹಾಹಾ ॥ ಜಡಿತಾದಪವಿ ಅಳವಡಿಸಿದ ಕೇಯೂರ। ಒಡ್ಡನೆ ತಾಯಿತ ಕೀರ್ತಿ। ವಡವೆಲಿ ಮೆರೆವನ್ನ ॥೫॥ ಕರತಳ ರೇಖೋಪರೇಖಾ। ಕಾಂತಿ। ಅರುಣ ಸುರವಿ ಮಯೂಖ। ಬ್ಯಾರೆ। ಪರಿಶೋಭಿಸುವ ಹಿಸ್ತಶಾಖಿ। ಮೇಲು। ಧರಿಸಿದ ಚಕ್ರಾದಿಶಂಖ॥ ಹಾಹಾ॥ ಸರಿಗೆ ಕೌಸ್ತುಭಮಣಿ ಸಿರಿವತ್ಸ ವನಮಾಲಾ। ಉರ ವೈಜಯಂತಿ ಮಂದಾರ ಹೀರ ಹಾರನ್ನ ॥೬॥ ಮುತ್ತು ವೈಡೂರ್ಯ ಪ್ರವಾಳಾ। ಪಚ್ಚಾ ಕೆತ್ತಿದ ಪದಕ ನ್ಯಾವಳ ಸುತ್ತ। ಸುತ್ತಿದ ಸನ್ಮುಡಿವಾಳ। ಈತಾ ಸ್ತುತ್ತಿಪ ಜನಕೆ ಜೀವಾಳ॥ ಹಾಹಾ ॥ ಪ್ರತ್ಯೇಕವಾಗಿ ತೂಗುತಿಹ ಸರಗಳು। ತತ್ತುಲಸಿ ದಾಮ ಚಿತ್ರವಾಗಿರೆ ಬಲು ॥೭॥ ಪುಣುಗು ಕೇಸರ ಗಂಬೂರ। ಗೋರೋ। ಚನ ನಖ ಚಂದನ ಅಗರ। ಪಚ್ಚೆ। ನೆನೆ (ತೆನೆ) ಮೃಗನಾಭಿ ಪನ್ನೀರ। ವ್ಯಾಳ। ಘನ ಪರಿಮಳಗಂಧ ಸಾರ ॥ ಹಾಹಾ ॥ ತನುವಿಗೆ ತನುವು ಲೇಪನ ವಾದ ಸೊಗಸು ವಾ। ಸನೆ ಸುತ್ತ ಘಮುಘಮ ತನುರುಹಾವಳಿ ತಿಳಿ ॥೮॥ ತ್ರಿವಳಿ ಉಪಗೂಢ ಜಠರ। ಅಖಿಳವನಿ ಧರಿಸಿದ ಧೀರ। ನಾಭಿ। ಸೂವರ್ನ ಕುಸುಮ ಮಂಜೀರ। ಮೃಗ। ದೆವವುಡಿ ಉಡಧಾರ॥ ಹಾಹಾ॥ ಭವಕಿಂಕಿಣಿತಳಲಾವಿ ವಸನ ಬಿರಿ। ದಾವಳಿ ತೊಡರು ದೈತ್ಯಾವಳಿ ಹರ ನನ್ನ ॥೯॥ ಊರು ಜಾನು ಜಂಘೆ ಗುಲ್ಫಾವಿ। ಚಾರಿಸೆ ಕ್ರಮಾತು ಅಲ್ಪ। ಗುಣ। ಸಾರ ಮಾಡಿಪ್ಪ ಸಂಕಲ್ಪ ॥ ಹಾಹಾ॥ ವಾರಣಕರದಂತೆ ಹಾರೈಸು ಇಂತು। ನೂಪುರ ಕಡಗ ಗೆಜ್ಜೆ ಚಾರು ಚರಣ ಪೆಂಡೆ ॥೧೦ ಮೃದುದಳಾಂ ಗುಲಿ ನಖ ಭಾಸ। ರಕ್ತ। ಪದತಳ ಧ್ವಜ ವಜ್ರಾಂಕುಶ । ಚಕ್ರ। ಪದು ಮಾದಿ ಚಿನ್ಹೆ ಸಿರ್ದೋಷ। ಹೊಹೊ। ಸುಧಿಯಾಸುರಿವ ಪೀಠ ಸರಸ॥ ಹಾಹಾ ॥ ತ್ರಿದಶನಾಯಕ ಶಿವ। ವಿಧಿಗಳ ಮುಕುಟ। ಪಾದದಲಿ ಮೃರ್ದವಾದದು ನೋಡಿ ತರುವಾಯು ॥೧೧॥ ಭಾನು ಶಶಿವರ್ನ ಪಾದ

ಪಾಪ । ಕಾನನ ದಹಿಸುವ ಪಾದ । ಕಾಮ । ಧೇನು ಚಿಂತಾಮಣಿ ಪಾದ ॥ ಬಲು ಜ್ಞಾನಾನಂದಪ್ರದ ಪಾದ ॥ ಹಾಹಾ ॥ ಅನಂತ ದಿನಕೊಮ್ಮೆ ನೀನೆ ಗತಿಯೆಂದಾ । ಮಾನವಗೆ ಬಂದು ಕಾಣಿಸಿಕೊಂಬನ್ನ ॥೧೨॥ ಅಪದಕ್ಷ ಸಾರಾಧ್ಯಕ್ಷ ಸರ್ವ । ವ್ಯಾಪಕ ಕುರುಣಿ ಕಟಾಕ್ಷ ಜಾಗ್ರ । ಸ್ವಾಪದಲ್ಲಿ ಪ್ರಾಜ್ಞಾದಕ್ಷಾ । ನಿಜ । ಆಪನ್ನರಿಗೆ ದಾವಾವೃಕ್ಷ ॥ ಹಾಹಾ ॥ ರೂಪ ರೂಪಾಂತ ವ್ಯಾಪಾರವಾಳ್ಪನ್ನ । ಆಪಾದ ರತುನ ಮೌಳಿ ಪರಿಯಂತರ ॥೧೩॥ ಹಿಂದಣ ಅನುಭವ ಧ್ಯಾನಾ ವೇಗಾ । ತಂದು ಸಂಪಾದಿಸು ಜ್ಞಾನ ಭಕ್ತಿ । ಯಿಂದ ಮುಂದಕೆ ನಿದಾನ ಚಿತ್ತಾ । ಯಿಂದ ಕೊಂಡಾಡು ಮುನ್ನಿೀನ ॥ ಹಾಹಾ ॥ ಬಂಧಾನಾ ಹರಿಸಿ ಆನಂದವ ಕೊಡುವ । ಮುಕುಂದ ಅನಿಮಿತ್ಯಬಂಧು ವೆಂಕಟನ್ನ ॥೧೪॥ ಭುಜಗಾದ್ರಿ ನಿಲಯ ಗೋಪಾಲ । ನಿತ್ಯ । ಭಜಿಸುವ ಜನರಿಗೆ ಶೀಲ । ಪುಣ್ಯ । ವೃಜ ಪಾಲಿಸುವ ವಿಶಾಲ । ಯಿತ್ತು । ನಿಜರೊಳಗಿಡುವ ಈ ಕೋಲ ॥ ಹಾಹಾ ॥ ವೃಜದಲಿ ಪುಟ್ಟಿದ ಸುಜನಾಂಬುಧಿ ಸೋಮ । ವಿಜಯವಿಠಲರೇಯ ಗಜರಾಜ ವರದನ್ನ ॥೧೫॥

## ಶ್ರೀ ಗೋಪಾಲವಿಠ್ಠಲರ ಪದ ೧೦

### ರಾಗ ಶಂಕರಾಭರಣ ಅಟ್ಟತಾಳ

ಪೂಜಿಸು ಪೂರ್ಣಾನಂದನ್ನ ಮಹ । ರಾಜಾಧಿರಾಜೇಶ್ವರನ್ನ । ರಾಜಸ ತಾಮಸತ್ವ ದೂರ ಸಾಕಾರನ್ನ । ವ್ಯಾಜವಿಲ್ಲದಲೆ ನಿರ್ವ್ಯಾಜದಿಂದಲಿ ನಿತ್ಯ ॥ಪಲ್ಲ॥ ನಾರಾಯಣ ಗುಣಪೂರ್ಣ ದೋಷ । ದೂರ ಜಗದೇಕ ಕಾರಣ ಸರ್ವ । ಸಾರ ಭೋಕ್ತ ಸ್ವರಮಣ । ಜ್ಞಾನ ವಾರಿಧಿ ಚಲ್ವ ಶ್ರೀ ರಮಣ ॥ ಹಾಹಾ ॥ ಆರಬ್ಧಾಂತಗಾಮಿ ನೀರಜದಳನೇತ್ರ । ಸಾರ ಹೃದ ಯನ ಸನ್ಮೋದದಿ ಮಾಡಿನ್ನು ॥೧॥ ಅಕಾರ ರೂಕಾರ ಮಕಾರಯಿದೆ । ಓಂಕಾರದಾಗ ವಿಸ್ತಾರ ಪುರುಷಸೂಕ್ತ ಗಾಯತ್ರಿ ವಿಸ್ತಾರ ಅದು । ನಾಲ್ಕು ವೇದಗಳಿಂದ್ವಿಚಾರ ॥ ಹಾಹಾ ॥ ಅ ಉ ಮ ಕಾರವಾಚ್ಯ ಬ್ರಹ್ಮ ಶಿವ ವಿಷ್ಣು । ಏಕೋ ನಾರಾಯಣಾನೇಕ ಪೂಜ್ಯನೆಂದು ॥೨॥ ಮೂಲ ಪ್ರಕೃ ತಿಯ ಮಂದಿರ ನೋಡು । ಮೇಲಾದವ್ಯಕ್ತ ಗೋಪುರ । ಯಿದಕೆ ಯೇಳು ಧಾತುಗಳ ಪ್ರಾಕಾರಾ । ಹೃದಯಾ ಮೂಲ ಪದುಮ ಪೀಠಾಧಾರಾ ದಲ್ಲಿ॥

ಸ್ನಾಗ ಚಿಂತಿಸಿ ಅಹಂ ಮಮ। ತ್ಯಾಗಮಾಡಿ ಬಿಡದೆ ॥೧೧॥ ಸ್ವರವರಣ ಉಚ್ಚಾರಣಮಂತ್ರ ಮರದು ಮತಿಯಾದ (?) ಸ್ಮರಣ । ದೇಹ ಧರುವ ಮುಂತಾದ ಈ ಕರಣ ದಿಂದು। ಸುರುಪ್ರೋಪದಕೆ ಹರಿಸ್ಮರಣ॥ ಹಾಹಾ॥ ಬರಿದೆ ಉಚ್ಚರಿಸದೆ ವರಣಂಗಳಲಿ ಹರಿ। ವರಣ ಬಿಂಬಾರೂಪ ಅರಿದು ಸಮರ್ಪಿಸಿ ॥೧೨॥ ಮರವಾಗು ಮನೆಯಾಗು ಹರಿಗೆ ನೋಡು। ತರುವಾಗು ಅಶ್ವಾಗು ಹರಿಗೆ ಕೇಳೊ। ಕರಿಯಾಗು ಹರಿಯಾಗು ಹರಿಗೆ ಇನ್ನು ಗಿರಿ ಯಾಗು ಧರಿಯಾಗು ಹರಿಗೆ॥ ಹಾಹಾ॥ ಪರಿಪರಿ ಏನಿಲ್ಲಿ ಪರಿಣಾಮಿಸಿದ ದೆಲ್ಲಾ। ಬರಿದಾಗಗೊಡದಲೆ ಎರಗಿ ಸಮರ್ಪಿಸಿ ॥೧೩॥ ಎಂಭತ್ತುನಾಲುಕು ಲಕ್ಷ ಯೋನಿ ಲಿಂಬಾಗೀವ ಕಮಲಾಕ್ಷ । ಅಲ್ಲಿ। ಬಿಂಬನಾಗೀವನು ಮೋಕ್ಷ। ನಿನ್ನ। ಬಿಂಬಾನೆ ನೋಡು ಪ್ರತ್ಯಕ್ಷ ॥ ಹಾಹಾ॥ ಹಂಬಲಿಸಿ ಹಲವು ಯೋನಿಗಳಲಿನ್ನು। ಉಂಬೋದುಟ್ಟದ್ದೆಲ್ಲಾ ಬಿಂಬಾ ಈತನೆ ಯೆಂದು ॥೧೪॥ ಹೊರಗೆ ಈ ಬಗೆ ಪೂಜೆಮಾಡಿ ನಿನ್ನಂ। ತರದಲ್ಲೀ ಬಗೆ ನೋಡಿ ಉಪ। ಚರಿಸಿ ಭಕ್ತಿಲಿ ಕೊಂಡಾಡಿ ನಿಜ। ಗುರು ಕೈಯ್ಯಾಗೀಫಲ ನೀಡಿ ॥ ಹಾಹಾ॥ ಮರುದಂತರ್ಯಾಮಿ ಶ್ರೀಗೋಪಾಲವಿಠಲನ್ನ। ಚರಣಕಮಲ ಮತ್ತೆ ಮರಿಯದೆ ಮನದಲ್ಲಿ ॥೧೫॥

## ಪದ ೧೧

ರಾಗ ಅಟ್ಟತಾಳ

ಮೋಸಹೋದೆನಲ್ಲ ಕಾಣದೆ ಮೋಸಹೋದೆನಲ್ಲ। ವಾಸುದೇವ ನಿತ್ಯ ವಾಸವಾಗೆನ್ನಲ್ಲಿ। ಪೋಷಿಸುತಿಪ್ಪ ವಿಶೇಷನ ಕಾಣದೆ ॥ಪಲ್ಲ॥ ಸ್ಥೂಲ ದೇಹದೊಳು ಏಳುಪರಿ ಧಾತು। ಗಳಿಪ್ಪವು ವಂದಾ। ರೊಳಗೆ ವಂದಿನ್ನು। ಕೇಳು ತ್ವಕು ಚರ್ಮ ಮಾಂಸ। ಮೇಲು ರುಧಿರ ಮ್ಯಾಲೆ ಮೇದೋ ಮಜ್ಜಾಸ್ಥಿ । ಯೊಳಿನ್ನು ಹರಿ ಇಪ್ಪ ॥೧॥ ಪ್ರಸ್ತಾವನಾಮಕನಿರುದ್ಧ ತ್ವಕ್ಕಿನಲಿ । ಪ್ರತಿಹಾರನಾಮಸಂಕರುಷಣ ಚರ್ಮ॥ ಮತ್ತೆ ಮಾಂಸ ಉದ್ಗೀಥ ವಾಸುದೇವ। ಇತ್ಥಂಡದಿ ಇವರಿಬ್ಬರು ಇಪ್ಪರು ॥೨॥ ಈ ದಾವ ರುಧಿರದಿ ನಿಧನನಾಮಕ। ಮೇದಸ್ಸಿನಲ್ಲಿಪ್ಪ ವಷಟ್ಕಾರನು॥ ಆದಿ ನಾರಾ ಯಣ ರೂಪ ಮಜ್ಜಾದಲ್ಲಿ। ಸ್ವಾದಗ್ರಹಿಸು ಸರ್ವದ ಇಪ್ಪರ ॥೩॥ ಅಸ್ಥಿ ಗಳಲ್ಲಿ ಉಪೇಂದ್ರನಾಮಕನು। ಸುತ್ತ ತನ್ನ ಪರಿವಾರಸಹಿತ ಯಾ। ವತ್ತು

ನ್ನಾಗ ಚಿಂತಿಸಿ ಅಹಂ ಮಮ । ತ್ಯಾಗಮಾಡಿ ಬಿಡದೆ ॥೧೧॥ ಸ್ವರವರಣ ಉಚ್ಚಾರಣವುಂತ್ರ ಮರದು ಮತಿಯಾದ (?) ಸ್ಮರಣ । ದೇಹ ಧರುವ ಮುಂತಾದ ಈ ಕರಣ ದಿಂದು । ಸುರುಪ್ಪೋಪದಕೆ ಹರಿಸ್ಮರಣ ॥ ಹಾಹಾ ॥ ಬರಿದೆ ಉಚ್ಚರಿಸದೆ ವರಣಂಗಳಲಿ ಹರಿ । ವರಣ ಬಿಂಬಾರೂಪ ಅರಿದು ಸಮರ್ಪಿಸಿ ॥೧೨॥ ಮರವಾಗು ಮನೆಯಾಗು ಹರಿಗೆ ನೋಡು । ತರುವಾಗು ಅಶ್ವಾಗು ಹರಿಗೆ ಕೇಳೊ । ಕರಿಯಾಗು ಹರಿಯಾಗು ಹರಿಗೆ ಇನ್ನು ಗಿರಿ ಯಾಗು ಧರಿಯಾಗು ಹರಿಗೆ ॥ ಹಾಹಾ ॥ ಪರಿಪರಿ ಏನಿಲ್ಲಿ ಪರಿಣಾಮಿಸಿದ ದೆಲ್ಲಾ । ಬರಿದಾಗಗೊಡದಲೆ ಎರಗಿ ಸಮರ್ಪಿಸಿ ॥೧೩॥ ಎಂಭತ್ತುನಾಲುಕು ಲಕ್ಷ ಯೋನಿ ಲಿಂಬಾಗೀವ ಕಮಲಾಕ್ಷ । ಅಲ್ಲಿ । ಬಿಂಬನಾಗೀವನು ಮೋಕ್ಷ । ನಿನ್ನ । ಬಿಂಬಾನೆ ನೋಡು ಪ್ರತ್ಯಕ್ಷ ॥ ಹಾಹಾ ॥ ಹಂಬಲಿಸಿ ಹಲವು ಯೋನಿಗಳಲಿನ್ನು । ಉಂಬೋದುಟ್ಟಿದ್ದೆಲ್ಲಾ ಬಿಂಬಾ ಈತನೆ ಯೆಂದು ॥೧೪॥ ಹೊರಗೆ ಈ ಬಗೆ ಪೂಜೆಮಾಡಿ ನಿನ್ನಂ । ತರದಲ್ಲೀ ಬಗೆ ನೋಡಿ ಉಪ । ಚರಿಸಿ ಭಕ್ತಿಲಿ ಕೊಂಡಾಡಿ ನಿಜ । ಗುರು ಕೈಯ್ಯಾಗೀಫಲ ನೀಡಿ ॥ ಹಾಹಾ ॥ ಮರುದಂತರ್ಯಾಮಿ ಶ್ರೀಗೋಪಾಲವಿಠಲನ್ನ । ಚರಣಕಮಲ ಮತ್ತೆ ಮರಿಯದೆ ಮನದಲ್ಲಿ ॥೧೫॥

## ಪದ ೧೧

ರಾಗ ಅಟ್ಟತಾಳ

ಮೋಸಹೋದೆನಲ್ಲ ಕಾಣದೆ ಮೋಸಹೋದೆನಲ್ಲ । ವಾಸುದೇವ ನಿತ್ಯ ವಾಸವಾಗೆನ್ನಲ್ಲಿ । ಪೋಷಿಸುತಿಪ್ಪ ವಿಶೇಷನ ಕಾಣದೆ ॥ಪಲ್ಲ॥ ಸ್ಥೂಲ ದೇಹದೊಳು ಏಳುಪರಿ ಧಾತು । ಗಳಿಪ್ಪವು ವಂದಾ । ರೊಳಗೆ ವಂದಿನ್ನು । ಕೇಳು ತ್ವಕು ಚರ್ಮ ಮಾಂಸ । ಮೇಲು ರುಧಿರ ಮ್ಯಾಲೆ ಮೇದೋ ಮಜ್ಜಾಸ್ಥಿ । ಯೊಳಿನ್ನು ಹರಿ ಇಪ್ಪ ॥೧॥ ಪ್ರಸ್ತಾವನಾಮಕನಿರುದ್ಧ ತ್ವಕ್ಕಿನಲಿ । ಪ್ರತಿಹಾರನಾಮಸಂಕರುಷಣ ಚರ್ಮ ॥ ಮತ್ತೆ ಮಾಂಸ ಉದ್ಗೀಥ ವಾಸುದೇವ । ಇತ್ಥಂಡದಿ ಇವರಿಬ್ಬರು ಇಪ್ಪರು ॥೨॥ ಈ ದಾವ ರುಧಿರದಿ ನಿಧನನಾಮಕ । ಮೇದಸ್ಸಿನಲ್ಲಿಪ್ಪ ವಷಟ್ಕಾರನು ॥ ಆದಿ ನಾರಾ ಯಣ ರೂಪ ಮಜ್ಜಾದಲ್ಲಿ । ಸ್ವಾದಗ್ರಹಿಸು ಸರ್ವದ ಇಪ್ಪರ ॥೩॥ ಅಸ್ಥಿ ಗಳಲ್ಲಿ ಉಪೇಂದ್ರನಾಮಕನು । ಸುತ್ತ ತನ್ನ ಪರಿವಾರಸಹಿತ ಯಾ । ವತ್ತು

ಧಾತಿನಲ್ಲಿ ಯೆಣಿಕೆತಟ್ಟಲಾಗಿ । ಮತ್ತೆ ಬಹು ಬಹು ರೂಪಗಳಿಂದಿಪ್ಪ ॥೪॥ ಮುನ್ನೂರಾ ಅರವತ್ತುರೂಪ ಮಜ್ಜದಲ್ಲಿ । ಮುನ್ನೂರಾ ಅರವತ್ತುರೂಪ ಅಸ್ಥಿಯಲ್ಲಿ । ಮುನ್ನೂರಾ ಅರವತ್ತುರೂಪ ಅಂಗುಲಿಪರ್ವದಲಿಪ್ಪವೆಂಬಂಥ ವಿವರನನಯದೆ ॥೫॥ ಯಾವತ್ತು ಕೂಡಲೀ ಏಳು ಧಾತುಗಳೊಳು । ಸಾವಿರವೆಂಭತ್ತು ರೂಪಂಗಳು ॥ ತಾವಿಪ್ಪವಿನ್ನು ತತ್ತ್ವಧಾರವಾಗಿ । ಜೀವ ದೇಹದಲ್ಲಿ ನಿಲಸಿಪ್ಪನ ಕಾಣದೆ ॥೬॥ ಅನ್ನಮಯ ಪ್ರಾಣಮಯಗಳು ಯೆಂತೆಂಬೊ । ಮನೋಮಯಾದಿ ಪಂಚ ಕೋಶಂಗಳು। ಇನ್ನಿದರೊಳಿದ್ದು ಲಿಂಗದೇಹಕಿನ್ನು । ಚನ್ನಾಗಿ ಕವಚದಂತಿಪ್ಪವೆಂದರಿಯದೆ ॥೭॥ ಅನ್ನಮಯ ದಲ್ಲಿ ಅನಿರುದ್ಧನಾಮಕ । ಇನ್ನು ಪ್ರಾಣದಲ್ಲಿ ಪ್ರದ್ಯುಮ್ನನೂ । ಮನೋಮಯದಲ್ಲಿ ಸಂಕರುಷಣನಾಗಿ । ಚನ್ನ ವಿಜ್ಞಾನದಿ ವಾಸುದೇವನು ಇಪ್ಪ ॥೮॥ ಷೋಡಶಕಳೆವುಳ್ಳ ಲಿಂಗದೇಹವನು ಇನ್ನು । ಕೂಡಿಪ್ಪದಿನ್ನು ಅನಾದಿ ಯಿಂದ ಜೀವಕ್ಕೆ ॥ ಮೂಢಬುದ್ಧಿಯಲಿಂದ ತಿಳಿಯಗೊಡದೆ ಅಲ್ಲಿ । ಮಾಡಿಪ್ಪರು ವಾಸ ಮೂರು ಮೂರ್ತಿಗಳಿನ್ನು ॥೯॥ ಜೀವನ ಪ್ರಮಾಣವಾಲಾಗ್ರ ಶತ ಭಾ । ಗವನು ಮಾಡಲು ತಾನು ಉಳಿದಷ್ಟು । ಈ ವಿಧಸ್ವರೂಪ ದೊಳಗೆ ಪುರುಷನಾಮಕದೇವನಿಪ್ಪನು ಜೀವಸ್ವರೂಪದಿ ॥೧೦॥ ಜೀವನ ಹೃತ್ಕಮಲಕರಣಿಕೆಯಲ್ಲಿ । ಜೀವಾಂಗುಲಿಪ್ರಮಾಣದಿಂದಾತ್ಮನೂ ॥ ದೇವ ಬಿಂಬರೂಪನಾಗಿ ವೊಳಗೆ ಯಿದ್ದು । ಅವ ಅನಾದ್ಯನಂತಕಾಲದಿ ಬಿಡದಿಪ್ಪ ॥೧೧॥ ಜ್ಞಾನಾನಂದಾತ್ಮಕನಾಗೇ ಯು ಭಕುತರಿಂದ । ಅನೇಕರೂಪ ಅಘಟಿತಾ ಘಟಿತಾ । ಜ್ಞಾನಿಗಳಿಗೆ ಪ್ರೀಯ ಗುಣಗಣಪೂರ್ಣ । ಆ ನಾರಿಸಹಿತದಿ ತಾಸಿರುತಿಪ್ಪ ॥೧೨॥ ಧೀರ ದೇಹದೊಳಗೆ ನಾಭಿಯಾ ಕೆಳಗೆ । ಆರಂಗುಲಿ ಪರಿಮಿತಾ ಆರಂಭಿಸಿ ॥ ಚಾರು ಶಿರಸಿನ ಪರಿಯಂತ ಬ್ರಹ್ಮನಾಡಿ । ಮೂರೆರಡು ಭೇದವುಳ್ಳದಾಗಿಪ್ಪದು ॥೧೩॥ ಪಂಚಭೇದವುಳ್ಳ ಬ್ರಹ್ಮನಾಡಿ ಇನ್ನು । ಪಂಚವಿಧರೂಪ ರೂಪದಿಂದೊಪ್ಪುದು ॥ ಪಂಚವಿಧ ಭಗದ್ರೂಪ ಅಲ್ಲಿದ್ದು । ಕೊಂಚವಿಲ್ಲದೆ ವ್ಯಾಪಾರಮಾಡಿಸುವರು ॥೧೪॥ ಧೀರ ವಜ್ರಕ ಹರಿದ್ವರಣ ಪ್ರದ್ಯುಮ್ನನಾ । ಆರ್ಯನಾಡಿ ನೀಲವರ್ನ ಅನಿರುದ್ಧ ॥ ತೋರುವ ಪ್ರಕಾಶಿನಿ ಶುಕ್ಲ ವಾಸುದೇವ । ಶೂರ ಸಂಕರುಷಣ ಪಿಂಗಳ ವೈದ್ಯುತಿಲಿಪ್ಪ ॥೧೫॥

ಅವ ಬ್ರಹ್ಮನಾಡಿ (ಶುಭ್ರ) ಅರುಣ ನಾರಾಯಣ । ಈವದು ಅದಕೆ ಹಿಂಭಾಗದಿ ವಜ್ರಕಾ ॥ ಆವ ಆರೂಢದಲಿ

ನೋಟ್:— ಮುಂದೆ ನುಡಿ ೧೬ ರಿಂದ ೨೬ ನುಡಿ ಪೂರ್ತಿ ದೊರೆತಿಲ್ಲ. ನಡುವಿನ ಹಳೆ ಕಾಗದವೇ ಹೋಗಿವೆ. ಈ ೧೧ ನುಡಿಗಳ ಪ್ರಮೇಯವು ಸಪ್ತಾವರಣದೇಹ, ಎಂಬ ಸುಳಾದಿಯಲ್ಲಿಯೂ ಮತ್ತು ಮಾನಸಸ್ಮೃತಿಯಲ್ಲಿಯೂ, ನಾಡಿ ವಿವರ ಸುಷುಮ್ನಾನಾಡಿಗತ ೬೨ ಕಮಲಗಳವಿಚಾರ ಹೇಳಿದ್ದಾರೆ. ಅದನ್ನು ನೋಡಿ ಚನ್ನಾಗಿ ಮನವರಿದು ಧ್ಯಾನಮಾಡಬೇಕು

ತಾ ಆಲಿಸಿ ಕೊಳುತಲಿತ್ತ ನಿಪ್ಪವರು ಸರ್ವದಾ ಬಿಡದೆ ಇನ್ನು ॥೨೬॥ ಎಪ್ಪತ್ತೆರಡು ಸಾವಿರ ನಾಡಿಗಳು । ಇಪ್ಪವು ಈ ಕಾಯದೊಳಗೆ ಇನ್ನು ನೋಡು ॥ ತಪ್ಪದೇ ಅಲ್ಲೆಲ್ಲಿ ಭಗವದ್ರೂಪಗಳು । ಒಪ್ಪುತಲಿಪ್ಪರು ಒಂದಾನಂತವಾಗಿ ॥೨೭॥ ಬಲದಿಂದ ಎಡಕ್ಕೆ ಮೂವತ್ತಾರು ಸಹಸ್ರ । ಚಲುವ ಭಗವತ್ ಸ್ವರೂಪ ಋಷಿಗಳು ॥ ಕಲಕಾಲ ಪುರುಷನಾ ಆಯುಷ್ಯವರಿತು । ಸಲಹೋರು(ಹುವರು) ಹಗಲೆ ನಿಯಾಮಕರಾಗೆಲ್ಲಿ ॥೨೮॥ ತಾವದ್ವರಣ ಸ್ವರವ್ಯಂಜನಗಳಿಂದ। ಆವ ಪ್ರತಿಪಾದ್ಯ ಶ್ರೀರೂಪಗಳು ರಾತ್ರಿ ॥ ತಾವು ನಿಯಾಮಕರು ವಾಮಭಾಗಸ್ಥದಿ । ಈವಾರು ಈ ನಾಡಿಯಲ್ಲಿ ಬಿಡದೆ ಇನ್ನು ॥೨೯॥ ಶಿರಸಿನಲ್ಲಿ ಮೋಕ್ಷ(ದಾ)ದಾತನ ಸರ್ವೇಶ್ವರಾ । ಇರುತಿಪ್ಪನು ವಾಸುದೇವನು ಆತನು ನಿತ್ಯ ॥ ಪರಿಪರಿ ಕರ್ಮವೇ ಜೀವಮಾಡುವದು ಇದರ । ಇರವನೋಡುತ ಯಿಪ್ಪ ತುರಿಯನಾಮಕನಾಗಿ ॥೩೦॥ ಶಿಖಿಯಲ್ಲಿ ಬ್ರಹ್ಮಾತ್ಮಕಾ ನಾರಾಯಣನಿಪ್ಪ । ಇಕೊ ಕೇಶದಲ್ಲಿ ಪ್ರದ್ಯುಮ್ನನಾಮಕನಿಪ್ಪ ॥ ಮುಖ ಲಲಾಟದಿ ತದಭಿಮಾನಿ ರುದ್ರನು । ಸುಖಪ್ರದಾತೃನಾಗಿ ಕೇಶವ ಇರುತಿಪ್ಪ ॥೩೧॥ ದಕ್ಷಣಾಕ್ಷಿಯಲ್ಲಿ ನಾರಾಯಣನು ತಾ ಪ್ರ । ತ್ಯಕ್ಷಸ್ತಂಭರೂಪನಾಗಿನ್ನು ಇರುತಿಪ್ಪ ॥ ಲಕ್ಷುಮಿದೇವಿ ತಾ ದಾಮರೂಪಗಳಲ್ಲಿ । ಸಾಕ್ಷಾತು ವಾಯು ತಾ ವತ್ಸರೂಪದಿ ಇಪ್ಪ ॥೩೨॥ ಏವಂ ಭೂತಾ ವಾಯುದೇವರನ್ನು ಮತ್ತೆ । ದೇವತೆಗಳು ಎಲ್ಲ ಬಿಡದೆ ನಿತ್ಯದಲ್ಲಿ ॥ ತಾ ಉಪಾಸನಿಯ ಮಾಡುತಲಿಪ್ಪವರಿನ್ನು । ಆವಾಗ ಬಿಡದಲೆ ಹರುಷದಿಂದಲಿ ಇನ್ನು ॥೩೩॥ ರಕ್ತರೇಖಿಯಲಿ ಗೌತುಮನಾಮಕ ರುದ್ರ । ಶುಕ್ಲರೇಖಿಯಲ್ಲಿ ವಶಿಷ್ಟನಾಮಕ ಇಂದ್ರ ॥ ಮತ್ತೆ ನೀಲದಿ ವಿಶ್ವಾಮಿತ್ರನಾಮಕ ಸೂರ್ಯ ।

ನಿತ್ಯದಿ ಇವರಿನ್ನು ಇಪ್ಪರು ಬಿಡದಲೆ ॥೩೪॥ ನೀರು ಬರೋಸ್ಥಾನದಲಿ ಪರ್ಜನ್ಯನೂ । ಭಾರದ್ವಾಜನಾಮಕನಾಗಿ ಇಪ್ಪ ॥ ಮೀರದೆ ಅತ್ರಿನಾಮದ್ಯು ಭಾರತಿ ವಿ। ಹರಿಸುತ್ತ ಯಾವದ್ವ್ಯಾಪಾರ ಮಾಡಿಸುವರು ॥೩೫॥ ಅಧೊ ಯವಿಯಲಿ ಇಪ್ಪ ಕಶ್ಯಪನಾಮಕನಿನ್ನು । ಅದರಲ್ಲೆ ಪೃಥ್ವಿಕ ಜೋತಿಷ ಕಪಿಲರಿನ್ನೂ ॥ ಒದಗಿ ಮುಚ್ಚಿ ತೆರಿಸುತಾ ಒಳಗೆ ಇದ್ದು। ಸದಕಾಲದಲ್ಲಿ ವಾಸಮಾಡಿಪ್ಪರು ॥೩೬॥ ಸಂಭ್ರಮಾದಿಂಧತ್ತು ಒಂಭತ್ತು ಮುಖನಾಗಿ । ಕಂಭಾನಿ ದಕ್ಷಣದಲ್ಲಿ ವಿಶ್ವನಿಪ್ಪನು ॥ ಒಂಭತ್ತೆರಡುಮುಖ (೧೮) ಮನುಷ್ಯ ಮುಖವು ಇನ್ನು । ಇಂಬಾಗಿ ಗಜಮುಖದಿ ಮಧ್ಯ ಇಪ್ಪನು ॥೩೭॥ ಎರಡು ಹಸ್ತವು ಇನ್ನು ಚರಣನಾಲಕು ನೋಡು। ಇರುತಿಹರಷ್ಟದಿಕ್ಪಾಲಕರು ಸುತ್ತಾ ॥ ಪೊರೆವ ವಿಶ್ವನು ಜಾಗ್ರವಸ್ಥಾಪ್ರದನಾಗಿ। ಧರಿಯ ಪದಾರ್ಥವ ತೋರಿಸಿಕೊಡತಲಿ ॥೩೮॥ ವಾಮಾಕ್ಷಿಯಲ್ಲಿ ವಾಮನ ಚಕ್ಷುದ್ವಯ ಸೂರ್ಯ। ಆ ಮಾತೃಕಾವರಣ ಪ್ರತಿಪಾದ್ಯ ಅಜಾದಿ ॥ ಶ್ರೀಮೂರ್ತಿಗಳು ಮಸ್ತಕಾದಿ ಯಲ್ಲಿ ಇಪ್ಪರು। ಆ ಮಹಾಪ್ರಭೆಯಿಂದ ಶೋಭಿಸುತ ನಿತ್ಯ ॥೩೯॥ ಘ್ರಾಣ ದಲ್ಲಿನ್ನು ಅಶ್ವಿನಿಯ ದೇವತೆಗಳು । ತಾನಲ್ಲಿ ಧನ್ವಂತ್ರಿನಾಮ ನಾರಾಯಣ॥ ಪ್ರಾಣದೇವನು ಇಪ್ಪ ಶ್ವಾಸದಲ್ಲಿನ್ನೂ । ಕಾಣು ಉಚ್ಛ್ವಾಸದಿ ಭಾರತಿ ಇಪ್ಪಳು ॥೪೦॥ ಉತ್ತುಮಾ ವಿಪ್ರನಾ ಶ್ರೋತ್ರಗಳಲ್ಲಿನ್ನು । ಮತ್ತೆ ಭಾಗಿ ರಥ್ಯಾದಿ ನದಿಗಳು ಇನ್ನು ॥ ಮೂರ್ತಿಮಂತನಾಗಿ ತ್ರಿವಿಕ್ರಮನು ಇಪ್ಪನು । ಸುತ್ತ ಸಕಲದೇವತಿಗಳು ಇಪ್ಪವರಿನ್ನು ॥೪೧॥ ಗಂಡಸ್ಥಾನದಿ ತ್ರಿವಿಕ್ರಮ ಮಧುಸೂದನ । ಕಂಡ್ಯಾ ಓಷ್ಠದಲ್ಲಿ ವಾಮನಾ ಶ್ರೀಧರ ॥ ಥಂಡಥಂಡದಂತ ಪಂಕ್ತಿಗಳಲ್ಲಿನ್ನು । ಕಂಡು ತಿಳಿಯೊ ಓಜೋಭೃತ ಐರಸರೂಪ ॥೪೨॥ ವರುಣ ಜಿಂಹ್ವೇಂದ್ರಿಯಲ್ಲಿ ಅಭಿಮಾನಿಯೂ । ಇರುತಿಪ್ಪನಲ್ಲಿ ಮಚ್ಛಮೂರ್ತಿ ಭಗವಂತ ॥ ಪರಶುರಾಮಾ ವನ್ಹಿ ವಾಗೇಂದ್ರಿಯಲ್ಲಿನ್ನು । ಸರಸ್ವತೀ ನಾರಾಯಣನು ವಾಕ್ಯದಲ್ಲಿಪ್ಪ ॥೪೩॥ ಕಿರಿನಾಲಿಗಿಯಲಿ ಇಂದ್ರನಾಮ ದಾಮೋದರ । ವರಕಂಠದಲ್ಲಿ ಉದಾನ ತೈಜಸಮೂರ್ತಿ ॥ ಯರಡೊಂಭತ್ತು ಮುಖ ವುಭಯಪಾರ್ಶ್ವದಲ್ಲಿ ಇರುತಿಪ್ಪ ಮಧ್ಯದಿ ಗಜಮುಖನಾಗಿನ್ನು ॥೪೪॥ ಅವನು ಪಂಚವೃತ್ತಿ ಮನೊವುಳ್ಳ ವ್ಯಾಪಾರ । ತವಕದಿಂದಲಿ ಮಾಡಿಸುತ ಯೀವೊನು ॥ ಸವನಾಗಿ ಇಂದ್ರಕಾಮರು ಮನಸಿನಲ್ಲಿ ಇದ್ದು ।

ಸುವ(ಸ್ಥಿರ)ಬುದ್ಧಿಯಲ್ಲಿನ್ನು ಉಮಾದೇವಿ ಇಪ್ಪಳು ॥೪೫॥ ಮತ್ತೆ ಅಹಂ
ಕಾರಿಕದಿ ರುದ್ರದೇವನು ಇಪ್ಪ । ಚಿತ್ತದಲ್ಲಿ ಗರುಡದೇವನಿಪ್ಪ ॥ ಮತ್ತಾವ
ಚೈತನ್ಯದಲ್ಲಿ ಶೇಷನು ಇಪ್ಪ । ನಿತ್ಯ ತೈಜಸ ಸ್ವಪ್ನಾವಸ್ಥಿಪ್ರದನಾಗಿಹ
॥೪೬॥ ಆವ ಬಿಂಬಗೇವೆ ಸುಷುಪ್ತಿಕಾಲದಿ । ಜೀವದೇಹವ ಬಿಡೋ ಉತ್ಕ್ರಮ
ಣಾಂತರಾ । ಈವ ಬಿಂಬಮೂರ್ತಿಗೇವೆ ಪ್ರಜ್ಞಾನರೂ । ಆವಾಗ ಒಪ್ಪದು
ಅರಿದು ನೋಡಲಾಗಿ ॥೪೭॥ ದೇವ ವಿಶ್ವನು ಜೀವನ ಪ್ರಕಾಶವ ಕೊಂಡು ।
ಆವ ಪ್ರಾಜ್ಞನಲ್ಲಿ ತಾ ಬಂದರೆ ॥ ಜೀವಗೆ ಸುಷುಪ್ತಿಯಾವಸ್ಥಿ ಬಂದಿನ್ನು ।
ಆವ ಬಾಹ್ಯಜ್ಞಾನ ಇಲ್ಲದೆ ಇರುತಿಪ್ಪ ॥೪೮॥ ದೇವ ಮುಖ್ಯಪ್ರಾಣ ಜೀವ
ನ್ನನು ನುಂಗಿ । ದೇವಿಲಕುಮಿಯಲ್ಲಿ ತಾ ಪೋದರೆ ॥ ದೇವಿಲಕುಮಿ ತನ್ನ
ಉದರದಲ್ಲಿಟ್ಟಿನ್ನು । ಆವ ಪ್ರಾಜ್ಞನ್ನ ಆಲಿಂಗನೆ ಮಾಡೋಳು ॥೪೯॥ ಆಗ
ಪ್ರಾಜ್ಞನು ಸ್ವರೂಪ ಜೀವನ ಸುಖ । ಬ್ಯಾಗನೆ ಅಭಿವ್ಯಕ್ತಿಯನುಮಾಡುವ ॥
ಹಾಗೆ ತಾಮಸರಿಗೆ ತನ್ನ ಸಂಬಂಧದಿಂದ । ಭೋಗ ಅನಿತ್ಯಸುಖ ಹುಟ್ಟಿಸುವ
ಇನ್ನು ॥೫೦॥ ವಿಶ್ವನು ತೈಜಸನಕೂಡಿ ಕಂಠಕೆ । ಮತ್ತೆ ಪೋದರೆ ಸ್ವಪ್ನಾ
ವಸ್ಥಿ ಆಗಾ ॥ ವಿಶ್ವನು ತೈಜಸನಬಿಟ್ಟು ಪೋದರೆ । ಮತ್ತೆ ಪುನಹ ಜಾಗ್ರ
ವಸ್ಥಿ ಬಾಹುವದಾಗ ॥೫೧॥ ಶಾರೀರ ಹೃದಯಾಖ್ಯವೆಂಬೊ ಪಟ್ಟಣಕೆ ।
ದ್ವಾರಗಳು ನಾಲ್ಕು ತೋರುತಿವೆ ॥ ದ್ವಾರ ಪ್ರಥಮದಲ್ಲಿ ಮಹಾಲಕುಮಿ
ಇನ್ನು । ದ್ವಾರ ದ್ವಿತಿಯಾದ್ಯು ಶಬ್ದವಾಚ್ಯ ಭಾರತಿಯು ॥೫೨॥ ತೃತಿಯ
ದ್ವಾರದಲ್ಲಿ ಸೂರ್ಯ ಪ್ರಾಣಚಕ್ಷು । ರಿತಿ ರೂಪತ್ರಯದಿಂದ ಸೂರ್ಯ
ನಿಪ್ಪವನು ॥ ಚತುರ ದ್ವಾರದಲ್ಲಿ ಜಯವಿಜಯರೂ ಇನ್ನು । ಸತತ ಶ್ರೀ
ಮೂರ್ತಿಯಾ ಪೂಜಿಸುತಿಪ್ಪರು ॥೫೩॥ ಪ್ರಥಮ ಮಹಲಕ್ಷ್ಮಿ ದ್ವಿಜವಾಚ್ಯ
ಭಾರತೀ ವ್ಯಾನಶ್ರೋತ್ರ । ತೃತಿಯರೂಪತ್ರಯದಿಂ ಚಂದ್ರನು ಇಪ್ಪ ॥ ಸತತ
ಕಡೆಯಲಿ ಬಲಪ್ರಬಲರು ಇಪ್ಪರು ॥೫೪॥ ಮತ್ತೆ ಪಶ್ಚಿಮದ್ವಾರದಿ ಮಹ
ಲಕುಮಿ । ದ್ವಿತಿಯ ಪೃಥಿವಿಶಬ್ದವಾಚ್ಯ ಭಾರತೀ ॥ ತೃತಿಯ ಅಪಾನನಾಮ
ಅಗ್ನಿ । ಚತುರ್ಥದಿ ಕುಮುದ ಕುಮುದಾಕ್ಷರು ಇಪ್ಪರು ॥೫೫॥ ಉತ್ತರ
ದಿಶಿಗೆ ಪ್ರಥಮದ್ವಾರದಿ ಮಹಲಕುಮಿ । ಮತ್ತೆ ದ್ವಿತಿಯ ವಿದ್ಯುನಾಮಕೆ
ಭಾರತೀ । ತೃತಿಯ ಸಮಾನನಾಮಕ ಇಂದ್ರ । ಚತುರ್ಥದಲಿ ನಂದ
ಸುನಂದನರು ಇಪ್ಪರು ॥೫೬॥ ಸತತ ಊರ್ಧ್ವದ್ವಾರ ಒಂದರಲ್ಲಿನ್ನು ।

ಹಿತ ಮಹಲಕ್ಷ್ಮಿ ಆಕಾಶ ಶಬ್ದ ಸರ। ಸ್ವತಿ ನಾಂಜನಾನು ಭಾ। ರತಿಯು ಉಪಾಸನಾಮಕ ವಾಯು। ಅತಿ ಭಕುತಿಯಿಂ ಸೇವೆಯ ಮಾಳ್ಪರು ॥೫೭॥ ಆವ ಪೂರ್ವೋಕ್ತ ಹೃತ್ಕಮಲ ಮಧ್ಯದಿ। ಈವ (ಇರುವ) ಸ್ಥೂಲಾಂಗುಲಿ ಪ್ರಮಾಣದಿಂದಲಿ॥ ದೇವ ಬಿಂಬಮೂರ್ತಿ ಆವಾಗ ಬಿಡದಲೆ। ಕಾವುತಾ ಅನುದಿನ ಕರುಣಿ ಅಲ್ಲಿ ಯಿಪ್ಪಾ ॥೫೮॥ ಆವನಾ ಹಿಂಭಾಗದಿ ಪ್ರಾದೇಶ ಪರಿಮಿತಾ। ಜೀವ ಹರಣದಿ ಪುರುಷನಾಮಕ ನಾರಾಯಣನಿಪ್ಪ॥ ಆವನು ಮೂಲೇಶನ ಪಾದ ಸಮೀಪದಿ। ಪವನದೇವನು ಯಿಪ್ಪ ಪೂರ್ವಾಭಿಮುಖವಾಗಿ ॥೫೯॥ ಮೂಲೇಶನಾ ಪಾದಗಳಿಗೆ ದೂರಾಗದಿಪ್ಪಂಥ। ಶೀಲ ಮೂರ್ತಿ ಮುಖ್ಯಪ್ರಾಣನ್ನ ಪಾದಬಳಿ॥ ಯಲಿ ಜೀವನು ಇನ್ನು ಇದೇ ಪ್ರಕಾರದಿ। ವಾಲಯಾ ಅಲ್ಲಿನ್ನು ವಾಸವಮಾಡಿಪ್ಪ ॥೬೦॥ ಹೃದಯಾಕಾಶದಲ್ಲಿ ವಾಸುದೇವನು ಇಪ್ಪ। ಸದಾ ಅಲ್ಲಿ ಬಿಡದಲಿಪ್ಪ ಪ್ರಾಣವಾಯೂ॥ ಮಧುಸೂದನನು ಇಪ್ಪ ದಕ್ಷಿಣ ಹಸ್ತದಿ। ಸದಮಲ ಕಪಿಲಾದಿ ಪಂಚ ಸಂಧಿಗಳಲ್ಲಿ ॥೬೧॥ ಚಂದದಿ ವಾಮಹಸ್ತದಲ್ಲಿ ಶ್ರೀಧರ। ಸಂಧಿಗಳಲ್ಲಿ ಚಾರ್ವಾಂಗಾದಿ ಪಂಚವು॥ ಪೊಂದಿ ಇಪ್ಪವು ಆ ರೂಪಗಳಲ್ಲಿನ್ನು। ಒಂದು ಕ್ಷಣವನ್ನ ಬಿಡದೆ ಮತ್ತೆಲ್ಲಿನ್ನು ॥೬೨॥ ಪಾಣಿಗಳಲ್ಲಿನ್ನು ದಕ್ಷನು ಇಪ್ಪನು। ಪಾಣಿ ಕುಕ್ಷಿಯಲ್ಲಿ ನಾರಾಯಣಾ। ಕಾಣೊ ಪಶ್ಚಿಮದಲ್ಲಿ ವಿಷ್ಣುನೆ ಇರುತಿಪ್ಪ। ಯೇನೊ ವಾಮನ ಪಾರ್ಶ್ವದಲ್ಲಿಪ್ಪವ ॥೬೩॥ ಪೃಷ್ಠಭಾಗದಿ ಇನ್ನು ಪದ್ಮನಾಭನು ಇಪ್ಪ। ಧಿಟ್ಟಾಸಮಾನ ವಾಯು ನಾಭಿಯಲಿನ್ನು। ಪೃಷ್ಟಂ ಗುದದಲ್ಲಿ ಅಪಾನನಿರುತಿಪ್ಪ। ನಿಷ್ಟ ಅನಿಷ್ಟಕೆ ತೊಡಕದಲೆ ॥೬೪॥ ಇಂದ್ರಿಯಲ್ಲಿ ಇನ್ನು ಮಿತ್ರನೆಂಬೊ ಸೂರ್ಯ। ಚಂದಾದಿ ಸ್ವಾಯಂಭುವನು ಗುಹ್ಯದಲ್ಲಿ॥ ಪೊಂದಿ ಕಟಿಯಲ್ಲಿ ಅನಿರುದ್ಧ ಇಪ್ಪನು। ಎಂದೆಂದು ಬಿಡದೆ ತಾ ವಾಸವಾಗಿ ಇಪ್ಪ ॥೬೫॥ ದಕ್ಷಣ ಕಾಲಲ್ಲಿ ಗರುಡ ಶೇಷ ರುದ್ರ। ಸಾಕ್ಷಾತುವಾಗಿ ಮೂರುಮಂದಿ ಇಪ್ಪರು॥ ಸೂಕ್ಷ್ಮವು ಸಂಧಿಗಳಲ್ಲಿ ಟಂಕೆ ಮೊದಲಾ। ದಕ್ಷವಾಗಿ ಐದು ರೂಪಾ ಇಪ್ಪವು ॥೬೬॥ ಎಡದಕಾಲಿನಲ್ಲಿ ಸ್ಕಂದೇಂದ್ರರು ಇನ್ನು। ಬಿಡದೆ ಸಂಧಿಗಳಲ್ಲಿ ತಾರಾಪೈದು ರೂಪ। ನಡುವ ಪಾದಗಳಲ್ಲಿ ಜಯಂತನಿರುತಿಪ್ಪ। ದೃಢವಾಗ ಯಜ್ಞನಾಮಕ ನಾರಾಯಣನಿಪ್ಪ ॥೬೭॥ ದಕ್ಷಣಾಂಗುಷ್ಠದಿ ದೇಹಧಾರನಾಗಿ। ಸಾಕ್ಷಾತು ವಾಯು

ಅಧಿಷ್ಠಾನದಿಂದಲ್ಲಿ ॥ ಲಕ್ಷ್ಮೀಶಾ ತೀರ್ಥಪಾದನಾರಾಯಣ ತಾನು । ಸೂಕ್ಷ್ಮರೂಪನಾಗಿ ಅಲ್ಲಿ ಇಪ್ಪವ ಇನ್ನು ॥೬೮॥ ಆವ ಈ ದೇಹದಿ ತತ್ವಾಭಿಮಾನಿಯರು । ದೇವತೆಗಳಿನ್ನು ನವಕೋಟಿಯು । ಅವವ ಕರ್ಮಕ್ಕೆ ನಿಯಾಮಕರು ಆಗಿ । ತಾವಿಪ್ಪರು ಸರ್ವದ ಬಿಡದೆ ಇನ್ನು ॥೬೯॥ ಇನ್ನಾವ ತತ್ವಾಭಿಮಾನಿಗಳಿಗೆ ಇನ್ನು । ಇನ್ನಂತನಂತ ಕರ್ಮಗಳಿಗೆ ಎಲ್ಲ ॥ ಇನ್ನು ನಿಯಾಮಕನಾಗಿ ನಾರಾಯಣ । ಎನ್ನ ಅಂತರ್ಯಾಮಿಯುವನೆ ಮಾಡಿಸುತಿಪ್ಪ ॥೭೦॥ ನಮೊನಮೊ ಕೇಶವಾದಿ ಮೂರುತಿಯೆ ಬಾ । ನಮೊನಮೊ ಮತ್ಸ್ಯಾದಿ ಮೂರುತಿಯೆ ನೀ ಬಾ ॥ ನಮೊನಮೊ ಅಜಾದಿ ಮೂರುತಿಯೆ ನೀ ಬಾ । ನಮೊನಮೊ ಸರ್ವೇಶಾ ಎನ್ನ ಹೃದಯವಾಸ ॥೭೧॥ ಜಯ ಜಯ ಶುಕಪಿತ ವೇದವ್ಯಾಸ ನೀನು । ಜಯ ಜಯ ಆನಂದ ತೀರ್ಥೇಶಾ ಮೂಲೇಶ ॥ ಜಯ ಜಯ ಲಕುಮೀಶಾ ವಿಜದಾಸರ ಪೋಷ್ಯಾ । ಜಯ ಜಯ ಗೋಪಾಲವಿಠಲ ಸರ್ವೇಶಾ ॥೭೨॥

## ಪದ ೧೨

ಬಿಂಬಾಪರೋಕ್ಷ ವಿಷಯ ಸಾವಯುವ ಸಾಲಂಕಾರ ಬಿಂಬಮೂರ್ತಿ ಪ್ರಾರ್ಥನೆ.

### ರಾಗ ಸೌರಾಷ್ಟ್ರ ಅಟ್ಟತಾಳ

ತೋರೊ ತೋರೋ ನಿನ್ನ ಮೂರ್ತಿಯಾ। ವಾರಿಜದಳ ನಯನನೆ। ಶ್ರೀ ರಮಣನೆ ನಿನ್ನ ಚಾರುಚರಣದ। ಆರಾಧನೆಕೊಡು ಸರ್ವದ ॥ಪಲ್ಲ॥ ಮಂಧರಧರ ಮನ್ಮಥಪಿತ। ಮಂದಹಾಸ ಮಾಧವ ಹರಿ। ಇಂದುವದನ ಅಮರೇಂದ್ರ ವಂದಿತ। ಬಂದು ಎನ್ನ ಹೃದಯದೊಳಗೆ ನೀ ॥೧॥ ಕಂಬು ಕಂಠಾ ಕೌಸ್ತುಭಹಾರಾ। ಶಂಭುಪ್ರದ ಶುಭಾಂಗನೆ। ಹಂಬಲಕೆ ಹತ್ತಿಲಿಸು ಹೃದ। ಯಾಂಬರದಿ ನಿಂದು ಪ್ರೋಕ್ಷಿವುತ ॥೨॥ ಶಂಖ ಚಕ್ರ ಶಾರಙ್ಗಧರ ಅಕಳಂಕ ಗದೆ ಪದುಮಾಂಕಿತಾ ॥ ಕಿಂಕಿಣಿ ಕಿರಿಗಂಟೆ ತೂಗುತಾ । ಟೊಂಕದಾಭರಣಾ ಎಸೆವುತ ॥೩॥ ಶೂರಾ ಪೀತಾಂಬರಧರ ಮಂ। ದಾರ ಮಾಲಿಕಾ ಭೂಷಿತಾ। ಕೀರುತಿ ಭುಜತೋಳು ಬಂದಿಯು। ವಾರಿಜಕರ ತಿರುವುತಾ ॥೪॥ ಊರು ಜಾನು ಜಂಘೆ ಗುಲ್ಫಾ। ಚಾರು ಸುಂದರ ವಿಗ್ರಹ । ಘೋರ ಸಂಸಾರವನಧಿ ದಾಟಲು ವೂರು ಮನಕೆ ನಾವಿಚಾರಣವ ॥೫॥ ಅಸಮ ಅನನ್ಯ ಅಸಹಾಯ ಸರ್ವವಶ। ವಿಶೇಷಾ ನಿಷೇಧಾಶೇಷಾ ॥ ಅಸುಳ

ಸಿರಿ ಅಜಭವರೊಡಿಯಾ। ಏಕಾದಶ ಇಂದ್ರಿಯಗಳಿಗೆ ವಿಷಯನಾಗಿ ನಿತ್ಯ ॥೬॥ ಹಾಟಕಾ ನೀನು ಕರ್ಕೋಟಕನಾ। ನೀಟುಮಾಡು ಶಂಭ ನೋಟದಿ॥ ಕೋಟಿ ರವಿತೇಜಾ ಗೋಪಾಲವಿಠ್ಠಲ। ನೇಟಾಗಿ ಮನಕೆ ನಾಟಿ ನಿಲಕುತ್ತ॥

## ಪದ ೧೩

ಅಂತರಂಗದಿಪ್ಪ ಬಿಂಬಮೂರ್ತಿಯ ಅನಂತ ಗುಣ ಕ್ರೀಯೋಪಾಸನೆ, ಶ್ರೀ ಹರಿ ಗುಣ ಮಹಿಮೆ.

ರಾಗ ಕಾಂಬೋದಿ ಝಂಪಿತಾಳ

ಇಂತು ತಿಳಿದ ಜನರಲಿ ಶ್ರೀಹರಿಯಾ। ಅಂತರಂಗದಿ ನಿಂತು ಸಾಕುವ॥ ಶ್ರೀಹರಿಯಾ॥ಪಲ್ಲ॥ ಅಣುವೆಂದು ಧೇನಿಸಲು ಅಣುವೆ ಮಹತ್ತು। ಘನ ನೆಂದು ಧೇನಿಸಲು ಅಣುವು ಆಹ। ಅಣುವು ಘನವು ಮತ್ತೆ ಮನಕೆ ಸಾರಿಲಿ ದೂರ। ಅಸಿಮಿಷರಿಗೆ ಈಶ ಅಗೋಚರನ್ನ ॥೧॥ ಜಡಗಳಲಿ ಇಪ್ಪ ಚೇತನಗಳಲಿ ಇಪ್ಪ। ನುಡಿ ಮೊದಲಾದ ಕ್ರೀಯವ ಮಾಡುತಾ॥ ಕೊಡುತಿಪ್ಪ ಕೊಳುತಿಪ್ಪ ಪಿಡಿದು ಚೇತನಕಾಗಿ। ಬಡವನಲ್ಲನು ಕಾಣೋ ಬಲು ಧೈರ್ಯನಾ ॥೨॥ ಖಂಡನಾಗಿಪ್ಪ ಅಖಂಡನಾಗಿಪ್ಪ। ಪಿಂಡಾಂಡ ಬ್ರಹ್ಮಾಂಡದೊಳಗೆ ಇಪ್ಪ। ಅಂಡಜಾ ಸ್ವೇದಜಾ ಅಖಿಳ ಜಾತಿಯೊಳಿಪ್ಪ। ಪುಂಡರೀಕಾಕ್ಷ ಶ್ರೀಪುರುಷೋತ್ತಮನ್ನ ॥೩॥ ಕಣ್ಣಿಂದ ಕೇಳುವಾ ಕರ್ಣದಲಿ ನೋಡುವಾ। ಬೆನ್ನಿಂದ ನಡಿವಾ ನಾಶಿಕದಿ ನುಡಿವಾ। ಇನ್ನು ಕರಗಳಿಂದ ತಿರುಗಿ ತಿರಿಗಾಡುವಾ। ತನ್ನ ಚರಣಗಳಿಂದ ಸಕಲ ಕ್ರೀಯವುಮಾಳ್ಪ ॥೪॥ ಒಂದೊಂದ್ರಿಯದಲಿ ದಶೇಂದ್ರಿಯ ಕರ್ಮಗಳ ಮಾಳ್ಪ। ಸಿಂದು ಮಲಗು ವನು ಮಲಗೇ ನಿಂದ್ರುವ॥ ಒಂದೆ ಅನಂತಾಹ ಅನಂತ ವಂದಾಹ। ಬಾಂಧವಾ ಅಸಿಮಿತ್ತ ಭಕತವತ್ಸಲನ್ನ ॥೫॥ ಸ್ತ್ರೀ ಅಲ್ಲ ಪುರಷಲ್ಲ ತ್ರಿವಿಧ ರೊಳಗೆ ಅಲ್ಲ। ಕೈಯ್ಯೊಡ್ಡಿ ಕಾಸು ಬೇಡುವವನಲ್ಲ॥ ಮಯ್ಯ ಆಯಾಸ ಕರ್ಮವು ವಾಡೆ ವಲಿವವನಲ್ಲ। ಕ್ರೀಯ ಮಾಡಿದಮ್ಯಾಲೆ ಬಿಡುವವನಲ್ಲ ॥೬॥ ಜಾತಿ ನೀತಿಗಳಿಲ್ಲ ಜನನಿ ಜನಕರು ಇಲ್ಲ। ಗೋತುರವಿಲ್ಲ। ಗೋ ಪ್ರತಿಪಾದ್ಯನೊ। ಶೀತೋಷ್ಣಗಳು ತಾಕೆ ಸವದು ಪೋಗುವನಲ್ಲ। ಗಾತುರ ಹಸಿದು ಅನ್ನಬೇಡುವನಲ್ಲ ॥೭॥ ಗುಣಕೆ ಅಂತಿ ಇಲ್ಲ ಕ್ರೀಯಕೆ ಅಂತಿ ಇಲ್ಲ। ಕ್ಷಣಕೆಮಾಡುವ ಕರ್ಮಕಂತ್ಯೆ ಇಲ್ಲ॥ ದಣಿದೆನೆಂಬುವನಲ್ಲ ರಣದಿ

ಮಡಿವವನಲ್ಲ । ಎಣಕೆ ತಟ್ಟುವನಲ್ಲ ಒಂದಾದರನ್ನ ॥೮॥ ಸರಿಯಿಲ್ಲ ಅಧಿಕಿಲ್ಲ ತರುಪಾಯದೊಳಗಿಲ್ಲ। ಪರಿಪೂರ್ಣ ನಿರ್ದೋಷ ಸರ್ವವ್ಯಾಪ್ತ । ಗುರುಮಧ್ವರಮಣ ಗೋಪಾಲವಿಠ್ಠಲ ತನ್ನ । ಶರಣನೆಂದುಗೊಳಿದು ಪೊರೆವುತಿಪ್ಪವನ ॥೯॥

## ಪದ ೧೪

### ಹೃತ್ಕಮಲ ಮೂಲೇಶ, ಮುಖ್ಯಪ್ರಾಣನಂತರ್ಗತ ಮಹಿಮೆ ಸ್ತೋತ್ರ ಪ್ರಾರ್ಥನಾ.

### ರಾಗ ಮೋಹನಕಲ್ಯಾಣಿ ತ್ರಿವಿಡಿತಾಳ

ಅಂಜನೆ ಗಿರಿರಾಯ ಪಿಡಿಯುಸ್ವ ಕೈಯ್ಯಾ। ಅಂಜನೆಸುತ ಪ್ರಿಯಾ। ಆರ್ಜುಜನ ಧ್ಯೇಯಾ। ಕುಂಜರ ರಿಪುಮದ (ಮದಕರಿ) ಭಂಜನ ಅನಘ ಧನಂಜಯ ಸಾರಥಿ ಮಂಜುಳ ಮೂರ್ತೆ ॥ಪ॥ ಮೂಲೇಶನಗ್ರೇಶಾ ಪ್ರಾದೇಶ ಶ್ರೀಶಾ। ಮೂಲಾ ಪ್ರಕೃತಿ ಅವ್ಯಾಕೃತ ಮಹಾಕಾಶ। ಕಾಲ ನಿಗಮ ತ್ರಿವಿಧ ಜೀವರ ಕೋಶಾ। ಶ್ರೀಲಕ್ಷ್ಮಿ ಸರ್ವಧಿಷ್ಠಾನ ನಿವಾಸ ॥ ಪಾಲ ಮುನ್ನೀರಲಿ ಆಲಯ ರಚಿಸಿದ। ಆಲದೆಲೆಯಲಿಪ್ಪ ಏಳುಕೋಟಿ ಮಿತ। ಬಾಲಕ ಭೂಜಲ (ಭುಂಜಾಲ)। ತ್ರೈಲೋಕ್ಯಮಹಿತ। ಪಾಲಿಸೊ ಹೃದಯಸ್ಥ ಮೂಲಕಾರಣನೆ ॥೧॥ ಜಲಜಾತ। ಜಾತನೆ ಜಾತನ್ಯೆಯ್ಯಾ ಜಯ ಜಯ ಮೂರುತಿ। ಮೂರ್ತಿ ॥ ಜಲಜಭವಾಂಡಕರ್ತ ವಿಭುಕ್ಷೇತ್ರ ಮೂರ್ತಿ। ಜಲಜಾಕ್ಷನೆ ಜಾಹ್ನವಿಪಿತ ತೀರ್ಥಮೂರ್ತಿ ಮ। ತ್ಕುಲ ಸ್ವಾಮಿ ಶ್ರೀನಿವಾಸ ನೀನೆ ಸತ್ಕೀರ್ತಿ। ಕಳೆವರ ಸ್ಥಿತ ಹೃಜ್ಜಲಜ ಕರ್ಣಿಕೆ ಯಲ್ಲಿ। ಜಲಜಬಾಂಧವದ್ಯುತಿ। ಸುಳಿದು ಹೊಳೆದು ನಿನ್ನ ಲಲನೆ ಸಹಿತ ವಾಗಿ। ಸುಳಿದು ಪೊಳೆದು ಎನ್ನ ಸಲಹೊ ಸದ್ಗುಣಜ್ಞಾನ। ಬಲ ಸುಖ ಪೂರ್ಣ ॥೨॥ ಮಮ ಸ್ವಾಮಿ ಶ್ರೀನಿವಾಸ ಸರ್ವಾಂತರ್ಯಾಮಿ। ಕಮಲಾಪ್ತ ಅಂತರಿಕ್ಷಾದ್ಯ ಲೋಕಾ ಭೂಮಿ। ಕ್ರಮ ಕ್ಷೀರದ್ವೀಪ ಋತು ಮಾಸಪಕ್ಷ ಸಾನು ಪ್ರೇಮಿ। ಅಮರವಂದ್ಯ ಗೋಪಾಲವಿಠ್ಠಲ ಸರ್ವಸ್ವಾಮಿ ॥ ನಮೊ ಸುಮಹಿಮ ರಮಾರಮಣ ರಾಘವ ಭವ। ಭೃಭು ಶಮಲತಮಕೆ ದ್ಯುಮಣಿ। ಅಮಮ ಸಮನಮಗೆಮನೊಳು। ವಿಮಲಾಗಮ ನಿಯಮಂ ವ। ಯಮ ಶಮ ದಮೆಗಳನು ಕೊಡು ನಮೊ ॥೩॥

## ಪದ ೧೫

### ಬಿಂಬನಾದ ಹರಿಯ ಮಹಿಮೆ ಗುಣಕ್ರೀಯಾ ಉಪಾಸನೆ.

### ರಾಗ ಕಾಂಬೋಧಿ ಝಂಪಿತಾಳ

ನಂಬು ಮನವೇ ಹಲವು ಹಂಬಲಿಸದೇ ಹೃದಯ ಅಂಬರದಲಿಪ್ಪ ಶ್ರೀಹರಿಯಾ । ಕೊಂಬ ಕೊಡು ಕಡಿಗೆ ಇಂಬು ತೋರಿಸಿ ಭವ । ಅಂಬುಧಿಯ ದಾಟಿಸುವ ದೈವವ ॥ಪಲ್ಲ॥ ನಿನ್ನ ಒಳಗೆ ಇಪ್ಪ ನಿತ್ಯವಾಗಿ ಬಿಡದೆ । ನಿನ್ನಾಗತಿ ಅರಿತು ಸಂಚರಿಸುವ। ಪುಣ್ಯಪಾಪಂಗಳು ಚನ್ನಾಗಿಮಾಡಿಸುತ । ಭಿನ್ನನಾಗಿ ತನ್ನ ಮನಕೆ ಬಂದದಿಯಿಪ್ಪ ॥೧॥ ಆದಿಯಲ್ಲಿ ಪೂರ್ಣ ಅವತಾರದಲಿ ಪೂರ್ಣ । ಶೋಧಿಸಲು ಜಡಜೀವ ವಿಲಕ್ಷಣಾ ॥ ಕ್ರೋಧರಹಿತ ಸ್ವಗತ ಭೇದವರ್ಜಿತ ಹರಿ । ಆದರನಾಗಿ ನಿನಗನುದಿನವು ಪೊರೆವುತಿಹ ॥೨॥ ನಡಿದು ನಡಿಸುತಲಿನ್ನು ನುಡಿದು ನುಡಿಸುತಲಿನ್ನು । ಪಿಡಿದು ಪಿಡಿಸುತ್ತ ನಿನ್ನ । ಒಡನೆ ಇಪ್ಪೂ ಬಡವ ಬಲ್ಲಿದನೆನದೆ । ಬಿಡದೆ ಸರ್ವರಲ್ಲಿ ಧೃಡವಾಗಿ ಇಪ್ಪ ಬಲು ಕಡು ದಯಾಸಾಗರನ ॥೩॥ ಗುಣಪೂರ್ಣ ಸುಖಪೂರ್ಣ ಅಣು ಮಹಾಪರಿಪೂರ್ಣ । ಘನಜ್ಞಾನಪೂರ್ಣ ನಿರ್ದೋಷ ತೃಪ್ತಾ ॥ ಕನಸು ಜಾಗ್ರಗಳಲ್ಲಿ ಬಂದು ನಾನಾ ಜನ್ಮ। ದನುಭೋಗ ಸುಖದುಃಖ ಉಣಿಸಿ ನೋಡುವ ನಿತ್ಯ ॥೪॥ ಆಪ್ತ ಅನಿಮಿತ್ತ ಬಂಧು ವ್ಯಾಪ್ತ ಸರ್ವತ್ರವೂ । ಗುಪ್ತನಾಗಿ ಹೃದಯಗುಹದಲಿಪ್ಪ ॥ ಪ್ರಾಪ್ತ ಸರ್ವಜ್ಞ ಗೋಪಾಲವಿಠ್ಠಲ ಕಮ । ಲಾಪ್ತನಂದದಿ ನಿನ್ನ ಒಳಗೆ ಪೊಳೆದು ಪೊರೆವ ॥೫॥

## ಪದ ೧೬

### ಧ್ಯಾನೋಪಾಸನೆ ಮಾಳ್ಪ ಕ್ರಮ.

### ರಾಗ ಕಾಂಬೋದಿ ಝಂಪಿತಾಳ

ಧ್ಯಾನವನೆಮಾಡು ಬಿಂಬಮೂರುತಿಯ ॥ಪಲ್ಲ॥ ಆನಂದದಲಿಕುಳಿತು ಅಂತರಂಗದಲಿ ॥ಅ ಪ.॥ ಸದಾಚಾರನಾಗಿ ದ್ವಾದಶಗುರುಗಳಿಗೆರಗಿ । ಮೊದಲಿಂದ ಮೂಲಮಂತ್ರವನು ಜಪಿಸಿ॥ ಸದಮಲಾಭಕುತಿಲಿ ದೇಹಸ್ಥನ ತಿಳಿದು ಪದುಮಾಸನಹಾಕಿ ಪರಮ ವಿಶ್ವಾಸದಲಿ ॥೧॥ ಅಂಗವನು ಚಲಿಸದೇ ಚಂದಾಗಿ ಧೃಡದಿಂದ। ಕಂಗಳನು ಮುಚ್ಚಿ ಇಂದ್ರಿಯಂಗಳತೊರೆದು ॥ ಮಂಗಳಶೋಭಿತದಿ ಅಖಂಡ ಧ್ಯಾನ ನು ಅಂತ । ರಂಗದಿ ನಿಲಿಸಿ ಎಲ್ಲವನು

ಕಾಣೊ ॥೨॥ ಭಗವದ್ರೂಪಗಳೆಲ್ಲ ಒಂದು ಸಾರಿ ಸ್ಮರಿಸಿ । ಮಗುಳೆ ಪರಮ ಗುರುವಿನ ಮೂರ್ತಿಯನು ॥ ತೆಗೆದು ಆಹ್ವಾನವೆ ಮಾಡಿ ಅಲ್ಲಿಂದಲೇ । ಸ್ವಗುರು ಬಿಂಬಮೂರುತಿಯಲಿ ಐಕ್ಯವನೆ ಮಾಡೊ ॥೩॥ ತಿರುಗಿ ಮೆಲ್ಲಗೆ ಮೂರು ವೇಗದಿಂದಲಿ ನಿನ್ನ ನಿನ್ನ । ವರ ಮೂರುತಿಯಲಿ ಚಿಂತನೆಯು ಮಾಡೊ ॥ ಭರದಿಂದ ಎಲ್ಲವನು ತಂದು ಹೃದಯಾದಲ್ಲಿ । ಸ್ಥಿರವಾಗಿ ಇಪ್ಪ ಮೂರುತಿಯೊಡನೆ ಕೂಡಿಕೊ ॥೪॥ ಆತನೇ ಬಿಂಬಮೂರುತಿಯೆಂದು ತಿಳಿದುಕೋ । ಆ ತರುವಾಯ ನಾಡಿಗಳ ಗ್ರಹಿಸಿ ॥ ಆ ತೈಜಸನ ತಂದು ವಿಶ್ವಮೂರುತಿಯಲ್ಲಿ । ಪ್ರೀತಿಯುಳ್ಳವನಾಗಿ ಪ್ರೀತಿಕರಿಸು ಮರುಳೆ ॥೫॥ ಜ್ಞಾನಪ್ರಕಾಶದಲಿ ನಿನ್ನ ಹೃದಯಸ್ಥಾನ ಚನ್ನಾಗಿ ಅಷ್ಟದಳಕಮಲಮಧ್ಯ ॥ ಶ್ರೀನಿವಾಸನಮೂರ್ತಿ ನಿಲ್ಲಿಸಿ ಬಾಹ್ಯದಲಿ । ಏನೇನು ಪೂಜೆಗಳ ಇದನೆ ತಿಳಿದು ಮಾಡೊ ॥೬॥ ಗುಣ ನಾಲ್ಕರಿಂದ ಉಪಾಸನೆಯನು ಮಾಡು । ಕ್ಷಣಕ್ಷಣಕೆ ಹರಿ ರೂಪ ನೀ ನೋಡುತ ॥ ಅಣುರೇಣು ಚೇತನಕೆ ತಾನೆ ನಿಯಾಮಕ । ಫಣಿಶಾಯಿ ಅಲ್ಲದೇ ಮತ್ತೊಬ್ಬರಿಲ್ಲವೆಂದು ॥೭॥ ಮಮತೆ ಯನು ತೊರೆದು ನೀ ಬೋಧವಪೇಕ್ಷಿಸದೆ । ಸಮ ವಿಷಮ(ಯ)ವ ತಿಳಿದು ಒಂದೆ ಭಕುತಿಯಲಿ ॥ ಸಮಾಧಿಗೊಳಗಾಗಿ ದಿವ್ಯದೃಷ್ಟಿಯಲಿ ಕ್ರಮದಿಂದ ಭರಿತಭಾವವನು ಕಾಣೊ ॥೮॥ ಈ ಪರಿ ಧೇನಿಸಲು ದೇವ ಕರುಣವ ಮಾಳ್ಪ । ಪಾಪಸಂಚಿತವು ಆಗಾಮಿನಾಶ ॥ ಆ ಪರೋಕ್ಷಿತನಾಗಿ ನಿನ ಯೋಗ್ಯತೇ ಇಷ್ಟಿಷ್ಟು । ಗೋಪಾಲವಿಠ್ಠಲನೊಲಿವನಾಗ ॥೯॥

## ಪದ ೧೭

### ರಾಗ ಕಾಂಬೋದಿ ಝಂಪಿತಾಳ

ಅಭಿವಂದಿಪೆ ಎನಗಭಿಮುಖನಾಗಿಹ್ಯ । ನಭ್ಬವನದಲ್ಲಿ ಮೊಪ್ಪುವ ಶುಭ ಮುಕುತಿ ಪ್ರಬಲಾ ನೀ । ಅಬಲನಾ ಶುಭಗುಣಪೂರ್ಣ ವಿಭುದೇಶ । ಇಭವರ ಶುಭದಾತಾ ॥ಪಲ್ಲ॥ ತಿಳಿಸು ಎನಗೆ ನೀ ತಿಳಿದು ತಿಳಿಯದಂತೆ । ತಿಳಿದೆನೆಂಬುವ ತಿಳಿವಿಕೆ ಬ್ಯಾಡ ॥ ತಿಳಿದರೂ ಪೂರ್ಣ(ರ) ತಿಳಿದಿಲ್ಲನೆಂಬು ವಂಥ ತಿಳಿವಿಕೆ ಕೊಡುವದು ತಿಳಿವಲ್ಲಿ । ತಿಳಿದು ತಾರತಮ್ಯ ತಿಳಿಸಲ್ಲಿ ತಿಳಿವಲ್ಲಿ ತಿಳಿದಷ್ಟೆ ಪುನಹ ತಿಳಿಪುವದು । ತಿಳಿದಷ್ಟು ಎನ್ನಿಂದ ತಿಳಿಯದಾ ಜನರಿಗೆ ತಿಳಿದು ತಿಳಿಸುವಂಥ ತಿಳಿವಿಕೆಯಾ ॥೧॥ ಮನವಕೊಡು ಅನ್ಯ

ಮನಸ್ಕನಮಾಡದೇ । ಮನವ ನಿಲ್ಲಿಸು ಸುಕಥಾ ಮನನದಲ್ಲಿ । ಮನಕೆ ಬಂದದು ಜನ್ಮರಾಶಿ ಒಪ್ಪದರ ಸುಮನಸರೊಡಿಯೆನಗೆ ಪ್ರೇಮನವಾಗಿ । ಮನವಶಕಾರಲಿ ಮನನಕೊಡದೆಂದು । ಮನವನೇ ತ್ಯಜಿಸೇಕ ಮನದಲ್ಲಿ। ಮನಸಿಜನಯ್ಯ ಎನ್ನ ಮನಸಿಗೆ ವಿಷಯನಾಗಿ ಮನಕೆಡಿಸದೇ ದೀನಮನ ಮಾಡಿಸೊ ॥೨॥ ಧ್ಯಾನಮಾಡಿಸೊ ಏಕ ಪಾದವುಪಿಡಿಯೆ ನಿ। ದಾನನೆಂಬಲ್ಲಿ ನೀ ನಿಲುಕುತಲಿ । ಜ್ಞಾನಗುಣಾನಂದನನ ಸರ್ವಾಂಗವು ಆನಂದ ಮಯನೆಂಬೊ ಅನುಭವದಿ ॥ ಸಾನನಂದದೊಳಗೆ ಮುಣುಗಿಸಿ ಅನ್ಯ ವಿಷಯ । ಕಾಣದೆ ಕಣ್ಣಿಗೆ ಕಡಿಯಾಗಿ ಏನು ಕಂಡಲ್ಲಿ ನಾ ನಿಂತೆ ವಿಷಯಾನಾಗಿ । ಕಾಣಿಸಿಕೊಡು ಕಾಯೊ ಗೋಪಾಲವಿಠ್ಠಲ ॥೩॥

## ಪದ ೧೮

### ಬಿಂಬಾಪರೋಕ್ಷ ವಿಷಯ ಪ್ರಾರ್ಥನೆ.

**ರಾಗ ಕಲ್ಯಾಣಿ ಝಂಪಿತಾಳ**

ಕರುಣಾಳು ಎಂಬುವದು ಕಂಡೆ ನಾ ನಿನ್ನಲ್ಲಿ । ಶರಣಜನರ ಪಾಲಕ, ನೆರೆನಂಬಿದವರನ ಹಲವು ಪರಿಯಿಂದ ಸಂರಕ್ಷಿಸುವ ಸ್ವಾಮಿ ಪ್ರೇಮಿ ॥ಪಲ್ಲ॥ ನಿಂದಲ್ಲಿ ಕುಳಿತಲ್ಲಿ ಬಂದಲ್ಲಿ ಪೋದಲ್ಲಿ । ಬಂಧುಜನರುಗಳಿಂದಲಿ ಕುಂದಲಿಸದೆ ಸರ್ವರಿಂವಲಿ ಕರದೊಯ್ದು । ಸಂದರುಶನವಮಾಡಿಸಿ । ಮುಂದರಿಂದಾದರೂ ಕೊರತೆ ಎನಿಸದೆ ಸರ್ವ। ದಿಂದಲಿ ಸಂರಕ್ಷಿಸಿ ॥ ಚಂದದಿಂದಲಿ ಕರೆದು ತಂದು ಸೇವಿಯೊಳಿಟ್ಟೆ ಬಿಂಧು ಅನಿಮಿತ್ಯ ಮುಕ್ಕುಂದ ಹರಿಯೇ ॥೧॥ ಕರದು ವೈವಾನೀನೆ ವೊಯ್ಯದದಕ್ಕು ಫಲ ನೀನೆ । ತಿರಗಿ ತಂದವನು ನೀನೆ । ಅರುಹು ಕೊಟ್ಟವ ನೀನೆ ಅರಿದದಕೆ ಫಲನೀನೆ। ವರ ಅಭಯಪ್ರದನು ನೀನೆ॥ ಗುರುತು ಗುರುತಿಗೆ ಗುರುಗಳಾ ಗುರು ನೀನೆ ಪರಿಪೂರ್ಣ ನಿರ್ದೋಷನೆ। ಮರಿಯದೇ ನಿನ್ನ ಕುರುಹು ಮನಸಿಗೆ ತೋರಿ ಸ್ಥಿರವಾಗಿ ಇರುಸರ್ವದಾ ದೇವ॥೨॥ ಉಂಬಲ್ಲಿ ಉಡುವಲ್ಲಿ ಕೊಂಬಲ್ಲಿ ಕೊಡುವಲ್ಲಿ ಬಿಂಬಕ್ರಿಯುವನು ತಿಳಿಸಿ ಹಂಬಲಕ್ಕೆ ನೀನೆ ನಿಜವಾಗಿ ಹಗಲಿರಳೆನ್ನ । ಅಂಬಕಕೆ ಶಿಲುಕುವದು । ನಂಬಿದೆನು ನಿನ್ನ ಪಾದಾಂಬುಜ ಸರ್ವರಿಗೆ ಬಿಂಬ ನೀನೆಂದು ಧೃಡದಿ । ಬಿಂಬಮೂರುತಿಯೆ ಗೋಪಾಲವಿಠ್ಠಲ ಕೃಷ್ಣ ಸಂಭ್ರಮವೆ ನೀಡುವದು ಸರ್ವರೊಳು ನಿಂದು ॥೩॥

## ಪದ ೧೯

### ಬಿಂಬರೂಪಿ ಹರಿಯ ನಖಶಿಖಾಂತ ವರ್ಣನೆ, ವ್ಯಂಗಸ್ತೋತ್ರ ರೂಪ ಗುಣಕ್ರಿಯೋಪಾಸನೆ.

### ರಾಗ ಪಾಡಿ ತ್ರಿವಿಡಿತಾಳ

ಲಜ್ಜೆ ಬರುತದೊ ಹ್ಯಾಗೆ ನಿರ್ಜರೇಶಾ। ಅರ್ಜುನಸಾರಥಿ ನಿನ್ನ ಆಜ್ಞ ಅರಿತರೆಂದು ॥ಪ॥ ನಖವು ಕಂಡರೆ ಇದೇ ಸಕಲ ಪೂರ್ಣವುಯೆಂದು, ಲಕುಮಿ ತುತಿಸಿ ನಾಕಲ್ಲದಿ ಕಾಣದೆ ॥ ಸುಖ ಅಂಬುಧಿಯೊಳಗೆ ಸೂಸಿ ಇಪ್ಪವಳೆಂದು। ಭಕತ ಕಂಡರೆ ನಿನ್ನ ಬಚ್ಚಿಡುವೊನೆಂದು ॥೧॥ ಬೆರಳು ಕಂಡರೆ ಮಹಾಪ್ರಳಯಾ ವಟದ ಮೇಲೆ। ಒರಗಿ ಚಪ್ಪರಿಸಿದಾ ತರುಳನಾಗಿ॥ ಪರಮಾಭೀಷ್ಟವುಯೆಂದು ಪರಿವೆ ಮಾಡದಲೆ ನೀ। ಕರಿಸೋರು ಕಂಡರೆ ಹರಿಯ ಬೆರಳು ಎಂದು ॥೨॥ ಪಾದ ಕಂಡರೆ ಇದೆ ಸಾಧಿಸಿ ಬಲಿಯಿಂದ। ಭೇದಿಸಿತು ಜಗವೆಲ್ಲಾಯೆಂದು ॥ ಆದರಿಸರು ಅಂಜಿ ಇದು ಭೂತವೆಂತೆಂದು। ಈದಾವ ಸೋಜಿಗ ಕಂಡು ಭಕುತರುಯೆಂದು ॥೩॥ ಗುಲ್ಫೆ ಕಂಡರೆ ಗೋಪಿ ಸ್ವಲ್ಪ ವಿಷಯಕ್ಕೆ ವರಳಾ। ಶಿಲ್ಪಿಗೆ ಕಟ್ಟಿ ಕೆಡಹಿ ಯೇಳೆಂದು। ಅಲ್ಪವೆಂದು ಶರಣರಾಡುವರೆಂದೊಂದು। ಬಲ್ಪಂಥರಲ್ಲಿ ಇಂಬಚ್ಚಿಕೊಂಡಿಪ್ಪೊನು ॥೪॥ ಜಾನುಜಂಘೆಗಳೆಯುವುಳಾರ್ಜುನರ ಸೋಂಕಲಾ। ತಾನು ನಿಜವು ಗತಿ ಯಾನ್ಯೆದೆ। ಖೂನ ಕಂಡರ ಬಾಲಾ ಏನಿದಾಶ್ಚರ್ಯವೆಂದು। ಕಾಣಿಸಿದರೆ ಬಲುತ್ರಾಣಿಯೆಂಬುವರೆಂದು ॥೫॥ ಊರುಕಂಡರೆ ಇದೆ ದೂರೋರು ಜಗವೆಲ್ಲ। ಕೀರುತಿ ಕೈಟಭಾಸುರ ನನ್ನ ॥ ಹೀರಿ ಅಸುವ ಪೇರ್ದೊಡೆಯ ನುಗ್ಗೊತ್ತಿದ। ವಾರುತಿ ಕೇಳಿ ವಂದಿಸರು ಬಕುತರು ಎಂದು ॥೬॥ ಕಟಿಯು ಕಂಡರೆ ಕಷ್ಟು ಮೆಲಹೋದಲ್ಲಿ ಜನರು। ಕಟಕಟಾಯೆಂದು ಕಟ್ಟಿದ ॥ ಘಟಿ ಧ್ವನಿಯಾ ಘಟನ್ಯಾದಿತೆಂದು। ಘಟ್ಟಿಸಿ ಹುಲ್ಲುಸರವಿಯು। ಕಟಿಗೆ ಸುತ್ತಿದುದಾ ಕಂಡಾರು ಸರ್ವರು ಎಂದು ॥೭॥ ಹೊಕ್ಕಳು ಕಂಡರೆ ಲೆಕ್ಕಿಸದ ರಾಶಿಯಾ। ಮಕ್ಕಳೊಳಗೆಲ್ಲ ಮಾಣಿಕ್ಯದಂಥ ॥ ಚೊಕ್ಕಟ ಮಗನನ್ನ ಪೊಕ್ಕಳಿಂದಲಿ ಪೆತ್ತ। ಅಕ್ಕೋಜವನು ಕಂಡು ನಕ್ಕರೆಲ್ಲರು ಎಂದು ॥೮॥ ಉದರ ಕಂಡರೆ ಎಲ್ಲ ಹದಿನಾಲ್ಕು ಲೋಕವು। ಹುದುಗಿಪ್ಪದೆಂದು ನಿನ್ನೊಳ ಕಂಡು ॥ ಹೆದರುವರಲ್ಲ ಹೆಪ್ಪೈವವಿದೆಂತೆಂದ। ಒದಗದೆ ಕಣ್ಣಿಗೆ ಒಳಗೆ

## ಪದ ೧೯

### ಬಿಂಬರೂಪಿ ಹರಿಯ ನಖಶಿಖಾಂತ ವರ್ಣನ, ವ್ಯಂಗಸ್ತೋತ್ರ ರೂಪ ಗುಣಕ್ರಿಯೋಪಾಸನೆ.

### ರಾಗ ಪಾಡಿ ತ್ರಿವಿಡಿತಾಳ

ಲಜ್ಜೆ ಬರುತದೊ ಹ್ಯಾಗೆ ನಿರ್ಜರೇಶಾ। ಅರ್ಜುನಸಾರಥಿ ನಿನ್ನ ಆಜ್ಞಕರೆಂದು ॥ಪಲ್ಲ॥ ನಖವು ಕಂಡರೆ ಇದೇ ಸಕಲ ಪೂರ್ಣವುಯೆಂದು, ।ವಿ। ತುತಿಸಿ ಸಾಕಲ್ಯದಿ ಕಾಣದೆ॥ ಸುಖ ಅಂಬುಧಿಯೊಳಗೆ ಸೂಸಿ ಇಪ್ಪವಳೆಂದು। ಭಕುತ ಕಂಡರೆ ನಿನ್ನ ಬಚ್ಚಿಡುವ್ರೊನೆಂದು ॥೧॥ ಬೆರಳು ಕಂಡರೆ ಮಹಾಪ್ರಳಯಾ ವಟದ ಮೇಲೆ। ಒರಗಿ ಚಪ್ಪರಿಸಿದಾ ತರುಳನಾಗಿ॥ ಪರಮಾಭೀಷ್ಟವುಯೆಂದು ಪರಿವೆ ಮಾಡದಲೆ ನೀ। ಕರಿಸೋರು ಕಂಡರೆ ಹರಿಯ ಬೆರಳು ಎಂದು ॥೨॥ ಪಾದ ಕಂಡರೆ ಇದೆ ಸಾಧಿಸಿ ಬಲಿಯಿಂದ। ಭೇದಿಸಿತು ಜಗವೆಲ್ಲಾಯೆಂದು ॥ ಅದರಿಸರು ಅಂಜಿ ಅದು ಭೂತವೆಂತೆಂದು। ಈದಾವ ಸೋಜಿಗ ಕಂಡು ಭಕುತರುಯೆಂದು ॥೩॥ ಗುಲ್ಫೆ ಕಂಡರೆ ಗೋಪಿ ಸ್ವಲ್ಪ ವಿಷಯಕ್ಕೆ ವರಳಾ। ಶಿಲ್ಪಿಗೆ ಕಟ್ಟ್ಟೆ ಕೆಡಹಿ ಯೇಳೆಂದು। ಅಲ್ಪವೆಂದು ಶರಣರಾಡುವರೆಂದೊಂದು। ಬಲ್ಪಂಥರಲ್ಲಿ ಇಂಬಚ್ಚಿಕೊಂಡಿಪ್ಪೊನು ॥೪॥ ಜಾನುಜಂಘೆಗಳೆಯುವುಳಾರ್ಜುನರ ಸೋಂಕಲಾ। ತಾನು ನಿಜವು ಗತಿಯಾನ್ಯೆದೆ। ಖೂನ ಕಂಡರೆ ಬಾಲಾ ಏನಿದಾಶ್ಚರ್ಯವೆಂದು। ಕಾಣಿಸಿದರೆ ಬಲುತ್ರಾಣಿಯೆಂಬುವರೆಂದು ॥೫॥ ಊರುಕಂಡರೆ ಇದೆ ದೂರೋರು ಜಗವೆಲ್ಲ। ಕೀರುತಿ ಕೈಟಭಾಸುರ ನನ್ನ ॥ ಹೀರಿ ಅಸುವ ಪೇರ್ದೊಡೆಯ ನುಗ್ಗೊತ್ತಿದ। ವಾರುತಿ ಕೇಳಿ ವಂದಿಸರು ಬಕುತರು ಎಂದು ॥೬॥ ಕಟಿಯು ಕಂಡರೆ ಕದ್ದು ಮೆಲಹೋದಲ್ಲಿ ಜನರು। ಕಟಕಟಾಯೆಂದು ಕಟ್ಟಿದ॥ ಘಟಿ ಧ್ವನಿಯಾ ಘಟನ್ಯಾದಿತೆಂದು। ಘಟ್ಟಿಸಿ ಹುಲ್ಲುಸರವಿಯು। ಕಟಿಗೆ ಸುತ್ತಿದುದಾ ಕಂಡಾರು ಸರ್ವರು ಎಂದು ॥೭॥ ಹೊಕ್ಕಳು ಕಂಡರೆ ಲೆಕ್ಕಿಸದ ರಾಶಿಯಾ। ಮಕ್ಕಳೊಳಗೆಲ್ಲ ಮಾಣಿಕ್ಯದಂಥ ॥ ಚೊಕ್ಕಟ ಮಗನನ್ನ ಪೊಕ್ಕಳಿಂದಲಿ ಪೆತ್ತ । ಅಕ್ಕೋಜವನು ಕಂಡು ನಕ್ಕರೆಲ್ಲರು ಎಂದು ॥೮॥ ಉದರ ಕಂಡರೆ ಎಲ್ಲ ಹದಿನಾಲ್ಕು ಲೋಕವು। ಹುದುಗಿಪ್ಪದೆಂದು ನಿನ್ನೊಳ ಕಂಡು॥ ಹೆದರುವರೆಲ್ಲ ಹೆದ್ದೈವವಿದೆಂತೆಂದ.। ಒದಗದೆ ಕಣ್ಣಿಗೆ ಒಳಗೆ

ಕುತಾ ಶಿರಗೊವುತ್ಸ್ಯನುಯೆಂದು । ಇನ್ನೆಲ್ಲಿ ಕಂಡಾರೆ ಹರಿದಾರು ಯೆಂದು ॥೨೦॥ ಕರ್ನ ನೋಡಿದರೆ ಸ್ಫುರ್ನವಾಗಿದೆಂಬ । ಸ್ವರ್ನಾಕ್ಷನಾ ಸಂಹಾರ ಮಾಡಿದೆ ॥ ಕರ್ನಕಿ (ರೆ) ರಥವ ಸುಪರ್ನವಾಹನನೆಂಬೊ । ವನ್ನಿಡದು ಘನಘನ್ನವಲ್ಲಾವೆಂತೆಂದು ॥೨೧॥ ಫಣಿಯು ನೋಡಿದರಿನ್ನು ರಣದವೊಳಗೆ ನೋಡು । ಹೆಣಿಗಾಡುತಿರಲು ಅರ್ಜುನನು ಭೀಷ್ಮಾ ॥ ವಣಿದು ಬಾರದ್ದು ನೋಡಿ ರಣಕೆ ನೀನೆದುರಾಗೆ । ಹಣಿಯ ಬಡುದಿಹ್ಯ ಭೀಷ್ಮನು ಎಂದು ॥೨೨॥ ಶಿರವನೋಡಲು ಇನ್ನು ಧರಿಯಲ್ಲಾ ಹೊತ್ತಿನ್ನು । ಹರಿಯೇ ನೀ ವಿಷ್ಣು ಕೂರ್ಮನು ಎನಿಸಿ ॥ ಧರಿಸಿದಾ ಶಿರದಲ್ಲಿ ಪರಿ ಪರಿ । ಮರಳ । ಹರಿದು ತೊಪ್ಪಲು ನಾನಾ । ಶಿರಕೆ ಸುತ್ತಿದನೋಡೆ ॥೨೩॥ ಎತ್ತ ನೋಡಲು ಸರ್ವತ್ರ ಪೂರ್ಣ । ಭೃತ್ಯನು ನಾನು ಹುಡುಕುತ್ತ ನಿನ್ನ ॥ ಸುತ್ತ ನೋಡಿ ನೋಡಿ ಮತ್ತೆ ಕಾಣದೆ ಪೋಗಿ । ಈ ತೆರದಾಡುವೆ ಚಿತ್ತಜ ನೈಯ್ಯನೆ ॥೨೪॥ ಕಾಣದೆ ನಿನ್ನನು ನಾನಾಕು ಅವಯವಗಳ । ಇನಿತು ಪರಿಯಾ ಅನಿಸಬೇಕೆ ॥ ಮಾನಪೂರ್ಣನು ಆಗಿ ನಾನ್ಯಾಕಾಡಿಸಲೆಂದಾ । ಜಾಣ ಗೋಪಾಲವಿಠ್ಠಲ ಕಾಣಿಸಿಕೋ ನೀ ಬ್ಯಾಗ ॥೨೫॥

## ಪದ ೨೦

ಬಿಂಬರೂಪನಾದ ಶ್ರೀಹರಿಯ ವ್ಯಾಪ್ತಗುಣ ಮಹಿಮೆ,
ಆ ಮೌಳಿ ನಖಾಂತ ಏಕೇಕ ಅವಯವ ಧ್ಯಾನೋಪಾಸನೆ ಕ್ರಮ.

ರಾಗ ಶಂಕರಾಭರಣ ಅಟ್ಟತಾಳ

ಧೇನಿಸುಮನವೆ ನೀ ಧೇನಿಸು । ಧೇನಿಸುಮನವೆ ಶ್ರೀಹರಿಯಾ ಪಾದ । ಧ್ಯಾನಮಾಡು ಈ ಪರಿಯಾ ॥ ಹಾ ಹಾ ॥ ಪ್ರಾಣೋಪಾನ ವ್ಯಾನೋದಾನ ಸಮಾನರ್ಗೆ । ಪ್ರಾಣನಾಗಿಹ ಮುಖ್ಯ ಪ್ರಾಣಾಂತರ್ಗತನ ನೀ ॥ಪಲ್ಲ॥ ಪರಮಾಣು ಪ್ರದೇಶದಲ್ಲಿ ಪ್ರಾಣಿರಾಶಿ ಅನಂತ ಉಂಟಲ್ಲಿ ಹೀಗೆ । ವರಲು ತಿವೆ ವೇದಾವಳಿ ದೃಷ್ಟಾಂ । ತರ ಪೇಳ್ವ ಕೇಳು ಧೃಡದಲ್ಲಿ ॥ ಹಾ ಹಾ ॥ ಪರಮ ಸೂಕ್ಷ್ಮವಾದ ವಟಮರವಾಗಿ ಅದರಲ್ಲಿ । ಪರಿಮಿತಿಲ್ಲದೆ ಫಲದವ ಬೀಜವರಿತು ನೀ ॥೧॥ ನಿರುತ ಸಾವರಣ ಬ್ರಹ್ಮಾಂಡದಲ್ಲಿ । ಹರಿಪೂರ್ಣ ವ್ಯಾಪ್ತ ಅಖಂಡ । ನಾಗಿ । ಮೆರವುತಲಿಪ್ಪ ಮಾರ್ತಾಂಡನಾ । ಕಿರಣದಂತಿ ರುವ ಪ್ರಚಂಡ ॥ಹಾ ಹಾ॥ ಹೊರಗೆ ಒಳಗೆ ಸರ್ವಾಂತರದಲ್ಲಿ ಹರಿ

ಮಾಯಾ । ವರಿತು ನಿನಗೆಯೆಲ್ಲಿ ದೊರಕಿದ ಸ್ಥಳದಿಂದ ॥೨॥ ಸಲಿಲಭೂಗಿರಿ ಲತೆ ನಾನಾ ವೃಕ್ಷ। ಫಲ ಖಗಮೃಗಕಾನನ ಮುಕ್ತ । ಸ್ಥಳ ಅವ್ಯಾಕೃತಗಾ ನಾನಾ ತ್ರಿಣ । ಪ್ರೋಳಿವಕ ತರು ಪವನಾ ॥ಹಾ ಹಾ॥ ಒಳಗೆ ಹೊರಗೆ ಹರಿ ಚಲಿಸದೆ ಇರುತಿಪ್ಪ । ಸ್ಥಳದ ನಿಲಿವಿನಂತೆ ತಿಳಿದು ನೀ ಅದರಂತೆ ॥೩॥ ಕೇಶವವಿಶ್ವಮಚ್ಛಾದ್ಯಾದಿ ತೈ । ಜಸ ಶ್ರೀಹಯಗ್ರೀವಾದಿ ಜೀವಾ । ರಾಸಿಯು ಲಿದ್ದ ಅನಾದಿ ಸರ್ವ । ದೇಶ ವ್ಯಾಪಿಸಿದಂತ ಭೇದಿ ॥ ಹಾ ಹಾ ॥ ಈ ಸಮಸ್ತ ಮೂರ್ತಿ ಶ್ರೀಶರಂಗನೆ ಎಂದು । ವಾಸನ ಮಯದಿಂದ ನೀ ಸೇವಿಸು ನಿತ್ಯ ॥೪॥ ಜೀವಾರಿಂದತ್ಯಂತ ಭೇದ ಪ್ರತಿ ಜೀವಾಂತರದಲ್ಲಿ ಮೋದ। ನಾಗಿ ಆವಾಗ ಚರಿಸುವವೇದ ಪೇಳು । ವಾದು ಸತ್ಯಂಭಿದಾ ॥ ಹಾ ಹಾ ॥ ಈ ವೇದದರ್ಥವು ಸಾವಧಾನದಿ ತಿಳಿದು । ಶ್ರೀವಾಯು ಮತದ ಸುಕೋವಿದರೊಡಗೂಡಿ ॥೫॥ ಸಪ್ತಾವರಣ ಶರೀರದಲ್ಲಿ ದಶ। ಸಪ್ತ ದ್ವಿಸಹಸ್ರ ನಾಡಿಯಲ್ಲಿ ದಶ । ಸಪ್ತ ದ್ವಿಸಸ್ರ ರೂಪದಲ್ಲಿ ಹರಿ ವ್ಯಾಪ್ತ ನಿರ್ಲಿಪ್ತ ಸ್ಥಾನದಲ್ಲಿ ॥ ಹಾ ಹಾ ॥ ಆಪ್ತನಂತಿರುವ ಸುಷುಪ್ತ ಸ್ವಪ್ನ ಜಾಗ್ರದಿ । ತಪ್ತಕಾಂಚನದಂತೆ ದೀಪ್ತಿಸುತಿಪ್ಪನ ॥೬॥ ಶ್ರೀ ಕೇಶವನೆ ಮೂಲರಾಶಿ ಶ್ರುತಿ ಏಕೋ ನಾರಾಯಣ ಆಶಿ। ನಾನಾ । ಲೋಕ ಸೃಷ್ಟಿಪ ಧಾತ(ನು) ಶಿವತಾರಕ ಮಂತ್ರೋಪದೇಶಿ ॥ ಹಾ ಹಾ ॥ ನೀ ಕೇಳು ನಿಗ ಮಾರ್ಥ ನೀ ಕರಿಸು ಸಂಶಯ ; ಯೇಕೋಮೇವ ದ್ವಿತಿಯೆಂಬ ಕೃಷ್ಣ ನಂಘ್ರಿಯ ॥೭॥ ಗಂಗಾಜನಕ ಸಿರಿರಂಗ ನು। ತ್ತುಂಗ ಗುಣ ಗಣಾಂತ ರಂಗ ಕಾ । ಳಿಂಗ ಸರ್ಪನ ಮದಭಂಗ ಭು । ಜಂಗ ಶಯನ ಅಮಲಾಂಗಾ ॥ಹಾ ಹಾ॥ ಪಿಂಗಳ ಇಡಾ ಮಂಗಳ ಸುಷುಮ್ನ ಸಂಗಮಮಧ್ಯದಿ ತಿಂಗಳಂ ತಿಪ್ಪನೆ॥೮॥ ಹೃದಯಸ್ಥಾನದಲಿದ್ದ ಮೂರ್ತಿ ಬಲು । ಅದು ಭೂತಾವನ ದಿವ್ಯ ಕೀರ್ತಿ ಅದೆ । ಪದುಮಜಾಂಡದಿ ಪರಿಪೂರ್ತಿ ದೊರೆ। ವದಕೆಬೇಕು ವಾಯು ಸಾರ್ಥಿ ॥ಹಾ ಹಾ॥ ಅದೆ ಬಿಂಬಮೂರುತಿ ಜೀವಾದಾಕಾರವಾಗಿ । ಪದುಮ ಕೇಶರದಿಪ್ಪ ಸದಮಲಾತ್ಮಕನಾ॥೯॥ ಧರಿಯನಳದ ದಿವ್ಯಚರಣ ಅಂದು। ಮೆರೆ ವುತಿಪ್ಪದು ಕೋಟಿ ಅರುಣ । ನಂತೆ ಪರಿಪೂರ್ಣಭರಿತವು ಕಿರುಣ । ತನ್ನ। ಸ್ಮರಿ ಸುವರಿಗೆ ಮಾಳ್ಪ ಕರುಣ ॥ ಹಾಹಾ ॥ ತರುಣಿಯೆಂದದಿ ನಖದಿ ಸುರ ನದಿ ಪೆತ್ತನೂ । ಪುರಗೆಜ್ಜೆ ಪೆಂಡೆಯು ಯರಡ್ಡೆದು ಬೆರಳನು ॥೧೦॥

ಪರಡು ಜಂಘೆಯುಗ ಜಘನರು । ಚಿರರೇಖಾಧ್ವಜ ವಜ್ರ ನಾನಾ ದಿವ್ಯ । ವರ ರೇಖದಿಂದವೊಪ್ಪುವನ । ಜಾನು । ಪರಮ ಶೋಭಿಸುವ ಸುಂದರನ, ॥ ಹಾ ಹಾ ॥ ನುರುಟು ಕದಳಿಯುಸ್ತಂಭ ಇರಹು ಊರುದ್ವಯ । ಸರಿಗಾಣೆ ಹರಿಯುಟ್ಟವರ ಪೀತಾಂಬರವನ್ನು ॥೧೧॥ ಗಜನಾಶ (ಸಿಂಹ) ದಂತಿಪ್ಪ ಮಧ್ಯ ಬಲು । ವಿಜಯುವಧ್ಯಾಣ ಅಭೇದ್ಯ । ಭೇದ್ಯ । ನಿಜ ಘಂಟಿ ಝುಣರೆಂಬೋವಾದ್ಯ ಕು । ಬುಜಿಯ ಡೊಂಕು ತಿದ್ದಿದಾನಾದ್ಯ ॥ಹಾಹಾ॥ ಅಜಜನಿಸಿದ ನಾಭ್ಯಂಬುಜ ಚತುರ್ದಶ । ತ್ರಿಜಗಭರಿತ ಕುಕ್ಷಿ ನಿಜ ಪೂರ್ಣ ಸುಖಮಯನ ॥೧೨॥ ಉದರ ತ್ರಿವಳಿ ನಾನಾಹಾರ । ದಿವ್ಯ । ಪದಕ ಪಚ್ಚೆಗಳ ವಿಸ್ತಾರ ಬಲು । ಚದುರ ವೈಜಯಂತಿ ಮಂದಾರ । ವನ್ನು ಮುದದಿಂದ ಧರಿಸಿದ ಧೀರ ॥ ಹಾ ಹಾ ॥ ಪದುಮಜ ಭವದಿಂದ ತ್ರಿದಶರು ತಿಳಿದಿನ್ನು । ಪದುಮ ಕೇಶರದಿಪ್ಪ (ಕೋಶದಲಿಪ್ಪ) ಸದಮಲಾತ್ಮಕನ ॥೧೩॥ ಶಿರಿವತ್ಸ ಕೌಸ್ತುಭಹಾರಾ । ವ್ಯಾಲೆ । ಸರಿಗಿನ್ಯಾವಳದ ಶೃಂಗಾರ ಸುಂ । ದರವಾದ ಕಂಬುಕಂಧರ ಅತಿ ಗುರುತರ ಭುಜವು ಚತುರಾ ॥ ಹಾ ಹಾ ॥ ಮರ(ದ)ದಾನೆ ಸೊಂಡಿಲು ಇರಹು ಬಾಹುಕೆತ್ತಿಗೆ । ಬೆರಳು ನಕ್ಷತ್ರ ಅರಸನಂದದಿ ನಖ ॥೧೪॥ ಕರಚತುಷ್ಟಗಳಲ್ಲಿ ಶಂಖ, ಚಕ್ರ । ವರಗದೆ ಪದುಮ ನಿಃಶಂಕಾ ನಾಗಿ । ಮೆರೆವುತಲಿಪ್ಪ ಕಳಂಕ । ದುರುಳಾರಾತರಿದ ಛಲದಂಕಾ ॥ ಹಾ ಹಾ ॥ ಬೆರಳು (ಹರಳು) ಮಾಣಿಕ ಉಂಗುರ ಕಡಗ ಕಂಕಣ । ಬಿರದಿನ ತೋಳ್ಬಂದಿ ಶಿರಿ ಭುಜಕೀರ್ತಿಯು ॥೧೫॥ ಅಗರು ಚಂದನ ಗಂಧ ಲೇಪ ಕಂಠ । ಸೊಗಸಾದ ಚುಂಬಕು ಪ್ರತಾಪ ಮಾವು । ಚಿಗರಿದ ಚಂದ್ರ ಳಿದುಟಿ ಭೂಪಾ । ನಸು । ನಗುವವದನಪಲ್ಲಾಪ ॥ ಹಾ ಹಾ ॥ ಮಗನಾಗಿ ತಾನು ಗೋಪಿಗೆ ವದನದೊಳಗೆ । ಜಗವೆಲ್ಲ ತೋರಿದ ಅಗಣಿತ ಮಹಿಮನ್ನ ॥೧೬॥ ಮುಗುಳು ಮಲ್ಲಿಗೆ ಮೊಗ್ಗೆದಂತಾಪಿಂಕ್ತಿ । ಜಗವ ಮೋಹಿಸುವ ಸುಕಾಂತ । ಜಿಂಹ್ವೆ । ನಿಗಮುಕೆವೇದ್ಯವಾದಂಥ । ಬಹು । ಬಗೆಯಲ್ಲಿ ಮೆರೆವಪು ಪಂಥ ॥ಹಾ ಹಾ॥ ನಗುವದನ ಝುಗಝುಗಿಪ ಕುಂಡಲಕಾಂತಿ । ಮಿಗೆ ಕೂರ್ಮಕದಪು ಸಂಪಿಗೆಯು ನಾಶಿಕವನ್ನು ॥೧೭॥ ಕರುಣಶಾಂತ ಶುಭನೋಟಾ ಕಂಗಳೆ (ಕದಪು) । ಡರ ಚಲ್ವಿಕೆಮಾಟ । ಇನ್ನು । ಅರವಿಂದ ದಳವನ್ನು ಧಿಟ್ಟಾ । ಅಲ್ಲಿ । ತರುಣಿ ಚಂದ್ರಾಮರಕೂಟಾ ॥ಹಾಹಾ॥

ಶರಣಜನರ ಮನೋಹರುಪವಾರ್ಧಿಗೆ ಚಂದ್ರ। ದುರುಳದಿತಿಜ ತಿಮಿರಕೆ ಭಾಸ್ಕರನ್ನ ॥೧೮॥ ಪೊಳೆವ ಪುರ್ಬುದ್ವಯು ಸ್ಮರನಾ ಚಾಪಾ। ತಲೆಯ ತಗ್ಗಿಸುವಂಥ ರಚನ। ಫಾಲಾ । ದಸ್ಲಿಟ್ಟ ತಿಲಕಸುಂದರನ। ಲೋಕ। ಕಳವಳಗೊಳಿಸುವ ಸುಗುಣ॥ ಹಾಹಾ॥ ನಳಿನವದನದಲ್ಲಿ ಅಳಿಗಳಂತೊಪ್ಪುವ। ಸುಳಿಗುರುಳಿನ ಮೇಲೆ ನಲಿವ ಅಂಳಲೆಯನ್ನು ॥೧೯॥ ಕೋಟಿ ಸೂರ್ಯಪ್ರಕಾಶ ಕಿ। ರೀಟಸಮಾ ಆವಾದೇಶ । ದಲ್ಲಿ । ಸಾಟಿಗಾಣೆನು ವಿಶೇಷ ಕ। ಪಟನಾಟಕ ನಿತ್ಯರಮೇಶ॥ಹಾಹಾ॥ ನೀಟಾಗಿ ನಖ ಲಲಾಟದ ಪರಿಯಂತ। ನೋಟದಿಂದಲಿ ಈಶ। ಕೋಟಿ ಸಹಿತನಾಗಿ ॥೨೦॥ ಕಾಮಾದಿಗಳನೆಲ್ಲಜರಿದು । ಭೂಮಿ ಹೇಮ ಕಾಮಿನಿಯರ ತೊರೆದು । ಅತಿ। ಪ್ರೇಮದಿ ಗುರುಗಳ ಬೆರಿದು। ಮುಕ್ತಿ। ಯಾ ಮಾರ್ಗದ ಹಾದಿ ಅರಿದು ॥ಹಾಹಾ॥ ಸಾಮಜವರದ ಶ್ರೀಗೋಪಾಲವಿಠ್ಠಲನ್ನ। ಯಾಮ ಯಾಮಕೆ ನಲಿದಾಡುತ್ತ ನೀನಿತ್ಯ ॥೨೧॥

## ಶ್ರೀಪ್ರಾಣೇಶ ವಿಠಲರ ಪದ ೨೧

### ಮಾನಸಪೂಜಾ ಕ್ರಮ.

**ರಾಗ ಕಾಂಬೋದಿ ಝಂಪೆತಾಳ**

ಹೃದಯಮಂದಿರ ವಿವರ ಈ ಪರಿಯಲಿಂತಿಳಿದು। ಮಧುವೈರಿ ಪೂಜಿ ಮಾಳ್ಪುದು ಸುಜನರೂ ॥ಪಲ್ಲ॥ ಉದಯದಲಿ ಮೂರು ಬಾಗಿಲು ಪ್ರಥಮದಲಿ ರಮಾ । ಆದರ ತರುವಾಯ ೭ವಿನಾಮ ಪ್ರಾಣಾ॥ ಪದುಮಾಕ್ಷ ಭಾರತಿದ್ಯುನಾಮದಿಂದಿಹಳಲ್ಲಿ । ತುದಿಯ ಬಾಗಿಲಿಗಿಗೆ ಜಯವಿಜಯರೂ ॥೧॥ ಯಮದಿಸಿಗೆ ಮೂರು ಕದ ಮೊದಲು ಶ್ರೀಯರಡರೊಳು। ತಿಮಿಪಾಖ್ಯವ್ಯಾನದಿಜ್ಞಾಂ ಭಾರತೀ॥ ಅಮಲ ಬಲಪ್ರಬಲ ಮೂರನೇ ದ್ವಾರಕಿಹರು ಪ। ಶ್ಚಿಮ ದ್ವಾರ ಮೂರರೊಳಿಹರ ಪೇಳ್ವೆ ॥೨॥ ಪ್ರಥಮ ಮಾ ದ್ವಿತಿಯದಲಿ ಶಿಖಿನಾಮಕ ಪಾನ। ಪೃಥಿವಿನಾಮಕ ಭಾರತೀ ಕುಮುದರೂ॥ ತೃತಿಯದಲ್ಲಿಹ್ಯರುತ್ತರಕೆ ಮೂರು ದ್ವಾರಗಳು। ಸತತಲ್ಲಿ ನೆಲೆಸಿಹರ ಪೆಸರು ಕೇಳೀ ॥೩॥ ಒಂದರೊಳು ಶ್ರೀ ದ್ವಿತಿಯ ಸುರಪನಾಮ ಸಮಾನ। ಇಂದುಮುಖಿ ಭಾರತಿಯು ವಿದ್ಯುನ್ನಾಮ್ನೀ॥ ನಂದನ ಸುನಂದ ಮೂರನೇ ಬಾಗಿಲಲ್ಲಿಹರು। ಒಂದು ಕದ ಮೇಲೂ ಭಾಗದಲೀಹದೂ ॥೪॥

ಅಲ್ಲಿ ಆಕಾಶ ನಾಮಕಳು ಲಕ್ಷ್ಮಿ ಉದಾನ। ಚಲ್ವಿಭಾರತಿಯು ವ್ಯಾಜ್
ನಾಮದಲಿಹಳೂ ॥ ಮಲ್ಲರಿಪು ಅಷ್ಟಪತ್ರದೊಳಗೆ ದ್ವಿಷಡ್ರೂಪ। ದಲ್ಲಿಹ್ಯ
ವಿವರ ಕೇಳಿ ಆದರದಲೀ ॥೫॥ ಎರಡೆರಡು ದಿಕ್ಕಿನಲಿ ಒಂದೊಂದು ದಿಕ್ಕಿನಲ್ಲಿ
ಎರಡೈದು ಒಂದು ಸ್ತ್ರೀ ಒಂದು ಪುರುಷಾ ॥ಪರಮ ಪಾವನವಾದ ಈ ಹನ್ನೆ
ರಡು ರೂಪ। ಗುರುಮಧ್ವಮುನಿರಾಯರೊರಣಿಸಿಹರೂ ॥೬॥ ಮನಕಂಜ
ಮೂಲದಲಿ ದುರ್ಗ ಭೂಮಧ್ಯದಲಿ। ಕೊನಿನಳ ಶ್ರೀಭಾಗಭೇದಗಳಿವೂ॥
ಮನುಜನಂಗುಟ ಮಿತಿ ತುದಿಯಲಿ ಹರಿಯಗ್ರೇಶ। ನೆನಿಸಿ ಜೀವರಿಗೆ
ಸುಸುಪ್ತಿಯನೀವನೂ ॥೭॥ ತಾವರಿಯ ಮಧ್ಯದಲಿ ಇಹನಷ್ಟೆ ಪ್ರಾದೇಶ।
ಆವಾಗ ದೇಹಿಗಾಧಾರ ಪುರುಷಾ ॥ ಭಾವಿಸುವದಿನಿತೆಮಿತೆ ಮೂಲೇಶ
ಈತಗೇ। ಕೋವಿದರು ವಿಜ್ಞಾನವಪು ಎಂಬರೂ ॥೮॥ ಮೂಲೇಶನಂಘ್ರಿ
ಆಶ್ರೈಸಿ ಮುಖ್ಯಪ್ರಾಣ। ವಾಲಗವ ಮಾಳ್ಪ ಕೈಮುಗಿದು ನಿರುತಾ॥ಕಾಳೇಶ
ನಂತರ್ಗತನು ವಿಷ್ಣುವಿಗೆ ನಾಮ। ಲಾಳೂಕ ವೈಕುಂಠಶೇನಕೇಂದ್ರಾ ॥೯॥
ಹಂಸ ಸೋಹಂಸ್ವಹಾ ಎಂಬ ಜಪ ಸರ್ವರೊಳು। ಶ್ವಾಸರೂಪದಿ ಮಾಳ್ಪ
ಇದನು ತಿಳಿದೂ ಶ್ರೀಶಗರ್ಪಿಸಿದವನೆ ಜ್ಞಾನಿ ಎಂದಿಗ್ಯು ಬಂಧ। ಪಾಶದೊಳು
ಶಿಲ್ಕಲಾಲಿಪುದು ಬುಧರೂ ॥೧೦॥ಈ ವಾಯುದೇವನಡಿ ಆಶ್ರೈಸಿ ಸರ್ವದಾ।
ಜೀವನಿಹ ಅವಸಿರವು ಎಂತು ಕೇಳೀ ॥ ಆವ ಕೇಶಸಹಸ್ರ ಭಾಗದೊಳು
ಮಂದಂಶ। ದೀ ವಪ್ಪುವನು ಸರ್ವವಯವಗಳಿಂದ ॥೧೧॥ ವಾಸುದೇವನೆ
ಹರಿಗೆ ಶಿರವೆನಿಪ ನಾಶಿರವು। ಈ ಶರೀರಗೆ ಶಿರವು ನಾರಾಯಣಾ ॥ ಭಾಸಿ
ಸುವ ಮಧ್ಯಮಧ್ಯದೊಳಿಹದು ಪ್ರದ್ಯುಮ್ನ। ಶ್ರೀಶನಾ ಬಲಭಾಗ ಬಲ
ದೊಳಿಹದೂ ॥೧೨॥ ವಾಮಹರಿಗನಿರುದ್ಧ ಜೀವನೆಡದಲ್ಲಿಹದು। ಸ್ವಾಮಿ
ಪದ ಸಂಕರಷಣಿದರೊಳಿಹದೂ ॥ ರಾಮವಾಗೇಂದ್ರಿ ದೇವಗೆ ವಾಗ್ದೊಳಿಹ
ನೃಹರಿ। ಶ್ರೀ ಮನೊರಮಗೆ ಘ್ರಾಣ ಜೀವಘ್ರಾಣಾ ॥೧೩॥ ಹರಿನೇತ್ರ
ಕಪಿಲಜೀವನ ಕಂಣಿನಲ್ಲ ಹವಿ। ವರ ತಿಳಿವದೀ ಜೀವನಂಗಧವಣೀ ॥ ವರ
ರಮ್ಯವಾದ ಜೀವನ ಹೃತ್ಕಮಲ ಶ್ವೇತ। ವರಣಷ್ಟ ಪತ್ರ ಉಳ್ಳದು ತಿಳಿ
ವದೂ ॥೧೪॥ ಅಲ್ಲಿಪ್ಪ ಹರಿಗಾತ್ಮಜೀವ ಹೃದಯಂಬುವರು। ಬಲ್ಲವರು
ಸ್ಥೂಲಾಂಗ ಹೃತ್ಸರಸಿಜಾ ॥ ದಲ್ಲಿಷ್ಪದಳ ಮಧ್ಯ ರತ್ನಮೌಕ್ತಿಕ ಕಾಂತಿ।
ಯಲ್ಲಿಹದು ಹೇಮಮಂಟಪಮಾತ್ಮಕಾ ॥೧೫॥ ಆ ಮಂಟಪದಲಿ ಹನ್ನೆರಡು

ಮೂಲ್ಯೈಳ್ಳ ಭಾ । ನೂ ಮಂಡಲದಲಿ ಬಡುವಾಗೀಹದೂ ॥ ಸೋಮ ಮಂಡಲದಲಿ ತ್ರಿಕೋಣಾಗ್ನಿ ಮಂಡಲದಿ । ಭೂಮಿಧರ ಶೇಷಪರಿಯಂಕ ದಲ್ಲೀ ॥೧೬॥ ಮುತ್ತುರತ್ನಗಳಿಂದ ದಟಿತವಾದಾಸನ ವಿ । ಚಿತ್ರ ರತ್ನಖಚ ತದ ಉಪಬರ್ಹಣಾ ॥ ಉತ್ತುಮಶಿತ ದ್ವೀಪಗತ ವಿಷ್ಣು ಅಲ್ಲಿಹನು । ನಿತ್ಯ ಪರಮಾತ್ಮನೆಂಬರು ಆತಗೇ ॥೧೭॥ ಬಿಂಬನಾಮುನರೂಪವೇನು ವರ್ಣಿಪೆನು ದಿತ । ಅಂಬುಜಾಪ್ತಾಭಚಿತ್ ಸುಖವಿಗ್ರಹಾ ॥ ಕಂಬುರವಿಗದ ಕಂಜಶಿರಿ ಧರಣಿ ಸಹಿತ । ಹೇಮಾಂಬರದಿ ವಧ್ಯಾಣದಿಂದೊಪ್ಪುವಾ ॥೧೮॥ ಕಟಿ ಪ್ರದೇಶನು ಗುಂಭನಾಭಿ ಕೌಂಸ್ತುಭ ವಕ್ಷ । ಪಟುತರ ಭುಜದಿ ಭೂಷಣ ದಲೊಪ್ಪುವಾ ॥ ದಟಿತ ರತ್ನದ ಮುಕುಟ ನೀಲಾಳಕನು ಬ್ರಹ್ಮ । ನಿಟಿ ಲಾಕ್ಷ ಮುಖಸ್ಯೆನ್ಯ ಶೃತಿಭೂಷಣಾ ॥೧೯॥ ಪವಳ ಮೌಕ್ತಿಕ ರತ್ನಹಾರ ಅರವಿಂದಾಕ್ಷ । ಸುವಿಶಾಲ ಹೃದಯ ಮಂದಸ್ಮಿತ ಮುಖಾ ॥ ಸುವರಣ್ಣ ಕಡೆಯನೂ ಪುರಗೆಜ್ಜೆಯುಕ್ತ ಪದ । ದಿ ವಿಷತ್ಪತಿಯ ಪೊಗಳಲಾಶ ಕ್ತನೇ ॥೨೦॥ ಸ್ಥಾನತ್ರಯದೊಳಿದ್ದ ಹೃತ್ಪದ್ಮದೊಳಗಿದ್ದ । ನಾನಾ ಜೀವಜಡ ರೊಳ ಹೊರಗಿರುತಿಹ್ಯಾ ॥ ಶ್ರೀನಿವಾಸನ ರೂಪಕತ್ಯಂತ ಐಕ್ಯವನು । ಸಾನು ರಾಗದಲಿ ಚಿಂತಿಪುದೇ ಪೂಜೀ ॥೨೧॥ ಧನರೂಪ ಬಲಯುಕ್ತನಾದ ಕಾಲಕು ತನ್ನ । ತನಯ ಪಂಡಿತನಾಗದೆಂತ ಸಂಹ್ಯಾ ॥ ಜನಕಗಾಗುವಧಾಂಗೆ ಬಾಹ್ಯ ವಸ್ತುಗಳಿಂದ । ಘನ ಪೂಜಿಸಿದರು ಶ್ರೀನಾಥ ಮೆಚ್ಚಾ ॥೨೨॥ ತನ್ನ ಮನಿಯೊಳಗಿನ ವಿಚಾರವನು ಬಿಟ್ಟು ಮ । ತ್ತನ್ಯರಪರಾಧವೆಣಿಸುವನ ತೆರದೀ ॥ ಚನ್ನಾಗಿ ಈ ಮರ್ಮ ತಿಳಕೊಳ್ಳದೆ ಬಲ್ಲೆನೆಂ । ದಿನ್ನೊಂದು ಪ್ರಶ್ನೆ ಮಾಡುವನೆ ಮೂರ್ಖಾ ॥೨೩॥ ಹದಿಮೂರು ದ್ವಾರಪ್ಪು, ಪತ್ರಧೋಮುಖ ವಾದ । ಹೃದಯುದ ವಿಚಾರಗಣಿತೆನ್ನಮತಿಗೇ ॥ ವದಗಿದಷ್ಟೇಳಿಹೆನು ತುಷ್ಟನಾಗನೇ ಶ್ರೀಶ । ವಿದುರಿತ್ತಪಾಲಿಗೊಲಿದವನಲ್ಲವೇ ॥೨೪॥ ಹೃದಯು ಜೀವನ ಶರೀರಹಂಕಾರ ಅಂತರಾತ್ಮ । ಮೊದಲು ಹರಿನಾಮ ಜೀವನೊಳು ತಿಳಿದೂ ॥ ಮದನನ್ಯೆಯುನ ಪೂಜಿ ಮನದಲ್ಲಿ ಮಾಡಲು ಬಿ । ಡದೆ ಕಾಯ್ವ ಇಹಪರದಿ ಕರುಣಸಾಂದ್ರಾ ॥೨೫॥ ಏನು ಕೊಟ್ಟರುವಲ್ಲ ಈ ವಿಚಾರಕೆ ಪ್ರಿಯ । ಧೇನುವಂದದಲೀವ ಬೇಡಿದಿಷ್ಟಾ ॥ ನಾನರಿಯೆ ನಿದನಪದ್ಧವ ಕ್ಷಮಿಸುವರು ಬುಧರು । ಶ್ರೀನಾಥನುಡಿಸಿದಂದದಿ ಪೇಳಿಹೇ ॥೨೬॥ ಶಬರಿ

ಗಾಂಗೇಯ ಕಾಳಿಂಗ ಶಿಶುಪಾಲ ಭೃಗು । ಅಬುಜ ಪ್ರಥಮಾಂಗ ಅಜಮಿಳ ತಾರಾ ॥ ವಿಬುಧೇಶ ಪ್ರಮುಖರಪರಾಧ ಕ್ಷಮಿಸಿದ ಕೃಪಾ । ಅಂಬುಧಿಯ ನ್ನಯ ಅಪದ್ಧಗಳೆಣಿಸೊನೇ ॥ ೨೭ ॥ ಸೂಜಯಿಂ ರಣ ಜೈಸಿದಂತೆ ಯನ್ನೀಮತಿಗೆ । ರಾಜೀವನಯನೊಲಿದು ಪೇಳಿಸಿದನೇ ॥ ಶ್ರೀ ಜಗನ್ನಾಥ ರಾಯರ ದಾಸರವನೆಂದು । ಸೋಜಿಗವ ಮಾಡ್ದ ಪ್ರಾಣೇಶವಿಠಲಾ ॥೨೮॥ ಮಂಗಳಂ ಶಫರ ಕೂರ್ಮ ಕಿಟನೃಹರಿ ವಟುರಾಮ।ಮಂಗಳ ಧರಿಜರಮಣ ಕೃಷ್ಣಬುದ್ಧಾ ॥ ಮಂಗಳಹಯುವಹನ ಅನಂತ ಸುಗುಣಾರ್ಣವಗೆ। ಮಂಗಳಂ ಪ್ರಾಣೇಶವಿಠ್ಠಲನಿಗೇ ॥೨೯॥

॥ ಶ್ರೀಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

# ಈ ಉಪಾಸನಾಧ್ಯಾನ ಸುಳಾದಿ ಪದಗಳಿಗೆ ಆಧಾರವಾದ ಕೆಲ ಪ್ರಮಾಣ ಗ್ರಂಥಗಳು

॥ ಶ್ರೀ ಗುರುರಾಜೋವಿಜಯತೇ ॥

## ವಾಮನ ಪುರಾಣೋಕ್ತ ಧ್ಯಾನ ಸ್ನಾನಸ್ತೋತ್ರ ೧

ಯೋಗಿನಾಂ ಸ್ನಾನ ಮಾಖ್ಯಾನಂ ಯೋಗೋವಿಷ್ಣು ವಿಚಿಂತನಮ್ ॥ ಆತ್ಮತೀರ್ಥಮಿಧಿಃಪ್ರೋಕ್ತಂ ಸೇವಿತಂ ಬ್ರಹ್ಮವಾದಿಭಿಃ ॥೧॥ ಅಶೇಷಾಘಹರಂ ಬ್ರಹ್ಮರುದ್ರೇಂದ್ರಾದ್ಯೈರನುಷ್ಠಿತಮ್ ॥ (ಮನಸಾತ್ರಿವೇಣಿ ಸ್ನಾನಂಕರಿಷ್ಯೇ ಇತಿಸಂಕಲ್ಪ್ಯ) (ಖ) ಸ್ವಸ್ಥಿತಂ ಪುಂಡರೀಕಾಕ್ಷಂ ಮಂತ್ರಮೂರ್ತಿಂ ಹರಿಂ ಸ್ಮರೇತ್ ॥ ಅನೇಕಾದಿತ್ಯ ಸಂಕಾಶಂ ವಾಸುದೇವಂ ಚತುರ್ಭುಜಂ ॥ ಶಂಖ ಚಕ್ರಧರಂದೇವಂ ಪೀತಾಂಬರಧರಂ ಹರಿಂ ॥ ಶಾಮಂ ಪ್ರಶಾಂತಹೃದಯಂ ಪ್ರಸನ್ನವದನಂ ಶುಭಮ್ ॥ ದಿವ್ಯಚಂದನಲಿಪ್ತಾಂಗಮ್ ಚಾರುಹಾಸಂ ಶುಭೇಕ್ಷಣಮ್ ॥ ವನಮಾಲಾ ಪರಿವೃತಂ ನಾರದಾದಿಭಿರರ್ಚಿತಮ್ ॥ ಸುವರ್ಣಕಂಕಣೈರ್ಯುಕ್ತಂ ಕಿಂಕಿಣೀಭಿರ್ವಿರಾಜಿತಮ್ ॥ ಕೇಯೂರ ಧಾರಿಣಂ ದೇವಂ ಸ್ಫುರನ್ ಮಕರಕುಂಡಲಮ್ ॥ ಧ್ವಜವಜ್ರಾಂಕುಶಧರಂ

ಪಾದಪದ್ಮಸುನಿರ್ಮಲಮ್॥ತತ್ಪಾದಪದ್ಮಜಾಗಂಗಾಂ ನಿಪತಂ ತೀ ಸ್ವಮೂರ್ಧನೀಂ ॥ ಚಿಂತಯೇದ್ಬ್ರಹ್ಮರಂಧ್ರೇಣ ಪ್ರವಿಶಂತಿಸ್ವಕಾಂತನುಂ ॥ ಇಳಾ ಭಾಗೀರಥೀಪ್ರೋಕ್ತಾ ಪಿಂಗಳಾಯಮುನಾಸ್ಮೃತಾ ॥ ತಯೋರ್ಮಧ್ಯಗತಾನಾಡೀ ಸುಷುಮ್ನಾಖ್ಯಾ ಸರಸ್ವತೀ ॥ ತಯಾ ಸಂಕ್ಷಾಲ ಯೇದ್ದೇಹಂ ಬಾಹ್ಯಮಂತರ್ಗತಂ ಮಲಮ್ ॥ ತಕ್ಷಣಾದ್ವಿರಜಾ ಭೂತ್ವಾ ಜಾಯತೇ ಸ್ಫಟಿಕೋಪಮಃ ॥ ಇದಂ ಮಾನಸಿಕಸ್ನಾನಂ ಪ್ರೋಕ್ತಂ ಹರಿಹರಾದಿಭಿಃ ॥ ಇದಂ ಸ್ನಾನಂ ಪರಂ ಮಂತ್ರಂ ಸಹಸ್ರಮಧಿಕಂ ಸ್ಮೃತಂ॥ ಸಾರ್ಧತ್ರಿಕೋಟಿ ತ್ರಿಕೋಟಿತೀರ್ಥೇಷು ಸ್ನಾನಾತ್ಕೋಟಿ ಗುಣಾಧಿಕಂ ॥ ಯೋನಿತ್ಯಮರ್ಚಯೇದ್ದೇವಂ ಸತ್ವೈನಾರಾಯಣಸ್ಮೃತಾ॥ ಜ್ಞಾನಹೃದಯೇ ಧ್ಯಾನಸಲಿಲೇ (ಜಲೇ) ರಾಗದ್ವೇಷ ಮಲಾಪಹೇ ॥ ಯಃಸ್ನಾತಿ ಮಾನಸೀ ತೀರ್ಥೇ ಸಯಾತಿ ಪರಮಾಂ ಗತಿಂ ॥

॥ ಇತಿ ವಾಮನಪುರಾಣೇ ಮಾನಸಿಕಸ್ನಾನ ಸ್ತೋತ್ರಂ ಸಂಪೂರ್ಣಂ ॥

॥ ಶ್ರೀಗುರುಮಧ್ವೇಶಾರ್ಪಣಮಸ್ತು ॥

# ಅಥ ಪಂಚರಾತ್ರಾಗಮಸ್ಥ ಮಾನಸಪೂಜಾ ಕ್ರಮ ೨

ಹರಿಃ ಓಂ

॥ ಶ್ರೀಗುರು ರಾಘವೇಂದ್ರ ಶ್ರೀಗುರುವರದೇಂದ್ರ ಗುರುಭ್ಯೋನಮಃ ॥

ಅಷ್ಟೈಶ್ವರ್ಯ ಸಮಾಯುಕ್ತಂ ರಮಯಾ ಸಹಿತಂ ಪ್ರಭುಂ॥ ಶ್ವೇತಾಬ್ಜಸ್ಥಂ ಕರೇಪದ್ಮಂ ಗದಿನಂ ಶಂಖಚಕ್ರಿಣಮ್ ॥೧॥ ಶುದ್ಧ ಸ್ಫಟಿಕ ಸಂಕಾಶಂ ಸರ್ವಾಭರಣ ಭೂಷಿತಂ ॥ ವನಮಾಲಾ ಧರಂ ದೇವಂ ಧ್ಯಾಯೇನ್ನಾರಾಯಣಂ ಹರಿಂ ॥೨॥ ಮಾನಸೈರುಪಚಾರೈಶ್ಚ ಪೂಜಾಂ ಸಮ್ಯಕ್ ಸಮಾಚರೇತ್ ॥ ಬಹಿರ್ಯಾಗ ಪ್ರಸಿದ್ಧ್ಯರ್ಥಂ ಉಚ್ಚರನ್ ಪ್ರಣವಂತಥಾ ॥೩॥ ಓಂಕಾರೇಣ ಸ್ಫುಟೀಕೃತ್ಯ ಹೃದಂಬುಜ ಮಧೋಮುಖಂ ॥ ತಸ್ಮಿನ್ ರತ್ನಾಸನಂ ದಿವ್ಯ ಧ್ಯಾಯೇತ್ಕಲ್ಪತರೋಸ್ಥಳ ॥೪॥ ದೇವಂ ಸುಷುಮ್ನ ಮಾರ್ಗೇಣಾನೀಯ ಬ್ರಹ್ಮರಂಧ್ರಕೇ ॥ ವಾಮನಾ ಸಾಪುಟೇಧ್ಯಾತ್ವಾ ನಿರ್ಗತ ಸ್ವಾಂಜಲಿಸ್ಥಿತಂ ॥೫॥ ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಮಮ ॥ ವಿಭೋಸಕಲ ಲೋಕೇಶ ವಿಷ್ಣೋ ಜಿಷ್ಣೋ ಹರೇಪ್ರಭೋ ॥೬॥

ತ್ವಾಂಭಕ್ತ್ಯಾ ಪೂಜಯಾಮ್ಯದ್ಯ ಭೋಗ್ಯೈರರ್ಘ್ಯಾದಿಭಿಃಕ್ರಮಾತ್ ॥ ಯಾಗಾವಸಾನ ಪರ್ಯಂತಂ ಅತ್ರಸ್ಥಿತ್ವಾ ಜನಾರ್ದನ ॥೭॥ ಭಕ್ತ್ಯಸ್ಯಮಮ ಪೂಜಾಂಹಿ ಗೃಹೀತ್ವಾ ಪಾಹಿಮಾಂ ಪ್ರಭೋ ॥೮॥ ಪೀತಾಂಬರಂತುಗರುಡಃ ಆಸನಂ ಶೇಷ ಏವಚ ॥ ರುದ್ರಸ್ತುಕಲಶಂದದ್ಯಾತ್ ಗೋಪೀಚಂದನ ಮನ್ಮಥಃ ॥೯॥ ಇಂದ್ರಸ್ತು ಶಂಖ ಚಕ್ರಾದೀನ್ ಧಾರಣಾಯ ಜಗತ್ಪತೇಃ ॥ ದದತಃಸೂರ್ಯಚಂದ್ರೌತು ಆದರ್ಶಂ ತು ರಮಾಪತೇಃ ॥೧೦॥ ಕಸ್ತೂರಿ ತಿಲಕಂ ದದ್ಯಾತ್ ಕಿರೀಟಂ ಮಾರುತಾತ್ಮಜಃ ॥ ಶ್ರೀದೇವೀ ವನಮಾಲಾಂಯಾಂ ವೈಜಂತ್ಯಾಂ ಸದಾಶಿವಃ ॥೧೧॥ ಪಾದುಕೇವೀಂದ್ರ ಮುದ್ದಿಷ್ಟಃಕೌಸ್ತುಭಂತುವಿಧಿಸ್ಮೃತಃ॥ ಚೂಡಾರತ್ನೇಮರುದ್ದೇವಃ ಕುಂಡಲೇಷ ಏವಚ ॥೧೨॥ ಮಲಯಾದ್ವಾಯುರಾನೀಯ ಗಂಧಂ ವಿಷ್ಣೌ ಸಮರ್ಪಯೇತ್ ॥ ತೌನ್ನದಾಮಸುದಾಮಾನೌ ದದತಃ ಪುಷ್ಪಮಾಲಿಕಾಂ ॥೧೩॥ ವೇದಾಭಿಮಾನಿನೋ ದೇವಾಃ ಉಪವೀತಸ್ಯದಾಯಿನಃ ॥ ಬ್ರಹ್ಮಾವೇದೋಕ್ತಕರ್ಮಾಣಿ ಕಾರಯೇಚ್ಚರಮಾಪತೇಃ ॥೧೪॥ ಅಪ್ರಾಕೃತ ಷಡ್ರಸಾನ್ನಂ ಬ್ರಾಹ್ಮೀ ಭಾರತಿರರ್ಪಯೇತ್ ॥ ನೀವೇದಯನ್ ಮಹಾಲಕ್ಷ್ಮೀ ತಾಂಬೂಲಂ ಉದಕಂತಥಾ॥೧೫॥ ವೈಶ್ವಾನರೋಧೂಪದೀಪೌ ಪುಷ್ಪಾಂಜಲಿ ಮುಮಾಪತಿಃ ॥ ವಿಷ್ವಕ್ಸೇನೋ ಗಣಪತೀ ಸ್ತೋತ್ರಾರಾಧನ ತತ್ಪರೌ ॥೧೬॥ ಛತ್ರಂಚ ಚಾಮರಂಗೀತಂ ವ್ಯಜನಂ ವಾದ್ಯನರ್ತನೇ ॥ ಸನಕಾದ್ಯೈಶ್ಚ ದಿಕ್ಪಾಲೈ ಗಂಧರ್ವಋಷಿಚಾರಣೈಃ ॥೧೭॥ ಮಹಾ ವಿಶ್ವಾಸ ನಿರತೈಃ ಸೇವ್ಯಮಾನಂ ಸದಾಹರಿಃ ॥ ಸಾಲಿಗ್ರಾಮೇ ವಿಶೇಷಸ್ತು ಸ್ವಯಂವ್ಯಕ್ತ ಸ್ತಥೈವಚ ॥೧೮॥ ಬಿಂಬಮೂರ್ತ್ಯಾಸಹೈಕ್ಯೇನ ತತ್ರಸ್ಥಂ ಭಾವಯೆದ್ಧರಿಮ್ ॥ ಯದಿ ವಿಸ್ತರತಃ ಪುಂಸಃ ಪೂಜಾಂಕರ್ತುಂ ನಶಕ್ಯತೇ ॥೧೯॥ ಜಲಂ ದಳಂ ತುಲಸ್ಯಾಂ ವಾಽವಶ್ಯಂ ವಿಷ್ಣೌ ಸಮರ್ಪಯೇತ್ ॥ ಪಶ್ಯೇದ್ವಾ ಅನ್ಯಕೃತಾಂ ಪೂಜಾಂಸೋಪಿಸ್ಯಾತ್ ಕೃತಪೂಜನಃ ॥೨೦॥

ಪೂಜಾಕಾಲೇತು ದೇವಸ್ಯ ಇತಿಧ್ಯಾತವ್ಯಮಂಜಸಾ ॥

ಇತಿಪಂಚರಾತ್ರಾಗಮೇ ಚತುರ್ಥಾಧ್ಯಾಯೇ ಕ್ರಿಯಾಪಾದೇ ಮಾನಸಪೂಜಾಂ

॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

ಹರಿಃ ಓಂ

॥ ಶ್ರೀಗುರುರಾಜೋವಿಜಯತೇ ॥

# ಶ್ರೀವ್ಯಾಸರಾಜಕೃತ ಧ್ಯಾನಪ್ರಕರ್ಣ ೩

॥ ಶ್ರೀ ವೇದವ್ಯಾಸಾಯನಮಃ ॥

ಶ್ರೀದೇವಿಗೆ ಪತಿಯಾದಂಥಾ ಶ್ರೀನಿವಾಸನ ಪಾದಯುಗಳನ್ನು, ತಥಾ ಗುರುಗಳನ್ನು ಗ್ರಂಥಾರಂಭದಲ್ಲಿ ನಮಸ್ಕರಿಸಿ, ಮಾನಸೀಕ ಧ್ಯಾನ ವೆಂಬುಂಥಾ ಸ್ನಾನವನ್ನು ತಥಾ ಜಪಾನುಷ್ಠಾನ ಮಾನಸಪೂಜಾ ನಿಜ ಧ್ಯಾನಚಿಂತನಸ್ಮೃತಿ, ಇತ್ಯಾದಿ ವಿಧಿಗಳನ್ನು ಬುದ್ಧ್ಯಾನುಸಾರವಾಗಿ ಹೇಳು ತ್ತೇವೆ.

ಈ ಮುಂದೆ ಹೇಳುವಂಥ ವಿವರವನ್ನು ತಿಳಿಯಲಿಕ್ಕೆ ಆತ್ಮಸ್ವರೂಪ ಜ್ಞಾನವುಳ್ಳ ಗುರುಗಳಲ್ಲಿ ಶರಣಾಗತನಾಗಿ ಅನುಗ್ರಹ ಪಡಕೊಂಡು, ಅವರಲ್ಲಿ ಪರಮಭಕ್ತಿಯುಳ್ಳವನಾಗಬೇಕು. ಹೇಗೆಂದರೆ, "ತೇನಯತ್ಸ ಫಲಂಪ್ರೋಕ್ತಂ ಅನ್ಯಥಾನಿಷ್ಫಲಂ ಭವೇತ್ ॥ ಶರೀರಂ ವಚನಂ ಜ್ಞಾನಂ ವಾ ಸಕರ್ಮಗುಣಾನುಗುರುವರ್ಯಧಾರಯೇ ॥ ಯದ್ವಸ್ತು ಸಶಿಷ್ಯೋ ನ್ಯೈತರಸ್ಮೃತಃ ॥ಇತಿಸ್ಕಾಂದೆ॥

ಈ ಪ್ರಕಾರ ತಿಳಿದು ಸಚ್ಛಿಷ್ಯನಾಗಿ, ಏಕಾಂತ ಸ್ಥಳದಲ್ಲಿ ಭೂಶುದ್ಧಿ ಮಂತ್ರದಿಂದ ಉದಕ ಪ್ರೋಕ್ಷಣಮಾಡಿ ಅನಂತರದಲ್ಲಿ, "ಉಪವಿಶ್ಯಾಸನೇ ರಮ್ಯೇ ಕೃಷ್ಣಾಜಿನ ಕುಶೋತ್ತರೇ ॥ ಸಮುಗ್ ಪದ್ಮಾಸನಾನಿನೋಭೂತ್ ಶುದ್ಧಿಂ ಸಮಾಚರೇತ್ "॥ ಈ ವಿಧಿಯುಕ್ತ ಆಸನದಲ್ಲಿ ಕುಳಿತು, ಆಚ ಮನಮಾಡಿ ಪ್ರಾಣಾಯಾಮನಂತರದಲ್ಲಿ "ಮಮ ಶರೀರಸ್ಯ ಅಂತರ್ಯಾ ಮಿಃಖುಷಿ" ಇತ್ಯಾದಿ ಮಂತ್ರೇಣ ಭೂಶುದ್ಧಿ ಭೂತಶುದ್ಧಿ ಸಮಾಚರೇತ್॥

ಆಚಮ್ಯ ಪ್ರಾಣಾಯಾಮು ಸಂಕಲ್ಪ ಶುಭಾಭ್ಯಾಂ ಶುಭತಿಥೌ, ಶ್ರೀವಿಷ್ಣು ಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥಂ (ಉಪದೇಶ ಗುದು ಜಪಾದಿ) ಗುರೂಪದೇಶಮಂತ್ರ ಯಥಾಶಕ್ತಿಜಪ ಮಹಂಕರಿಷ್ಯೆ॥ ತರು ವಾಯ ಈ ಜಪಮಾಡಲಿಕ್ಕೆ ಪರಮಶುದ್ಧ ಆಗೋದಕ್ಕೋಸ್ಕರ.

ಮಾನಸಿಕ ಧ್ಯಾನವೆಂಬುವಂಥಾ ಮಾನಸಿಕ ಸ್ನಾನವನ್ನು ಮಾಡಬೇಕು. ಅದು ಹ್ಯಾಗಂದರೆ, ನೇತ್ರಗಳು ಮುಚ್ಚಿ ಏಕಾಗ್ರಚಿತ್ತ ವೃತ್ತಿಯಿಂದ ಭ್ರೂಮಧ್ಯದಲ್ಲಿ ದೃಷ್ಟಿ ಇಟ್ಟು, ಶ್ರೀಲಕ್ಷ್ಮೀಪತಿ ಪಾದಾಸಕ್ತ ನಾಗಿ, ತನ್ನ ದೇಹದಲ್ಲಿ ಇದ್ದಂಥಾ ಮುಖ್ಯ ಮೂರು ನಾಡಿಗಳು. ಅವು ಯಾವವೆಂದರೆ, ಪಿಂಗಳ, ಇಡಾ, ಸುಷುಮ್ನಾ, ಈ ನಾಡಿಗಳಲ್ಲಿ ಪಿಂಗಳಾ ನಾಡಿಯು ಯಮುನಾಯಂತೆ ಕರಿಸುತ್ತದೆ. ಇಡಾ ನಾಡಿ ಭಾಗೀರಥಿ ಯಂತೆ ಕರೆಸಿಕೊಳ್ಳುತ್ತದೆ. ಇವೆರಡರ ಮಧ್ಯದಲ್ಲಿ ಸುಷುಮ್ನಾನಾಡಿ ಸರಸ್ವತಿಯಂತೆ ಕರೆಸಿಕೊಳ್ಳುತ್ತದೆ. ಈ ಸುಷುಮ್ನಾನಾಡಿಯಲ್ಲಿ ಇದ್ದಂಥಾ ವಿವರ, ಸಜ್ಜನರು ಚಂದಾಗಿ ತಿಳಿಯತಕ್ಕಂಥಾದ್ದು. ತತ್ಪ್ರಯುಕ್ತ ಮೂರಾ ವರ್ತಿ ಮೂರುನಾಡಿಗಳು ಹೀಗಿವೆ, ಆ ನಾಡಿಗಳಲ್ಲಿದ್ದಂಥಾ ತೀರ್ಥಗಳು (ನದಿ) ಚಿಂತಿಸಬೇಕು. ಆದು ಹೇಗೆಂದರೆ, ಪಿಂಗಳಾಖ್ಯ ಯಮುನಾಯೈ ನಮಃ। ಇಡಾಖ್ಯ ಭಾಗೀರಥ್ಯೈನಮಃ, ಉಭಯೋರ್ಮಧ್ಯೇ ಸುಷು ಮ್ನಾಖ್ಯ ಸರಸ್ವತ್ಯೈನಮಃ, ಹೀಗೆ ಮೂರು ಸಾರೆ ಸ್ಮರಣೆಪೂರ್ವಕ ಧ್ಯಾನ ಸ್ನಾನಮಾಡಿ, ತನ್ನ ದೇಹದಲ್ಲಿದ್ದ ಮೂರುವರಿ ಕೋಟಿ ರೋಮಕೂಪ ಗಳು ಚಿಂತಿಸಬೇಕು. ಅದು ಹ್ಯಾಗಂದರೆ "ಮದ್ದೆಹೇಸಾರ್ಧ ತ್ರಿಕೋಟಿ ರೋಮಕೂಪಾಃ" ಎಂದು ಚಿಂತನಾಮಾಡಿ ಆ ರೋಮಕೂಪಗಳಲ್ಲಿ ನದಿ ಗಳನ್ನು ತನ್ನಿಯಾಮಕವಾದಂಥ ತನ್ನಾಮ ಭಗವದ್ರೂಪಗಳು ಚಿಂತಿಸ ಬೇಕು. "ಓಂ ಓಂ ಇತಿ ಬೀಜಂ ಸ್ವಾರ್ದತ್ರಿಕೋಟಿ ತೀರ್ಥೇಷು ತನ್ನಾಮ ಭಗವದ್ರೂಪೇಭ್ಯೋನಮಃ"

ಅಥ ಹೃತ್ಕಮಲವೆಂಬ ಮಡುವಿನಲ್ಲಿ ವಾಸವಾಗಿ ಪ್ರೇರಕ ರೂಪದಿಂದ ಇದ್ದಂಥ ಶ್ರೀಹರಿಧ್ಯಾನ ಮೂಲಮಂತ್ರದಿಂದ ದ್ವಾದಶಾವರ್ತಿ ಚಿಂತಿಸ ಬೇಕು. ಹ್ಯಾಗಂದರೆ "ಓಂ ನಮೋ ನಾರಾಯಣಾಯ ಓಂ" ಉತ್ತಮ ವಾದಂಥ ಧ್ಯಾನವು ಮಾನಸಾಖ್ಯ ತೀರ್ಥಸ್ನಾನವು, ಇಂಥ ಧ್ಯಾನತೀರ್ಥ ಸ್ನಾನದಿಂದ ಪರಮಶುದ್ಧನಾಗಿ ಜಾಗ್ರತದಿಂದ, ಗುರುಗಳು ಹೇಳದಂಥ ಪೂರ್ವೋಕ್ತ ಸಂಕಲ್ಪಾನುಸಾರ ಜಪಗಳನ್ನು ಮಾಡಿ ಉಪದೇಶ ಮಂತ್ರ ನೂರಾಯೆಂಟು ಬಾರೆ ಯಥಾನುಶಕ್ತಿ ಜಪಮಾಡಬೇಕು.

ತರುವಾಯ ಅಚಲವಾದಂಥ ಆಸನದಲ್ಲಿದ್ದು, ಪರಮಾತ್ಮನಲ್ಲಿ ಏಕಾಗ್ರ ಮನಸ್ಕನಾಗಿ, ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಈ ಪಂಚ ಭೂತಾತ್ಮಕವಾದ ದೇಹಕ್ಕೆ ತ್ವಕು, ಚರ್ಮ, ಮಜ್ಯ, ರುಧಿರ, ಮಾಂಸ, ಮೇಧ ಅಸ್ತಿ ಈ ಸಪ್ತಧಾತುಗಳುಳ್ಳ ದೇಹಕ್ಕೆ ದಶೇಂದ್ರಿಯಗಳು, ಚಕ್ಷು, ಶ್ರೋತ್ರ, ತ್ವಕು, ಜಿಂಹಾ, ಘ್ರಾಣ, ಪಂಚ ಜ್ಞಾನೇಂದ್ರಿಯಗಳು ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಈ ಪಂಚ ಕರ್ಮೇಂದ್ರಿಯಗಳು, ಇವುಗಳ ಮಧ್ಯದಲ್ಲ ವ್ಯಾಪ್ತವಾದ ಮನಸ್ಸು ಮುಖ್ಯೇಂದ್ರಿಯವು. ಇಂಥಾ ಮನಸ್ಸು ಸ್ವಾಧೀನ ಮಾಡಿಕೊಂಡು, ತನ್ನ ಸಂಬಂಧಿಯಾದಂಥ ಭಗವದನುಗ್ರಹಕ್ಕೆ ಮುಖ್ಯ ಸಾಧನವಾದಂಥ ಈಶಾಧಿಷ್ಠಾನವನ್ನು ಚಿಂತಿಸಬೇಕು.

ಅದು ಹೇಗಂದರೆ ಪಾಠವಾದನಂತರದಲ್ಲಿ ಏಕಾಗ್ರಚಿತ್ತವುಳ್ಳವನಾಗಿ ನೇತ್ರಗಳು ಮುಚ್ಚಿ ಭೂಮಧ್ಯದಲ್ಲಿ ದೃಷ್ಟಿಬಿಳಿಸಿ, ತನ್ನ ದೇಹದಲ್ಲಿದ್ದಂಥಾ ಭಗದ್ರೂಪಗ್ಳನ್ನೂ, ಹಾಗೇನೆ ದೇವತೆಗಳನ್ನೂ ಚಿಂತಿಸಬೇಕು. " ಹರಿಃ ಓಂ " ಪಂಚಭೂತಾತ್ಮಕ ದೇಹೆ ಸ್ವಸಪ್ತಧಾತೂನಾಂ ಮಧ್ಯೆ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ, ಪಂಚ ಕೋಶೇಷು ತನ್ನಾಮ ಭಗವದ್ರೂಪಾನಾಂ ಚಿಂತಯೇತ್, ಓಂ ಅನ್ನಮಯ ಓಂ ಪ್ರಾಣಮಯ, ಓಂ ಮನೋಮಯ, ಓಂ ವಿಜ್ಞಾನಮಯ, ಓಂ ಆನಂದಮಯ, ಓಂ ಅನಿರುದ್ಧಾಯ, ಓಂ ಪ್ರದ್ಯುಮ್ನಾಯ, ಓಂ ಸಂಕರುಷಣಾಯ, ಓಂ ವಾಸುದೇವಾಯ, ಓಂ ನಾರಾಯಣಾಯ, ಓಂ ಚಕ್ಷುರ್ಮಯಾಯ, ಓಂ ಶ್ರೋತ್ರಮಯಾಯ, ಓಂ ವಾಙ್ಮಯಾಯ, ತಕ್ ಪ್ರಸ್ತಾವಾಖ್ಯ ಅನಿರುದ್ಧಾಯ, ಓಂ ಲಾವಣ್ಯಪ್ರದ ರಾಮಾಯ, ಚರ್ಮಾಯ ಉದ್ಗೀಥಾಖ್ಯ ಪ್ರದ್ಯುಮ್ನಾಯ ಮಹಾವ್ರಣ ನಿವಾರಣ ಲಕ್ಷ್ಮಿಪತಯೇ, ಮಾಂಸೆ ಓಂ ಪ್ರತಿಹಾರಾಖ್ಯ ಸಂಕರುಷಣಾಯ, ಓಂ ವರಹರೂಪಿವಿಷ್ಣವೇ ನಮಃ ರುಧಿರೇ ಓಂ ಉಪದ್ರವಾಖ್ಯ ವಾಸುದೇವಾಯ, ಓಂ ಬಲಪ್ರದ ಶಾಂತ ಸಂವಿದೇನಮಃ, ಮೇದಿಸಿ ಓಂ ನಿಧನಾಖ್ಯ ನಾರಾಯಣಾಯ, ಐಶ್ವರ್ಯಾದಿಗುಣಪ್ರದ ಷಡ್ಗುಣಾಖ್ಯ ವಿಷ್ಣವೇನಮಃ ಮಜ್ಜಾಯಾಂ ಓಂ ವಷಟ್ಕಾರಾಖ್ಯಸಾರಾತ್ಮಾಯ ತತ್ರಷಟ್ ತ್ರಿಂಶತ (೩೬೦) ಭಗವದ್ರೂಪೇಭ್ಯೋನಮಃ ॥ ರೇತಸಿ ಮುಖ್ಯಪ್ರಾಣಾಯ ಓಂ ನಾರಾಯಣಾಯ,

ಅಸ್ಥಿತು, ಓಂ ಆದಿಶಬ್ಧವಾಚ್ಯ ಹಂಸಾಯ, ಓಂ ಷಟ್‌ತ್ರಿಂಶತ್ (೩೬೦) ದೇವತಾಭ್ಯೋನಮಃ ॥

ಮತ್ ಶರೀರೆ ನವಕೋಟಿ ದೇವತಾಭ್ಯೋನಮಃ । ಮುಖ್ಯ ಚತುರ್ವಿಂಶತಿ ತತ್ವ ತತ್ವಾಭಿಮಾನಿ ನಿಯಾಮಕ ಕೇಶವಾದಿ ೨೪ ನಾಮಗಳನ್ನು ಸ್ಮರಣಮಾಡಿ, ತ್ವಗಭಿಮಾನಿ ಅಹಂಕಾರಿಕಪ್ರಾಣೇ ಓಂ ಅನಿರುದ್ಧಾಯ ಅಜಾಖ್ಯಾಯನಮಃ ಶಿರಸಿ ಓಂ ಆನಂದಾಯ ಮುಖೇಶೋತ್ರಾಭಿಮಾನಿ ದಿಗ್ದೇವತಾಭ್ಯೋ ಓಂ ಚಂದ್ರಾದಿಭ್ಯೋನಮಃ ಚಂದ್ರೆ ಬ್ರಹತ್ ಪಾಂಡುವಾಸ ಓಂ ಸೋಮರಾಜಾಯಾ ಓಂ ಧನ್ವಂತರಯೇಹಯಗ್ರೀವಾಯ ನಮಃ ಓಂ ಚಿಂತಾಮಣಿನೇ ಓಂ ಅಜಾದಿಭ್ಯೋ ಹಂಸವಾಮನಾದಿಭ್ಯೋ ಉಭಯಕರಣೇ ಓಂ ಉಗ್ರಾಯ ಊರ್ಜಾಯ ಓಂ ದಿಂ ಓಂ ನಿಯಾಮಕ ದಿಂ ಓಂ ವ್ಯಾಪ್ತಹಯಗ್ರೀವಾಯ ಓಂ ವಿದಿಂಙ್ಣನಿಯಾಮಕ ವಿದಿಂಙ್ಣವ್ಯಾಪ್ತ ಪ್ರದ್ಯುಮ್ನಾಯ ಉಭಯನೇತ್ರೇ ಓಂ ಇಂದ್ರಾಯ ಈಶಾಯ ಚಕ್ಷುರ್ದ್ವಯಾಭಿಮಾನಿ ಓಂ ಸೂರ್ಯಾಯ ತನ್ನಿಯಾಮಕ ಓಂ ಅತ್ರಿಸ್ವಭಾಯ ಓಂ ನಾರಾಯಣಾಯ ಓಂ ಮೂರ್ಧ್ನರಾಜಾಯ ವಾಜಿನೆ ವಸುದೇವಾಯ ಓಂ ಅಜಾದಿಭ್ಯೋನಮಃ ಓಂ ಕಪಿಲಾಯ ಪುನ್ನಾಮಾದಿರೂಪನಿಯಾಮಕ ರೂಪೇಭ್ಯೋ ದಕ್ಷಿಣನೇತ್ರೇ ಓಂ ಸ್ತಂಭರೂಪಪಿಷ್ಣುವೇ ರಜ್ಜುರೂಪಿರಮಾಯೈ ತದ್ಬಂಧಂ ಓಂ ಗೋವತ್ಸರೂಪವಾಯುವೇ ಉಭಯನೇತ್ರಯೋ ರಕ್ತರಾಜ ಗೌತಮಾಖ್ಯರುದ್ರಾಯ ಶ್ವೇತರಾಜ ಓಂ ವಶಿಷ್ಠಾಖ್ಯ ಇಂದ್ರಾಯ ಕೃಷ್ಣತಾರೇ ಓಂ ಜಮದಗ್ನ್ಯಾಖ್ಯವಹ್ನೇ ಅಗ್ರೇ ಕನೀನಿಕಾ ವಿಶ್ವಾಮಿತ್ರಾಖ್ಯ ಆದಿತ್ಯಾಯ ಉಥಕೇ ಭಾರದ್ವಾಜಾಖ್ಯ ವರುಣಾಯ ಅಥರೇಕಶ್ಯ ಪಾಖ್ಯಪೃಥವೀ ಊರ್ಧ್ವೇ ಅತ್ರಿನಾಮಕದ್ಯುನಾಮ್ನೇ ಭಾರತೀ ದಕ್ಷಣನೇತ್ರೇ ಓಂ ವಿಶ್ವಾಖ್ಯ ಅನಿರುದ್ಧಾಯ ಕಂಠೇ ತೈಜಸನಾಮಾಖ್ಯ ಪ್ರದ್ಯುಮ್ನಾಯ ಹೃತ್ಪದ್ಮಕರಣಿಕಾಗ್ರೇ ಓಂ ಪ್ರಾಜ್ಞೇ ಅಗ್ರೇಶಾಖ್ಯ ಸಂಕರುಷಣಾಯ ಓಂ ಭೂತಿನೇನಮಃ

ಶಿರೋಧ್ರ್ವಭಾಗೇ ತುರ್ಯಾಖ್ಯವಾಸುದೇವಾಯ ಬ್ರಹ್ಮರಂಧ್ರಸ್ಥ ಬ್ರಹ್ಮನಾಡೀಮಧ್ಯೇ ಓಂ ಶ್ರೀನಾರಾಯಣಾಯ ಸೂರ್ಯಮಂಡಲಮಧ್ಯಸ್ಥ

ವಾಸ ದೇವಾಖ್ಯ ವಿಷ್ಣುವೇನಮಃ ಓಂ ನೇತ್ರಾಂತಸ್ಥ ವಾಮಿ - ಭಾಮಿನೇನಮಃ

**ನಾಸಾಭಿಮಾನಿಸ್ವರ್ಗವೈದ್ಯ ಅಶ್ವಿನೀದೇವೇಭ್ಯೋನಮಃ ತನ್ನಿಯಾ** ಮಕ ಸರ್ವ ವ್ಯಾಧಿನಿವಾರಕ ಧನ್ವಂತರಿನಾಮಕ ಪರಮಾತ್ಮನೇನಮಃ **ನಾಶಿಕಾಪುಟಯೋ** ಓಂ ಋತುಂಭರಾಯ ಓಂ ಋಘಾಯನಮಃ ಓಂ ಹೃದಯಾವು **ನಾಸಿಕಾಗ್ರೆ** ಓಂ ಸ್ವರ್ಲೋಕಾಭಿಮಾನಿ ದೇವತಾಯೈ ತನ್ನಿಯಾಮಕ ಆದಿತ್ಯಾಂತರ್ಗತ ಓಂ ವಿಷ್ಣುನಾಮಾಖ್ಯರಾಮಾಯ ಓಂ ಹಿರಣ್ಮಯಾಯ **ಊರ್ಧ್ವಶ್ವಾಸೇ** ಓಂ **ಭಾರತೀ ಅಧೋಶ್ವಾಸೇ** ಓಂ ಮುಖ್ಯ ಪ್ರಾಣಾಯನಮಃ **ದಕ್ಷಣಶ್ವಾಸೇ** ಓಂ ಸೂರ್ಯಾಯ **ವಾಮಶ್ವಾಸೇ** ಓಂ ಚಂದ್ರಾಯ **ಸರ್ವಶ್ವಾಸೇ** ಓಂ ಹಂಸಾಯ **ಧಕ್ಷಣಗಂಡಸ್ಥಳೇ** ಓಂ ಈಶಾಯ **ವಾಮಗಂಡಸ್ಥಳೇ** ಓಂ ಐರ್ಭುವಾಯ **ಊರ್ಧ್ವೋಷ್ಠೇ** ಓಂ ಏಕಾತ್ಮನೇ **ಅಧರೋಷ್ಠ್ರೇ** ಓಂ ಐರಸಾಯ **ಊರ್ಧ್ವದಂತಪಂಕ್ತೌ** ಓಂ ಓಜಭೃತೇ **ಅಧೋದಂತಪಂಕ್ತೌ** ಓಂ ಔರಸಾಯ.

ಜಿಂಹ್ವಾಭಿಮಾನಿ ವರುಣಾಯ ತನ್ನಿಯಾಮಕ ಓಂ **ಮಚ್ಛಾಯ ವಾಗೇಂದ್ರಿಯಾಭಿಮಾನಿವನ್ಹೇ** ತನ್ನಿಯಾಮಕ ಓಂ **ವಿಷಾಸಹನೇ** ನಾರಾಯಣರೂಪಿಣೇ **ಮೂರ್ಧ್ನಿ** ಓಂ ಅನಂತಾಯ **ವಾಚಿ** ಓಂ **ಅರ್ಥಗ** ರ್ಭಾಯ ವಾಕ್ಯಾಭಿಮಾನಿ ಸರಸ್ವತ್ಯೈ ತನ್ನಿಯಾಮಕ ಓಂ ವಾಗೀಶ್ವರಾಯ ಓಂ ಪವಿನಿ ಓಂ ಕುಲಿನಿ ಓಂ ಹಯಗ್ರೀವಾತ್ಮಕ ಸ್ತ್ರೀರೂಪಿಣಿ.

**ಉಭಯ ಹಸ್ತಾಭಿಮಾನಿ** ಓಂ ದಕ್ಷಪ್ರಜೇಶ್ವರಾಯ **ದಕ್ಷಿಣಹಸ್ತೇ** ಓಂ ಮಧುಸೂದನಾಯ **ಹಸ್ತಸಂಧಿಷು** ಓಂ ಕಪಿಲಾಯ ಖಪತೇ ಗರುಡಾ ಸನಾಯ ಓಂ. ಘರ್ಮಾಯ ಓಂ ಜಂಸಾರಾಯ **ವಾಮಹಸ್ತೇ** ಓಂ ಓಂಶ್ರೀ ಧರಾಯ **ಹಸ್ತಸಂಧಿಷು** ಓಂ ಚಾರ್ವಾಂಗಾಯ ಓಂ ಛಂದೋಗವ್ಯಾಯ ಓಂ ಜನಾರ್ದನಾಯ ಓಂ ಝಾಟಿತಾರಾಯ ಓಂ ಞಮಾಯ.

ಓಂ ಷ್ರೀಂ ಮನವೇ **ದಕ್ಷಣಪಾರ್ಶ್ವೇ** ಓಂ ಪರಾಯ **ವಾಮಪಾರ್ಶ್ವೆ** ಓಂ ಫಲಿಸೇ **ಹೃದಯೇ** ಓಂ ಯಜ್ಞಾಯ **ಕಟಿಪೃಷ್ಠೇ** ಓಂ ಬಲಿನೇ ಓಂ ಅನಿರುದ್ಧಾಯ **ಗುಹ್ಯೇ** ಸ್ವಾಯಂಭು ಮನವೇ ತದಭಿಮಾನಿ ತನ್ನಿಯಾ

ಮಕ ಓಂ ಭಗಣವಾಚ್ಯ ಭಗವತೇ ಓಂ ಪ್ರಜಾಪತೇ ರೇತಸ್ಯಾಭಿಮಾನಿ ಓಂ ಸೂರ್ಯಾಯ ತನ್ನಿಯಾಮಕ ಆದಿತ್ಯಾಖ್ಯಭಗವತೇ ಪುಮಾತ್ಮ ರೇತಸೇ ಪುರುಷಾಖ್ಯಭಗವತೇ ಪಾಯುಸ್ಥ ಮಿತ್ರನಾಮಕ ಸೂರ್ಯಾಯ ಅಪಾನ ನಾಮಾಖ್ಯವಾಯವೇ ತನ್ನಿಯಾಮಕ ಓಂ ಪ್ರದ್ಯುಮ್ನಾಖ್ಯ ಭಗವತೇ.

**ದಕ್ಷಿಣ ಪಾದ ಪಂಚಸಂಧಿಷು** ಓಂ ಟಂಕಿನೆ ಓಂ ಠಳಕಾಯ ಓಂ ಡರಕಾಯ ಓಂ ಢರಿಣೇ ಓಂ ಣಾತ್ಮನೇ **ವಾಮಪಾದ ಪಂಚಸಂಧಿಷು** ಓಂ ತಾರಾಯ ಓಂ ಥಪತೇ ಓಂ ದಂಡಿನೇ ಓಂ ಧನ್ವಿನೇ ಓಂ ನಮ್ಯಾಯ **ಉಭಯಪಾದಾಭಿಮಾನಿ**ಜಯಂತಾಯ ತನ್ನಿಯಾಮಕಯಜ್ಞ ನಾರಾಯಣಾಯ **ದಕ್ಷಿಣ ಪಾದಾಂಗುಷ್ಠಾಧಿಷ್ಠಾನ** ಓಂ ವಾಯವೇ ತತ್ರ ತೀರ್ಥರೂಪ ಶ್ರೀನಾರಾಯಣಾಯ ತ್ವಚಿ ಅಹಂಪ್ರಾಣೆ ಶ್ರೋತ್ರೆ ಮನಸಿ ನೇತ್ರಯೋಃ ಹೃದಿಸ್ಥಾನೇ ಓಂ ಆಕಾಶಾಖ್ಯರಮಾಯೈತಥಾ ಭಗವದ್ರೂಪ ಓಂ ಪ್ರಾಜ್ಞಾಯ ಓಂ ಪ್ರಿಯಾಮ ಓಂ ಸತ್ಯಾಯ ಓಂ ಅನಂತಾಯ ಓಂ ನಂದಾಯ ಓಂ ಸ್ಥಿತಿನೇ ಹೃದಯಾಕಾಶವ್ಯಾಪ್ತ ಪುರುಷಾಖ್ಯ ಅನಿರುದ್ಧಾಯ ತಾಲುದೇಶೆ ಪ್ರದ್ಯುಮ್ನಾಯ ಓಂ ಇಂದ್ರಯೋನಿನೆ ಶಿರಸ್ಯಾಂತ ಭಾಗ ಕೇಶಮೂಲೇ ಓಂ ಬೀಜನಾಮಾಖ್ಯ ಸಂಕರುಷಣಾಯ ಶಿರಸಿ ಕಪೋಲೋರ್ಧ್ವಭಾಗೇ ಓಂ ವ್ಯಾಪಕ (ವೀತ) ನಾಮಾಖ್ಯವಾಸುದೇವಾಯ ಹೃದಯಾಂತರಸ್ಥಾನೇ ಓಂ ನಾರಾಯಣನಾಮಾಖ್ಯವಿಷ್ಣು ವಾಮನಾಯ ಹೃತ್ಪದ್ಮೇ ಓಂ ವೇದಪ್ರತಿಪಾದ್ಯ ಗಾಯತ್ರೀನಾಮಕ ಭಗದ್ರೂಪಾಯ ಗಾಯತ್ರಿನಾಮಕ ಸಪ್ರಾಣಾಯ ಓಂ ಪಂಚಪ್ರಾಣಾತ್ಮಕ ಯಜ್ಞ ನಾಮಾತ್ಮಕ ವಾಯವೇ.

**ದೇಹಾಖ್ಯರಥಾಶ್ರಯ** ಓಂ ಮುಖ್ಯ ಪ್ರಾಣಾಂತರ್ಗತ ಜ್ಞಾನಾನಂದಾತ್ಮಕ ಓಂ ಯಜ್ಞ ಶಬ್ದವಾಚ್ಯಾಯ **ಅಥಕೆವಚವತ್** ಪಾದಾದಿ ಶಿರಪರಿಯಂತ ಓಂ ನಾರಾಯಣಾಯ ಓಂ ವಾಸುದೇವಾಯ ಓಂ ಸಂಕರುಷಣಾಯ ಓಂ ಪ್ರದ್ಯುಮ್ನಾಯ ಓಂ ಅನಿರುದ್ಧಾಯ, ಆ ಮೌಳಿಪಾದ ಪರ್ಯಂತ ಓಂ ನಾರಾಯಣಾಯ ಓಂ ವಾಸುದೇವಾಯ ಓಂ ಸಂಕರುಷಣಾಯ ಓಂ ಪ್ರದ್ಯುಮ್ನಾಯ ಓಂ ಅನಿರುದ್ಧಾಯ.

ಈ ಪ್ರಕಾರ ನಿರಂತರದಲ್ಲಿ ಇತರ ವಿಷಯಾದಿಗಳಬಿಟ್ಟು, ಈಶಾಧಿಷ್ಠಾನವನ್ನು ಏಕಾಂತಸ್ಥಳದಲ್ಲಿ ಏಕಾಗ್ರಚಿತ್ತವೃತ್ತಿಉಳ್ಳವನಾಗಿ ಚಿಂತಿಸುತ್ತಿರಲು, ಬಹುಜನ್ಮಪೂರ್ವದಲ್ಲಿ ಕ್ರಮಾನುಸಾಧನವಾಗಿ ಬಂದಂಥಾ ಪರಿಪೂರ್ಣಪಕ್ವವಾದ ಪ್ರಾರಬ್ಧಭೋಗಉಳ್ಳಂಥಾ, ಸತ್ವಜೀವರುಗಳಿಗೆ ಸಹಸ್ರ ದಿವಸದಮೇಲೆ ಹೃತ್ಪದ್ಮಕರ್ಣಿಕೆಯಲ್ಲಿ ಇದ್ದಂಥಾ, ಬಿಂಬನಾಮಕ ಕರುಣಾರ್ಣವ ಪರಮಾತ್ಮನು, ಎತ್ಕಿಂಚಿತು ಮಿಂಚಿನೋಪಾದಿಯಲಿ ಅಥವಾ ದೀಪತೇಜೋಪಾದಿಯಲಿ ಸ್ವಯಂತೇಜ ತೋರಿ ತೋರಿ ಅಡಗಿಸುತಿಪ್ಪನು. ಪೂರ್ವೋಕ್ತ ಜೀವರುಗಳಾದವರಿಗೆ ಸಹಸ್ರ ದಿವಸದಮೇಲೆ ಬಹುದಿವಸವಾದರೂ ತೋರದಿರಲು ನಿಶ್ಚಯಾತ್ಮಕನಾಗಿ, ದಶಾಧಿಕ ಅನುಷ್ಠಾನ ಮಾಡಬೇಕು. ಅಂದರೇನು ? ಹತ್ತುಸಹಸ್ರ ದಿವಸ ಮಾಡಬೇಕು. ಮಾಡಿದರೆ, ರಜೋಗುಣಮಿಶ್ರರಿಗಾದ (ಮುಕ್ತಿಯೋಗ್ಯರಿಗೆ) ರೂ ಸಿದ್ಧಿಯಾಗುವದು. ಇದರಂತೆ ಬಹು ಋಷಿಗಳಿಂದ ಮಾಡಲ್ಪಟ್ಟಂಥಾದ್ದು ತಮೋಗುಣದವರಿಗೆ ಅಸಾಧ್ಯವು.

ಈ ಪ್ರಕಾರ ಘನವಾಗಿ ಬಿಂಬದರ್ಶನ (ವಾಸನಾಮಯ) ತೋರಿ ಅಡಗುವಂಥ ಚಿನ್ಹ ತಿಳಿದು ಜ್ಞಾನಿಯಾದಂಥವನು, ಈಶಾಧಿಷ್ಠಾನಚಿಂತನ ಮುಗಿದ ಮೇಲೆ **ಗುರುಗಳಿಂದ ವಿಧಿಪೂರ್ವಕವಾಗಿ ತಿಳಿಸಿಕೊಂಡು** ತ್ರಿವಿಧ ಪ್ರಾಣಾಯಾಮದಿಂದ ವಾಯುನಿರೋಧ ಮಾಡಬೇಕು. ಅದರಲ್ಲಿ ಬಿಂಬದರ್ಶನ ಸ್ಪಷ್ಟಕಾಣಿಸುತಿಹ್ಯನು.

ಪ್ರಾಣಾಯಾಮ ಕ್ರಮ ಹೇಗಂದರೆ :– " ಪ್ರಾಣಾಯಾಮಕ್ರಮ ಮಾಹ ಬೃಹಸ್ಪತಿಃ । ರೇಚಕೋನ್ಯಜೇವಾಯುಂ ಪೂರಕಸ್ಥನಿರೋಧಕಃ । ಸಮೇನ ಸಂಸಿದ್ಧತೋಯೋನೌ ಕುಂಭಕಸ್ಸಮುದೀರ್ಯತೇ ॥"

ಅತ್ರಕುಂಭಕೇ ವಿಷ್ಣುರ್ದೇವತಾ। ಇತರಯೋಸ್ತು ಬ್ರಹ್ಮರುದ್ರದೇವತೇ ಪ್ರಾಣಾಯಾಮ ತ್ರಿಧಾಪ್ರೋಕ್ತಾ ಪೂರಕೋ ರೇಚಕಸ್ತಥಾ । ಕುಂಭಕೋರೇಚಕಸ್ತತ್ರ ನಾಸಾರಂಧ್ರ ದಕ್ಷಣಾತ್ । ನಿರೋಧ ವಾಮರಂಧ್ರೋವಾನಿಕಾ ವಿಸರ್ಜನಂ । ನಿರುದ್ಧ ದಕ್ಷಿಣರಂಧ್ರೇ ವಾಮರಂಧ್ರೇ ಪ್ರಪೂರಣಂ । ತಥಾ ವಾಯುರಂಗುಲ್ಯಾನಿ ಪೂರಕಂತು ತದುಚ್ಯತೇ ॥"

" ರೇಚಕಾತ್ಪೂರಕಾತ್ಪಶ್ಚಾತ್‌ದ್ವೇಪುಟೇನಾಸಯೋಸ್ಥಿತಃ । ಸನ್ನಿರುದ್ಧ್ಯಹೃದಿಸ್ಥಾಪ್ಯವಾಯುಃಸ್ಥಿಷ್ಟೇಸಕುಂಭಕಃ ॥ ಅಗರ್ಭಶ್ಚ ಪ್ರಾಣಾಯಾಮೋದ್ವಿಧಾಪುನಃ । ಅಗರ್ಭಃ ಧ್ಯಾನಹೀನಸ್ತು ಸನರ್ಭಧ್ಯಾನ ಸಂಯುತಃ ॥ ಅಗರ್ಭರಿಕ್ತೋದಿತಃ ಪ್ರಾಣಾಯಾಮ ಸಗರ್ಭಕಃ ॥" ಪ್ರಾಣಾಯಾಮದ್ವಿಧಾ ವಾಯುಪುರಾಣೇ.

ಇಷ್ಟುಕ್ರಮ ಬಹುಪ್ರಕಾರ ತಿಳಿದುಕೊಂಡು ಅನಂತರ ಕುಂಭಕದಲ್ಲಿ ಬಿಂಬಮೂರ್ತಿಧ್ಯಾನ ಜಪಾಮಾಡಬೇಕು.

" ತಸ್ಮಿನ್‌ಮೃದುಲಕ್ಷಣ ತರಬಾಲಾರ್ಕ ಸಹಸ್ರದ್ಯುತಿಂ । ಅಷ್ಟೈಶ್ವರ್ಯದಳಂ ಪದ್ಮಂ ಮಂತ್ರಾಕ್ಷರ(ಣ)ಮಯಂನ್ಯಸೇತ್ ॥ ತಸ್ಮಿನ್‌ದೇವ್ಯಾ ಸಹಾಸೀನಂ ಕೋಟಿಶೀತಾಂಶು ಸನ್ನಿಭಂ ॥ ಪದ್ಮಪತ್ರ ವಿಶಾಲಾಕ್ಷಂ ಸರ್ವಲಕ್ಷಣ ಲಕ್ಷಿತಂ । ಶ್ರೀವತ್ಸಕೌಸ್ತುಭೋರಸ್ಕಪೀತವಸ್ತ್ರಧರಂಹರಿಂ। ವಿಚಿತ್ರಾಭರಣೈರ್ಯುಕ್ತಂ ದಿವ್ಯಮಂಡಲ ಮಂಡಿತಮ್ । ದಿವ್ಯಚಂದನ ಲಿಪ್ತಾಂಗಂ ದಿವ್ಯಪುಷ್ಪ ಸುಶೋಭಿತಮ್ ॥ ತುಳಸೀ ಕೋಮಲದಳಂ। ವನಮಾಲಾ ವಿಭೂಷಿತಂ। ಬಾಲಾರ್ಕಕೋಟಿಸದ್ರುಶಂ। ಶಾಂತಾದೇವ್ಯಾ ಶ್ರಿಯಾ ಸಹ। ಸರ್ವಲಕ್ಷಣ ಲಕ್ಷಣ್ಯಸಮಾಶ್ಲಿಷ್ಟತನುಂಶಿವಂ ॥ ಸನ್ಮುಖೋಭವ ವರದೋಭವ ॥"

ಈ ಪ್ರಕಾರ ಜಪ. ಇದರಂತೆ ಇಂಥ ಒಂದೊಂದು ಜಪವನ್ನು ಶಕ್ತ್ಯಾನುಸಾರವಾಗಿ ಕ್ಷಣ ಕ್ಷಣ, ಮಾಸಕ್ಕೆ ಅಧಿಕ ಮಾಡುವದು. ಶತಾವರ್ತಿನಿ ಅಥವಾ ತದರ್ಧವಾದರೂ ನಿರಾಯಾಸದಿಂದ ಆ ಶ್ರೀಹರಿಯ ಅನುಗ್ರಹವಾಯಿತು ಅಂದರೆ, ಆ ಮೇಲೆ ದಿವಸ ಮುಹೂರ್ತನೋಡಿ ಒಂದೇ ಆವರ್ತಿ ಜಪವಾದ ಮೇಲೆ, ಶ್ರೀಹರಿಗುರುಗಳಿಗೆ ನಮುಸ್ಕರಿಸಿ, ಆ ಕುಂಭಕಾನಂದದಲ್ಲೇನೆ ನಾಶಿಕಾಗ್ರ ದೃಷ್ಟಿಬೆಳಿಸಿ, ಹೃದಯಾಖ್ಯ ಪಟ್ಟಣದ್ವಾರದಲ್ಲಿ ಶೋಭಿಸುವಂಥ ದ್ವಾರಪಾಲಕಾದಿ ಧ್ಯಾನಮಾಡುವಂಥಾ ಪ್ರಕರ್ಣ.

ಓಂ ಪೂರ್ವಭಾಗತ್ರಯದ್ವಾರೇಷು ೧ ಪ್ರಥಮ ಸನ್ನಿಧದ್ವಾರೆ ಓಂ ಶ್ರೀಭೂಮ್ಯೈನಮಃ ೨ ದ್ವಿತಿಯದ್ವಾರೆ ಪ್ರಾಣಾಖ್ಯಸೂರ್ಯಾಯ, ದ್ಯುನಾಮ್ನೇಭಾರತೀ. ೩ ತೃತೀಯದ್ವಾರೆ ಜಯವಿಜಯಾಯ. ೨ ದಕ್ಷಣ ಭಾಗತ್ರಯದ್ವಾರೆಷು, ೧ ಪ್ರಥಮ ಸನ್ನಿಧದ್ವಾರೆ ಓಂ ಶ್ರಿಭೂಮ್ಯೈನಮಃ

೨ ದ್ವಿತೀಯದ್ವಾರೆ ಓಂ ಪ್ರಾಣವ್ಯಾನನಾಮಕ ಚಂದ್ರಾಯ ದಿಂಜ್ಞನಾಮಕ ಭಾರತ್ಯೈನಮಃ ೩ ತೃತೀಯದ್ವಾರೆ ಬಲಪ್ರಬಲಾಯನಮಃ ೩ ಪಶ್ಚಿಮ ಭಾಗತ್ರಯದ್ವಾರೇಷು, ೧ ಪ್ರಥಮದ್ವಾರೆ ಶ್ರೀರಮಾ ಭೂಮ್ಯೈನಮಃ ೨ ದ್ವಿತೀಯೇ ಅಪಾನ ಅಗ್ನಿನಾಮಕವಾಯು ಪೃಥ್ವಿನಾಮ್ನೀಭಾರತ್ಯೈ ನಮಃ ೩ ತೃತೀಯದ್ವಾರೆ ಕುಮುದ ಕುಮುದಾಕ್ಷಾಯನಮಃ ೪ ಉತ್ತ ರಭಾಗತ್ರಯದ್ವಾರೇಷು, ೧ ಪ್ರಥಮ ಸನ್ನಿಧದ್ವಾರೆ ಶ್ರೀರಮಾಶ್ರಿಯೆ ಭೂಮ್ಯೈನಮಃ ೨ ದ್ವಿತೀಯದ್ವಾರೆ ಸಮಾನ ಇಂದ್ರನಾಮಕವಾಯು, ವಿದ್ಯುನ್ನಾಮ್ನೆ ಭಾರತ್ಯೈನಮಃ ೩ ತೃತೀಯದ್ವಾರೆ ನಂದಸುನಂದಾಯ ನಮಃ ೫ ಊರ್ಧ್ವೈಕದ್ವಾರೆ ಶ್ರೀರಮಾಯೈ ಉದಾನನಾಮಕವಾಯು, ವಾಂಜ್ಮನಾಮ್ನೀ ಭಾರತ್ಯೈನಮಃ.

ಅಥಸ್ಥೂಲಶರೀರ ಹೃತ್ಕಮಲ ಮಂದಿರೆ ಮೌಕ್ತಿಕಾದಿ ನಾನಾರತ್ನ ಪ್ರಕಾಶಲಕ್ಷಣ, ಲಕ್ಷ್ಮ್ಯಾಸಮಾಶ್ಲಿಷ್ಟ ತನುಂ, ಶಿವಂ; ಸನ್ಮುಖೋಭವ ಪ್ರಸನ್ನೋಭವ, ವರದೋಭವ.

ಈ ಪ್ರಕಾರ ಜಪ. ಇಂಥಾ ಒಂದೊಂದು ಜಪವನ್ನು ಶಕ್ತ್ಯಾನುಸಾರ ಕ್ಷಣಕ್ಷಣಕ್ಕೆ ಮಾಸಕ್ಕೆ ಅಧಿಕ ಮಾಡೋದು. ಶತಾವರ್ತಿ ಅಥವಾ ತದ ರ್ಧವಾದರೂ ನಿರಾಯಾಸದಿಂದ ಶ್ರೀಹರಿ ಅನುಗ್ರಹವಾಯಿತು ಅಂದರೆ, ಆ ಮೇಲೆ ದಿವಸ ಮುಹೂರ್ತ ನೋಡಿ ಒಂದೇ ಆವರ್ತಿ ಜಪವಾದಮೇಲೆ, ಶ್ರೀಹರಿಗುರುಗಳಿಗೆ ನಮಸ್ಕರಿಸಿ, ಆ ಕುಂಭಕಾನಂದದಲ್ಲೇನೆ ನಾಶಿಕಾಗ್ರ ದೃಷ್ಟಿ ಬೆಳಸಿ ಹೃದಯಾಖ್ಯವಿರಾಜಿತ ಹೇಮಾತ್ಮಕ (ಶತಸ್ತಂಭಯುಕ್ತ) ಹೇಮಮಂಟಪಚಿಂತನೆ ಮಾಡಬೇಕು.

ಹೃತ್ಕಮಲ ಕರ್ಣಿಕಾಂತೆ ತ್ರಿಕೋಣಾಗ್ನಿಮಂಡಲೇ ಶೇಷಪರ್ಯಂಕ ಚಿಂತಯೇತ್ ॥ ತತ್ಪರ್ಯಂಕರಮಾತ್ಮಕತಲ್ಪಂ ಚಿಂತಯೇತ್, ರತ್ನ ಮಯ ಉಪಬರ್ಹಣ ಚಿಂತಯೇತ್ ತಸ್ಮಿನ್‌ದಿವಸೇ ರತ್ನಾದ್ಯಶೋಭಿತ ಆಸನೇ ಬಿಂಬಮೂರ್ತಿ ನಾರಾಯಣಸ್ಯ ನಾನಾ ರತ್ನಮಯಂಪೀಠ, ತೇನಾ ಮುಪರಿ ಚಿಂತಯೇತ್.

ಅಥ ಜ್ಞಾನವೆಂಬುವಂಥ ಸೂರ್ಯ ಉದಯದಿಂದ ಅಷ್ಟಪತ್ರಕಮಲ ವಿಕಸಿತ ಮಾಡಬೇಕು. “ ವಿಕಾಸಂ ತಸ್ಯಕುರ್ವೀತ್ ವಿಜ್ಞಾನರವಿಣಾ

ಹೃದೆ ವಿತತ್ ಕರ್ಣಿಕಾಯಾಂ ವನ್ಹ್ಯರ್ಕ ಶಶಿಬಿಂಬಾಸನ ಕ್ರಮಾಸ್ತ್ರ ತ್ರಯಂ ತ್ರಯೀಮಯೀಸ್ಥಾನಂ ಚಿಂತಯೇವೈಷ್ಣವೋತ್ತಮಃ ಇತಿ ಸ್ಕಾಂದೇ ”.

ಸುಷುಮ್ನಾನಾಡಿಮಧ್ಯೆ ಹೃತ್ಪದ್ಮ ಕರ್ಣಿಕಾಲಯಪತ್ರೇ ಓಂ ಶ್ರೀದೇವ್ಯೈನಮಃ ನಾಳೇಭೂದೇವ್ಯೈನಮಃ ಮೂಲೇ ದುರ್ಗಾಯೈನಮಃ । ಕಮಲಾಷ್ಟ ಪತ್ರೇಷು ಶಕ್ತ್ಯಾದಿದ್ವಾದಶಮೂರ್ತಿ ಚಿಂತಯೇತ್ । ಹೃತ್ಪದ್ಮ ಪೂರ್ವದಿಗ್ದಳೇ ಓಂ ಶಕ್ತ್ಯಾತ್ಮನೇ ಓಂ ಪ್ರತಿಷ್ಠಾತ್ಮನೇ ಅಗ್ನಿ । ದಿಗ್ದಳೇ ಸಂವಿದಾತ್ಮನೇ ದಕ್ಷಿಣದಿಗ್ದಳೇ ಓಂ ಸ್ಫೂರ್ತ್ಯಾತ್ಮನೇ ಓಂ ಪ್ರವರ್ತಾತ್ಮನೇ ನೈರುತ್ಯ । ದಿಗ್ದಳೇ ಓಂ ಕಾಂತಾತ್ಮನೇ ಪಶ್ಚಿಮದಿಗ್ದಳೇ ಓಂ ವಿದ್ಯಾತ್ಮನೇ ಓಂ ಮತ್ಯಾತ್ಮನೇ ವಾಯುದಿಗ್ಧಳೇ ಓಂ ಸೀತಾತ್ಮನೇ ಉತ್ತರದಿಗ್ದಳೇ ಓಂ ಮಾಯಾತ್ಮನೇ ಓಂ ಕಾಲಾತ್ಮನೇ ಈಶಾನ್ಯದಿಗ್ದಳೇ ಓಂ ಪುರುಷಾತ್ಮನೇ.

ಹೃತ್ಪದ್ಮ ಕರ್ಣಿಕಾಗ್ರೇಶ ಜೀವಾಂಗುಷ್ಠಪ್ರಮಾಣ ಓಂ ಪ್ರಾಜ್ಞನಾಮಾಖ್ಯ ಅಗ್ರೇಶಾಯ ಹೃತ್ಪದ್ಮ ಮಧ್ಯೆ ಪ್ರಾದೇಶಪ್ರಮಾಣ ಪುರುಷನಾಮ ಪ್ರಾದೇಶಾಯ ಹೃತ್ಪದ್ಮಮೂಲೇ ಅಂಗುಷ್ಠಪ್ರಮಾಣ ಓಂ ವಿಜ್ಞಾನ ನಾಮಾಖ್ಯ ಮೂಲೇಶಾಯ ತಸ್ಯ ಪಾದಾಶ್ರಯ ಮುಖ್ಯಪ್ರಾಣಾಯ ತಸ್ಮಿನ್ ಶುಚಿಷತ್ ನಾಮಾಖ್ಯ ವಿಷ್ಣವೇ ಓಂ ಲಾಳೂಕಾಯ ಓಂ ಪ್ರಾಣಾಯ ಓಂ ಅಪರಾಜಿತಾಯ ಓಂ ಶೇಷಕಾಯ ಓಂ ಇಂದ್ರಾಯ ವೈಕುಂಠಾಯ.

ಅಷ್ಟಪತ್ರಶ್ವೇತವರ್ಣಜೀವ ಹೃತ್ಪದ್ಮಕರ್ಣಿಕಾವಿಷ್ಟ ಆತ್ಮನಾಮಕ ಓಂ ಶ್ರೀನಾರಾಯಣಾಯ ಜೀವಹೃನ್ಮಂಡಲಸ್ಥ ಜೀವನಾಮಕ ನೃಸಿಂಹಾಯ ಜೀವಾಂತಸ್ಥ ಶರೀರವ್ಯಾಪ್ತ ಶಬಲವರಣ ಶ್ರೀಅನಿರುದ್ಧಾಯ ಓಂ ಅಹಂಕಾರಾತ್ಮನೇ ಜೀವನಾಂತರಾತ್ಮಕ ಓಂ ವಿಷ್ಣುವೇ.

## ಅಥತಸ್ಮಿನ್ನಾಸನಸ್ಥ ಬಿಂಬಮೂರ್ತಿಧ್ಯಾನಂ

ಶ್ರೀಹರಿಯ ದಿವ್ಯಪಾದಕಮಲಗಳು ರಮಾಬ್ರಹ್ಮಾದಿಗಳಿಂದ ಸೇವಿತನಾದಂಥ, ಯೋಗಿಗಳಿಂದ ಧ್ಯಾನಮಾಡಲ್ಪಟ್ಟ ಅಂಘ್ರಿಪಂಕಜಗಳಲ್ಲಿ, ಹೇಮ ಹಂಸಕಮಂಜೀರ ಕಿಂಕಿಣಿಗಳುಳ್ಳ ದಿವ್ಯ ಪೀತಾಂಬರ ಧರಿಸಿದ,

ಸುವರ್ಣ ವರ್ಣದಿಂದ ಶೋಭಿಸುವಂಥ, ವರ್ಧ್ಯಾಣದಿಂದ ಪ್ರಕಾಶಮಾನವಾದ ಕಟಿತಟೋದರವುಳ್ಳ, ಮುಕ್ತಾರತ್ನಪ್ರವಳಾ ಭರಣವರಣಾಗ್ರೈವ ವಕ್ಷಸ್ಥಳವುಳ್ಳ, ಶ್ರೀವತ್ಸಕೌಸ್ತುಭಗಳಿಂದ ಶೋಭಿಸುವಂಥ ಉರುಸ್ಥಳವುಳ್ಳ ಹೇಮಕಂಕಣಕೇಯೂರ, ಮುದ್ರಿಕಾ, ಬಾಹುಭೂಷಿತನಾದ ಶಂಖಚಕ್ರಗದಾಪದ್ಮಧಾರಿಯಾದ ಮಂದಸ್ಮಿತದಿಂದ ಮುಖಪಂಕಜವುಳ್ಳಂಥ ಕಮಲೋಪಾದಿ ವಿಸ್ತ್ರತವಾದ ನೇತ್ರಗಳುಳ್ಳ, ಕರಣಗಳಲ್ಲಿ ಮಹಾಪ್ರಕಾಶಮಾನವಾದ ಮಕರಕುಂಡಲುಗಳುಳ್ಳ, ನಾನಾಭೂಷಣಗಳಿಂದ ಭೂಷಿತವಾದ, ನೀಲವಾದ ಕೂದಲುಗಳಿಂದಶೋಭಿಸುವಂಥ, ಸುವರ್ಣಾತ್ಮಕ ಅಮೌಲಿಕ ರತ್ನಗಳಿಂದಯುಕ್ತವಾದ ಮುಕುಟವುಳ್ಳಂಥ, ಅನಂತಾನಂತ ಕ್ರಿಯಾತ್ಮಕನಾದ ಅಘಟಾಘಟಕನಾದ ಅತ್ಯದ್ಭುತ ಆಶ್ಚರ್ಯೋಪೇತನಾದ, ಅದ್ವಿತೀಯನಾದ ಅಂತರ್ಬಹಿರ್ವ್ಯಾಪ್ತನಾದ, ಅವ್ಯಾಹತ ಐಶ್ವರ್ಯಗುಣಸಂಪನ್ನನಾದ, ಆದಿಮಧ್ಯಾಂತರಹಿತನಾದ, ಉದಿತವಾದಂಥ ಸೂರ್ಯರುಗಳ ಪ್ರಕಾಶಮಾನದಿಂದ ಕ್ರೀಡಾದಿಗುಣವಿಶಿಷ್ಟವಾದ ಗುಣಗಳಿಂದ ಪೂರ್ಣನಾದ, ಪರಬ್ರಹ್ಮನಾಮಕನಾದ, ಮಹಾರಾಜಾಧಿರಾಜನಾದ, ಪುರಾಣಪುರುಷನಾದ ಮಹಾಮಹಿಮೋಪೇತನಾದ, ಸನಾತನನಾದ ಸಮಾಭ್ಯಧಿಕ ರಹಿತನಾದ ಸಚ್ಚಿದಾನಂದಮೂರ್ತಿ ಶ್ರೀಹರಯೇನಮಃ ॥

ಎಂತೆಂದು ಶ್ರೀಹರಿ ತಾನೇನುಡಿದು ನುಡಿಸಿದಂಥ ಪ್ರಾಕೃತ ಭಾಷಣದಿಂದ ಆಪಾದಮೌಳಿಪರಿಯಂತ ಏಕಾಗ್ರಚಿತ್ತದಿಂದ ಗೌಪ್ಯದಲ್ಲಿ ಚಿಂತಿಸುತ್ತಿರಲು, ವಾಯುಯಿಲ್ಲದ ದೀಪದೋಪಾದಿಯಲ್ಲಿ ಅನಂತರೂಪದಲ್ಲಿ ಒಂದುರೂಪ ನಿಲ್ಲುತಿಹದು. ಮನಸ್ಸು ಚಂಚಲವಾದರೆ ಅದೃಶ್ಯನಾಗುವನು. ಮತ್ತೆ ನಾಶಿಕಾದೃಷ್ಟಿ ಬೆಳಸಿ ಮುಂಭಾಗದಲ್ಲಿ ಒಳಿತಾಗಿ ಪ್ರತಿಮಾ ನೋಡಿ, ನೇತ್ರಮುಚ್ಚಿ ಅಲ್ಲಿ ಅದೇರೂಪ ಅಲ್ಲಿ ತನ್ನ ಉಪಾಸನಾಮೂರ್ತಿ ಧ್ಯಾನಿಸಿ, ಇತರ ವಿಷಯಾದಿಗಳಿಂದ ಮನದಲ್ಲಿ ರಹಿತನಾಗಿ ಪರಮಬುದ್ಧಿಯುಳ್ಳವನಾಗಿ, ಸಮಾಧಿರೂಢನಾಗಲು ಜ್ಞಾನಿಯಾದಂಥವನು ಅಖಂಡ ಧ್ಯಾನಯೋಗದಿಂದ, ಅಪ್ರಾಕೃತವಾದಂಥಾ ವಿಷ್ಣುರೂಪಾತ್ಮಕವಾದಂಥಾ ಗ್ರಹದಲ್ಲಿ ಆವಾಹನಾದಿ ಷೋಡಶೋಪಚಾರಗಳಿಂದ ನಿರ್ದುಷ್ಟವಾದ ಮನಸ್ಸಿನಿಂದ ಅಲೌಕಿಕವಾದಂಥ ಮಹಾರಾಜೋಪಚಾರಗಳಿಂದ ಹೃತ್ಪದ್ಮ

ಕರುಣಿಕಾಧಿಷ್ಟಿತನಾದ ಜಗದೀಶಗೆ ತನ್ನ ಭಕ್ತಿಯಿಂದಲೇ ಅನನ್ಯ ಮನಸ್ಕನಾಗಿ ಬಾಹ್ಯಾರ್ಚನೆಯೋಪಾದೆಯಲಿ ಅರ್ಚಿಸಲಿಕ್ಕೆ ಅಲ್ಲಿ ಚಿಂತನ ಮಾಡಿದಹಾಗೆ, ಆ ಪ್ರಾಕೃತ ಪದಾರ್ಥಗಳಿಂದ ಪೂಜಾಕೊಂಬುವನು.

"ನಮೋನಮೋಽಶೇಷದೋಷದೂರ ಪೂರ್ಣಗುಣಾತ್ಮನೇ ॥ ವಿರಿಂಚಶರ್ವಪೂರ್ವೇಡ್ಯ ವಂದ್ಯಾಯ ಶ್ರೀವರಾಯತೇ ॥ ಇತಿ ಅಣುಭಾಷ್ಯೆ ಕಾಯೇನವಾಚಾ ಮನಸೇಂದ್ರಿಯೇರ್ವಾ ಬುದ್ಧ್ಯಾತ್ಮನಾವಾ ಪ್ರಕೃತಿಸ್ವಭಾವಾತ್ಕರೋಮಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥ ಶ್ರೀಲಕ್ಷ್ಮೀವೆಂಕಟೇಶವಿಠ್ಠಲಾಯ ನಮೋನಮಃ ॥"

ತರುವಾಯ ಪುನಃ ತತ್‌ಸ್ಥಾನಗಳಲ್ಲಿ ತಥಾನಾಡಿಗಳಲ್ಲಿದ್ದಂಥಾ ಭಗದ್ರೂಪಗಳನ್ನು, ಈಶಾಧಿಷ್ಠಾನವನ್ನು ಚಿಂತಿಸಬೇಕು ಪೂರ್ವೋಕ್ತ ಪ್ರಕಾರ ಯಾವ ಪುರುಷನು ಅಪ್ರಮತ್ತನಾಗಿ ನಿರಂತರದಲ್ಲಿ ಮಾನಸ ಪೂಜಾನಂತರ ಕಾಯಿಕವಾಚಿಕಗಳಿಂದ ಯಥಾಮತಿಯುಳ್ಳವನಾಗಿ, ಸಂಚಾರವೇ ಪ್ರದಕ್ಷಣವು, ವಾಕ್ಯವೃತ್ತಿಯೇ ಪರಮಾತ್ಮನ ಸ್ತೋತ್ರರೂಪವಾದಂಥಾದ್ದು, ಅಹರ್ನಿಶಿಯಲ್ಲಿ ಮಾಡುವಂಥ ಸಮಸ್ತ ಸತ್ಕಾರ್ಯಗಳು ಪರಮಾತ್ಮನ ಸೇವಾರೂಪವಾದಂಥವು. ಶಯನವೇ ಪರಮಾತ್ಮನಿಗೆ ನಮಸ್ಕಾರವು ಎಂದು ಬಿಂಬರೂಪನಾದ ಪರಮಾತ್ಮನಲ್ಲಿ ಸಮರ್ಪಣ ಮಾಡುತ್ತಾನೋ, ಆ ಪುರುಷ ಜೀವನ್ಮುಕ್ತನಾದ ಕಾರಣ ಅವನೇ ಪುರುಷಾಯೆಂತ ಕರೆಸಿಕೊಳ್ಳುತ್ತಾನೆ. ಏತಾದಿ ವಿಷಯದಲ್ಲಿ ಸಂದೇಹವಿಲ್ಲವು. ಜ್ಞಾನಪೂರ್ವಕವಾಗಿ ವಿಧಿಯುಕ್ತವಾಗಿ ಅನುಷ್ಠಾನ ಮಾಡೋಣದರಿಂದ ಶಾಶ್ವತವಾದ ಮುಕ್ತಿಯೆಂದು ಹೇಳುವದು ಶ್ರೀಕೃಷ್ಣಾರ್ಪಣಮಸ್ತು.

ಮಾನಸೀಕ ಪೂಜಾನಂತರದಲ್ಲಿ ಕುಂಭಕ ಇಳಿಸಿ, ಶ್ರೀಲಕ್ಷ್ಮೀಪತಿ ಪಾದಕಮಲಾಸಕ್ತದಿಂದ ಧ್ಯಾನಸ್ಥನಾಗಿ ಮೂಲಾಧಾರದಲ್ಲಿ ಅಧೋದೃಷ್ಟಿ ಬೆಳಸಿಕೊಂಡು ಕೆಲವು ದಿವಸ ಸಾಧನಮಾಡುತ್ತಾ ಇರಲಿಕ್ಕೆ ಇವನ ಜ್ಞಾನ ಭಕ್ತಿ ವೈರಾಗ್ಯದಿಂದ ಪಕ್ವವಾದಂಥ, ಪ್ರಾರಬ್ಧ ವ್ಯಕ್ತವಾಗಿ ಬಹುದಿವಸದ ಮೇಲೆ ಶ್ರೀನಾರಾಯಣನು ದಿವ್ಯತೇಜಸ್ಸು ಕೊಡುವನು. ಆ ದಿವ್ಯ ತೇಜದಿಂದ ಅವಲೋಕನ ಮಾಡತಿರಲಿಕ್ಕೆ ಸುಷುಮ್ನಾನಾಡಿಯಲ್ಲಿದ್ದಂಥ ಕಮಲಗಳು ತೋರುತಿಹವು. ಅಲ್ಲಿ ಮಾಡುವಂಥಾ ಧ್ಯಾನಪ್ರಕರಣವು—

ಶ್ರೀಗುರುಭ್ಯೋನಮಃ ॥ ಹರಿಃ ಓಂ ॥ ಸುಷುಮ್ನಾನಾಡ್ಯಾದಿ ದಕ್ಷಿಣ ಪಾರ್ಶ್ವಸಂಧಿ ಷಟ್‌ತ್ರಿಂಶತ ಸಹಸ್ರ (೩೬೦೦೦) ನಾಡ್ಯೇಷು ಷಟ್‌ತ್ರಿಂಶತ್ ಸಹಸ್ರ ಪುರುಷರೂಪೇಭ್ಯೋನಮಃ ॥ ಸುಷುಮ್ನಾ ವಾಮಪಾರ್ಶ್ವೇ ಷಟ್ ತ್ರಿಂಶತ್ ಸಹಸ್ರ ನಾಡ್ಯೇಷು ಷಟ್‌ತ್ರಿಂಶತ ಸಹಸ್ರ (೩೬೦೦೦) ಸ್ತ್ರೀರೂಪಿ ಪರಮಾತ್ಮನೇಭ್ಯೋನಮಃ ತತ್‌ನಾಡ್ಯೇಷು ಪ್ರವಿಷ್ಟ ಓಂ ಚಂದ್ರಾಯ ಓಂ ವೈರಾಟನೆ.

೧ ಸುಷುಮ್ನಾ ಪೂರ್ವಭಾಗೇ ಪ್ರಕಾಶಿನೀ ನಾಡಿಮಧ್ಯೆ ಶ್ವೇತ ವರ್ಣ ಓಂ ವಾಸುದೇವಾಯ

೨ ಸುಷುಮ್ನಾ ದಕ್ಷಿಣಭಾಗೇ ವೈದ್ಯುತೀ ನಾಡೀಮಧ್ಯೆ ಪಿಂಗಳ ವರ್ಣ ಓಂ ಸಂಕರುಷಣಾಯ

೩ ಸುಷುಮ್ನಾ ಪೃಷ್ಠಭಾಗೆ ವಜ್ರಿಕಾ ನಾಡೀಮಧ್ಯೆ ಹರಿದ್ವರ್ಣ ಓಂ ಪ್ರದ್ಯುಮ್ನಾಯ

೪ ಸುಷುಮ್ನಾ ವಾಮಭಾಗೇ ಆರ್ಯ ನಾಡೀಮಧ್ಯೆ ನೀಲವರ್ಣ ಓಂ ಅನಿರುದ್ಧಾಯ

೫ ಸುಷುಮ್ನಾ ಮಧ್ಯಭಾಗೇ ಬ್ರಹ್ಮನಾಡೀಮಧ್ಯೆ ರಕ್ತವರ್ಣ ಓಂ ನಾರಾಯಣಾಯ

೧ ಸುಷುಮ್ನಾ ಮೂಲ ಚತುರ್ದಳಕಮಲ ಪೂರ್ವಭಾಗ ದಳ ದ್ವಯ ಶ್ವೇತವರ್ಣ ಪದ್ಮೆ ಓಂ ಪ್ರದ್ಯುಮ್ನಾಯ

೨ ಸುಷುಮ್ನಾ ಮೂಲದ ಚತುರ್ದಳಕಮಲ ದಕ್ಷಿಣಭಾಗೇ ದಳ ದ್ವಯೆ ಶ್ವೇತವರ್ಣ ಪದ್ಮೆ ಓಂ ಪ್ರದ್ಯುಮ್ನಾಯ

೩ ಸುಷುಮ್ನಾ ಮೂಲ ಚತುರ್ದಳಕಮಲ ಪಶ್ಚಿಮಭಾಗೇ ದಳ ದ್ವಯ ಶ್ವೇತವರ್ಣ ಪದ್ಮೆ ಓಂ ಸಂಕರುಷಣಾಯ

೪ ಸುಷುಮ್ನಾ ಮೂಲ ಚತುರ್ದಳಕಮಲ ಉತ್ತರಭಾಗೇ ದಳ ದ್ವಯ ಶ್ವೇತವರ್ಣ ಪದ್ಮೆ ಓಂ ವಾಸುದೇವಾಯ

೫ ಸುಷುಮ್ನಾ ಮೂಲ ಚತುರ್ದಳಕಮಲ ಮಧ್ಯಭಾಗೇ ದಳ ದ್ವಯ ಶ್ವೇತವರ್ಣ ಪದ್ಮೇ ಓಂ ನಾರಾಯಣಾಯ

೧ ಓಂ ನಾಭಿಪ್ರದೇಶೇಷು ಸುಷುಮ್ನಾ ಪೂರ್ವಭಾಗೆ ಷಡ್‌ದಳ ರಕ್ತವರ್ಣ ಪದ್ಮೆ ಓಂ ಅನಿರುದ್ಧಾಯ

೨ ಓಂ ನಾಭಿಪ್ರದೇಶೇಷು ಸುಷುಮ್ನಾ ದಕ್ಷಿಣಭಾಗೇ ಷಡ್‌ದಳ ರಕ್ತವರ್ಣ ಪದ್ಮೆ ಓಂ ಪ್ರದ್ಯುಮ್ನಾಯ

೩ ಓಂ ನಾಭಿಪ್ರದೇಶೇಷು ಸುಷುಮ್ನಾ ಪಶ್ಚಿಮಭಾಗೇ ಷಟ್‌ದಳ ರಕ್ತವರ್ಣ ಪದ್ಮೆ ಓಂ ಸಂಕರುಷಣಾಯ

೪ ಓಂ ನಾಭಿಪ್ರದೇಶೇಷು ಸುಷುಮ್ನಾ ಉತ್ತರಭಾಗೇ ಷಡ್‌ದಳ ರಕ್ತವರ್ಣ ಪದ್ಮೆ ಓಂ ವಾಸುದೇವಾಯ

೫ ಓಂ ನಾಭಿಪ್ರದೇಶೇಷು ಸುಷುಮ್ನಾ ಮಧ್ಯಭಾಗೇ ಷಡ್‌ದಳ ರಕ್ತವರ್ಣ ಪದ್ಮೆ ಓಂ ನಾರಾಯಣಾಯ

೧ ಸುಷುಮ್ನಾ ಮಧ್ಯಪ್ರದೇಶ ಹೃದಯಸ್ಥಾನ ಪೂರ್ವಭಾಗೇ ಅಷ್ಟದಳ ಪದ್ಮೆ ಓಂ ಅನಿರುದ್ಧಾಯ

೨ ಸುಷುಮ್ನಾ ಮಧ್ಯಪ್ರದೇಶ ಹೃದಸ್ಥಾನ ಅಷ್ಟದಳ ಪದ್ಮೆ ದಕ್ಷಿಣಭಾಗೇ ಓಂ ಪ್ರದ್ಯುಮ್ನಾಯ

೩ ಸುಷುಮ್ನಾ ಮಧ್ಯಪ್ರದೇಶ ಹೃದಯಸ್ಥಾನ ಪಶ್ಚಿಮಭಾಗೇ ಅಷ್ಟದಳ ಪದ್ಮೆ ಓಂ ಸಂಕರುಷಣಾಯ

೪ ಸುಷುಮ್ನಾ ಮಧ್ಯಪ್ರದೇಶ ಹೃದಯಸ್ಥಾನ ಅಷ್ಟದಳ ಪದ್ಮೆ ಉತ್ತರಭಾಗೇ ಓಂ ವಾಸುದೇವಾಯ

೫ ಸುಷುಮ್ನಾ ಮಧ್ಯಪ್ರದೇಶ ಹೃದಯಸ್ಥಾನ ಮಧ್ಯಭಾಗೇ ಅಷ್ಟದಳ ಪದ್ಮೆ ಮಧ್ಯೇ ಬಿಂಬಮೂರ್ತೇ ಓಂ ನಾರಾಯಣಾಯನಮಃ

ಹೃದಯೋರ್ಧ್ವದೇಶೇಷು ಉರುಸ್ಥಳೇ ಸುಷುಮ್ನಾ ಮಧ್ಯಭಾಗೆ ದ್ವಾದಶದಳ ರಕ್ತವರ್ಣ ಪದ್ಮೇ ಓಂ ಅನಿರುದ್ಧಾದಿ ಪಂಚರೂಪಾತ್ಮಕ ವಿಷ್ಣವೇನಮಃ

ಕಂಠಸ್ಥ ತಾಲುಸ್ಥಾನೇ ದ್ವಿದಳ ಮೌಕ್ತಿಕವರ್ಣ ಪದ್ಮೆ ಸುಷುಮ್ನಾಗತ ಪೂರ್ವಾಪಂಚಪದ್ಮೇ ಓಂ ಅನಿರುದ್ಧಾದಿ ಪಂಚರೂಪಾತ್ಮನೇನಮಃ

ಸುಷುಮ್ನಾ ಭ್ರೂಮಧ್ಯ ಪೂರ್ವಭಾಗ ಚತುರ್ದಳ ಶ್ವೇತವರ್ಣ ಪದ್ಮೆ ಓಂ ಅನಿರುದ್ಧಾಯ

ಸುಷುಮ್ನಾ ಭ್ರೂಮಧ್ಯ ಪ್ರಾದೇಶ ದಕ್ಷಿಣಭಾಗೇ ಚತುರದಳ ಶ್ವೇತ ವರ್ಣಪದ್ಮೆ ಓಂ ಪ್ರದ್ಯುಮ್ನಾಯ

ಸುಷುಮ್ನಾ ಭ್ರೂಮಧ್ಯ ಪ್ರದೇಶೆ ಪಶ್ಚಿಮಭಾಗೇ ಚತುರದಳ ಶ್ವೇತ ವರ್ಣಪದ್ಮೆ ಓಂ ಸಂಕರುಷಣಾಯ

ಸುಷುಮ್ನಾ ಭ್ರೂಮಧ್ಯ ಪ್ರದೇಶೆ ಉತ್ತರಭಾಗೇ ಚತುರದಳ ಶ್ವೇತ ವರ್ಣಪದ್ಮೆ ಓಂ ವಾಸುದೇವಾಯ

ಸುಷುಮ್ನಾ ಭ್ರೂಮಧ್ಯ ಪ್ರದೇಶೆ ಮಧ್ಯಭಾಗೇ ಚತುರದಳ ಶ್ವೇತ ವರ್ಣಪದ್ಮೆ ಓಂ ನಾರಾಯಣಾಯ

ಶಿರಸ್ಯಾಂತದೇಶೇಷು ಸುಷುಮ್ನಾ ಪೂರ್ವಭಾಗೇ ದ್ವಾದಶದಳ ಶ್ವೇತ ವರ್ಣಪದ್ಮೆ ಓಂ ಅನಿರುದ್ಧಾಯ, ಶಿರಶ್ಯಾಂತದೇಶೇಷು ಸುಷುಮ್ನಾ ದಕ್ಷಣ ಭಾಗೇ ದ್ವಾದಶದಳ ಶ್ವೇತವರ್ಣ ಪದ್ಮೆ ಓಂ ಪ್ರದ್ಯುಮ್ನಾಯ, ಶಿರಶ್ಯಾಂತ ದೇಶೇಷು ಸುಷುಮ್ನಾ ಪಶ್ಚಿಮಭಾಗೇ ದ್ವಾದಶದಳ ಶ್ವೇತವರಣ ಪದ್ಮೆ ಓಂ ಸಂಕರುಷಣಾಯ, ಶಿರಸ್ಯಾಂತದೇಶ ಸುಷುಮ್ನಾ ಉತ್ತರಭಾಗೇ ದ್ವಾದಶದಳ ಶ್ವೇತವರ್ಣಪದ್ಮೆ ಓಂ ವಾಸುದೇವಾಯ, ಶಿರಶ್ಯಾಂತದೇಶ ಸುಷುಮ್ನಾ ಮಧ್ಯಭಾಗೇ ದ್ವಾದಶದಳ ಶ್ವೇತವರ್ಣಪದ್ಮೆ ಓಂ ನಾರಾಯಣಾಯನಮಃ

ಶಿರಸ್ಯಾಂತ್ಯೋರ್ಧ್ವಭಾಗೇ ದ್ವಾದಶಾಂಗುಲಾಂತೇ ಘಕ್ರೋಪಮ, ಶ್ವೇತವರ್ಣ ದ್ವಾದಶದಳ ಏಕ ಪದ್ಮೆ ತುರ್ಯನಾಮಾಖ್ಯ ಅಶೇಷಕರ್ಮ ಸಾಕ್ಷಿಣೀ ಮೋಕ್ಷಪ್ರದ ವಾಸುದೇವಾಯನಮೋನಮಃ

ಈ ಪ್ರಕಾರ ಚಿಂತನಮಾಡಿ ಮಹಾಸುಖಬಡಬೇಕು. ಇಂಥಾ ಅನು ಷ್ಠಾನ ಮುಗಿದ ಮೇಲೆ ಮಧ್ಯಮಾಂಗುಷ್ಠದಿಂದ ನೇತ್ರಗಳಿಗೆ ಉದಕವನ್ನು ಸ್ಪರ್ಶಮಾಡಿ, ಪುನಃ ಆಚಮನಮಾಡಿಕೊಂಡು ಆಸನ ಕೆಳಭಾಗದಲ್ಲಿ ಉದಕ ಪ್ರೋಕ್ಷಣಮಾಡಿ ವಿಧಿವತ್ ಬಾಹ್ಯಾರ್ಚನೆ ಮಾಡಬೇಕು.

ದೇಹದಲ್ಲಿ ಪಿಂಗಳಾ ಇಡಾ ಸುಷುಮ್ನಾ ಎಂದು ಮೂರು ನಾಡಿಗಳು. ದಕ್ಷಣಭಾಗದವು ಪಿಂಗಳಾನಾಡಿ, ಉತ್ತರಭಾಗದವು ಇಡಾನಾಡಿ, ಮಧ್ಯ

ಭಾಗದಲ್ಲಿ ಇರುವದು ಸುಷುಮ್ನಾ ಎಂತ ವೇದಪಾರಂಗತರಾದ ಜ್ಞಾನಿಗಳಿಂದ ಕರೆಸಿಕೊಳ್ಳುತ್ತವೆ. ೫೦೦ ಪಿಂಗಳಾಂಶಗಳು ದಕ್ಷಿಣಾಯನ ನಾಡಿಗಳೆಂದು ಕರೆಸಿಕೊಳ್ಳುತ್ತವೆ ಅನ್ಯವಾದ ಇಡಾಂಶ ೫೦೦ ನಾಡಿಗಳು ಉತ್ತರಾಯಣ ನಾಡಿಗಳೆಂದು, ಸುಷುಮ್ನಾ ಬ್ರಹ್ಮಯಾನವೆಂದು ಕರೆಸಿಕೊಳ್ಳುತ್ತವೆ. ಹೀಗೆ ತಿಳಿದು ಧ್ಯಾನಮಾಡಿದರೆ ಸಕಲ ಪಾಪಗಳಿಂದ ಮುಕ್ತನಾಗುತ್ತಾನೆ. ಪೂರ್ವೋಕ್ತ ಮಾನಸಾ ಧ್ಯಾನದಲ್ಲಿ ಇಂದ್ರಿಯಗಳು ಇತರ ವಿಷಯದಲ್ಲಿ ಪ್ರವರ್ತಿಸಿ ಮನಸ್ಸು ಚಂಚಲವಾಗಿ ತೋರಿ ಧ್ಯಾನಂಗತವಾದ, ಮೂರ್ತಿ ಅದೃಶ್ಯವಾಗುತ್ತಿರಲು ಮುಂದೆ ಹೇಳುವ ಪ್ರಕಾರ ತಿಳಿದು ಆಚರಿಸಬೇಕು.

ಪ್ರಾಣಾಯಾಮಕ್ರಮದಿಂದ ತನ್ನ ಶಕ್ತಿ ಇದ್ದಷ್ಟು ಕುಂಭಕದಲ್ಲಿ ವಾಯು ನಿರೋಧಮಾಡಿ ನಾಸಾಗ್ರದೃಷ್ಟಿ ಬೆಳಸಿ, ಹೃದಯದಲ್ಲಿ ಹರಿಮೂರ್ತಿ ನಿಲ್ಲಿಸಿ ಚಿತ್ತೈಕಾಗ್ರದಿಂದ ವಿಷ್ಣುವಿನ ಧ್ಯಾನಮಾಡಬೇಕು.

ಸಾಮಾನ್ಯವಾಗಿ ಇಂದ್ರಿಯಗಳು ಸ್ವಭಾವತಾ ವಿಷಯದಲ್ಲೇ ಪ್ರವರ್ತಿಸುತ್ತವೆ. ಕಾರಣ ಪ್ರಯತ್ನದಿಂದ ಮನಸ್ಸು ವಿಷಯಾದಿಗಳಿಂದ ನಿಗ್ರಹಿಸಿ ಪುನಃ ಧೇಯವಸ್ತುವಿನಲ್ಲಿಡಬೇಕು. ಇದಕ್ಕೆ ಪ್ರತ್ಯಾಹಾರವೆಂದೆನ್ನುತ್ತಾರೆ.

ಶ್ರೀವಿಷ್ಣುವಿನ ಅನಂತರೂಪಗಳು ಇದರಲ್ಲಿ ಇಷ್ಟವಾದ ಒಂದು ರೂಪವನ್ನು ಗುರುಗಳು ಪೇಳಿದಂತೆ ಧ್ಯಾನಮಾಡಲು ಶ್ರೀಹರಿಯು ಪ್ರೀತನಾಗುತ್ತಾನೆ. ಪುನಃ ಚಿತ್ತಚಂಚಲವಾಗಲು ಬಿಡದೇ ಧಾರಣಯೋಗದಿಂದ ಧ್ಯಾನಮಾಡುವದು, ಷೋಡಶೋಪಚಾರ ಪೂಜಾ ಪುಷ್ಪಾ ಸುದಕ್ಷಣಾದಿಗಳಿಂದ ಮನೋಮಯ ವಸ್ತುಗಳಿಂದ ಹರಿಗೆ ಅರ್ಪಿಸಬೇಕು

ಪುನಃ ಇಂತಹ ಧಾರಣದಿಂದಲೂ ಮನಸ್ಸು ಚಂಚಲವಾದರೆ, ಏಕಾಗ್ರಚಿತ್ತದಿಂದ ನಾಸಾಗ್ರದೃಷ್ಟಿ ಬೆಳಸಿ, ಎದುರಿಗಿದ್ದ ಪ್ರತಿಮಾ ಚನ್ನಾಗಿ ನೋಡಿ, ಧಾರಣ ಧ್ಯಾನಬೆಳೆಸುವದು. ಸಾವಧಾನವಾಗಿ ಮೊದಲಿಗೆ ಶ್ರೀಹರಿಯ ಒಂದೊಂದು ಅಂಗವನ್ನು ಧ್ಯಾನಗೈಯ್ಯುತ್ತಾ ಆ ಅಂಗ ಧ್ಯಾನಕ್ಕೆ ನಿಲ್ಲಲು, ಪುನಃ ಎರಡನೇ ಅಂಗವನ್ನು ಧ್ಯಾನಮಾಡಲು

ಪ್ರಾರಂಭಿಸಿ ಧ್ಯಾನಗೈದು ಹೃದಯದಲ್ಲಿ ನಿಲ್ಲಿಸುತ್ತಾ ಸುಲಕ್ಷಣ ಸರ್ವಾಂಗ ಸಂಪೂರ್ಣನಾದ ವಿಚಕ್ಷಣನಾದ, ಭಗವಾನ್ ಹರಿಯಧ್ಯಾನ ಮಾಡುತ್ತಿರಲು ಮನಸ್ಸು ಧ್ಯಾನದಿಂದ ಚಲಿಸಿದರೇ ಪುನಃ ಪುನಃ ಪ್ರತಿಮಾವನ್ನು ನೋಡುತ್ತ ನಾಸಾಗ್ರದೃಷ್ಟಿ ಒಂದೇ ಮನಸ್ಸಿನಿಂದ ಅಧೋಕ್ಷಜನನ್ನು ನೋಡುತ್ತ ನೋಡುತ್ತ ಎಡಬಿಡದೇ ತನ್ನ ಯೋಗ್ಯತಾಕಾಲಪರಿಯಂತವಾಗಿ ಹರಿಯನ್ನು ನೋಡುವದು, ಧಾರಣವೆಂದು ಕರಿಸಿಕೊಳ್ಳುತ್ತದೆ. ಜನ್ಮಾಂತರಕ್ಕೆ ಫಲಪ್ರದವಾಗುತ್ತದೆ. ಹಿಂದಿನ ವಾಸನಾ ಸಂಸ್ಕಾರ ಬಲದಿಂದ ಮುಂದಿನ ಜನುಮದಲ್ಲಿ ಧ್ಯಾನಾನುಕೂಲಫಲ ಒದಗುತ್ತದೆ.

ಹಿಂದಿನ ಜನ್ಮದಲ್ಲಿ ಧಾರಣಧ್ಯಾನ ಮಾಡಿದವನು, ಜನ್ಮಾಂತರದಲ್ಲಿ ಧರ್ಮವಾನ್ ಸದಾಚಾರನು, ಬಹುಶ್ರುತನು ಸುತಪಸ್ವಿಯಾಗಿ ಶಾಂತರಾದ ಜ್ಞಾನಿಗಳಾದ ಗುರುಗಳಿಂದ ಅಚಂಚಲವಾದ ಧಾರಣಯೋಗವನ್ನು ಸಂಪಾದಿಸುವನು.

ಯಾವ ಪುರುಷನು ಧಾರಣಯೋಗ ಹೀನನಾಗಿ, ಸದಾದುಷ್ಟ ಕಾಮದಲ್ಲಿ ನಿರತನಾಗಿರುವನೋ ಅವನು ಜನ್ಮಾಂತರದಲ್ಲಿ ದುಷ್ಟಜನ್ಮವನ್ನು ಹೊಂದಿ ಹೀನಗತಿ ಐದುತ್ತಾನೆ. ಕಾರಣ ಹಿತವನ್ನು ಬಯಸತಕ್ಕ ಪುರುಷನು ಬಹು ಎಚ್ಚರದಿಂದ, ಮಹಾ ಆಯಾಸ ಪ್ರಯತ್ನಪೂರ್ವಕವಾಗಿ ಶ್ರವಣ ಮನನದಿಂದ ಜ್ಞಾನಸಂಪಾದಿಸಿ ಧ್ಯಾನಮಾಡಲೇಬೇಕು. ಇಂಥ ವಾಸನಾತ್ಮಕ ಪ್ರತಿಮಾಧಾರಣ ಧ್ಯಾನಕ್ಕೆ ಕಾರಣವಾದ ಅಭ್ಯಸ್ಥಮನಸ್ಕನಾಗಬೇಕು. ಹೀಗೆ ಎಷ್ಟೋ ಜನುಮಗಳಲ್ಲಿ ಧಾರಣಧ್ಯಾನಯೋಗದಿಂದ ಸಂತುಷ್ಟನಾದ ಹರಿಯು ಕರುಣಾಮಾಡಿ, ಜೀವಸ್ವರೂಪಗತ ಬಿಂಬಸಂಜ್ಞನಾದ ಹರಿಯು ಕೃಪೆಮಾಡಿ ಯಥಾಯೋಗ್ಯವಾದ ಮನೋರಮದಿಂದ ದರ್ಶನ ಕೊಡುತ್ತಾನೆ. ನಿರ್ದೋಷನು, ಸ್ವಪ್ರಕಾಶನು, ಸಚ್ಚಿದಾನಂದ ವಿಗ್ರಹನು, ಸೂರ್ಯಕೋಟಿ ಪ್ರಭಾ ಉಳ್ಳವನು, ಸಸ್ಮಿತಾನನ ಸುಂದರ ಸೂಕ್ಷ್ಮನಾದ ಹರಿಯು ಬಿಂಬದರ್ಶನ ಮಾಡುತ್ತ ಪ್ರಕೃಷ್ಟವಾದ, ಸಮೀಚೀನವಾದ ತಪಸ್ಸಿನಿಂದ ಮುನಿಯಾದವನು ಆನಂದಬಾಷ್ಪಗಳಿಂದ ಆನಂದಮಗ್ನನಾಗಿ ಪುಷ್ಟಾಂಗನಾಗಿ ಶೀಘ್ರದೃಷ್ಟಿಯುಳ್ಳವನಾಗಿ ರೋಮಾಂಚನದಿಂದ ಪೂರ್ಣಸಂತೋಷ ಸಂಭೃತನಾಗಬೇಕು.

ಈ ಪ್ರಕಾರ ಧ್ಯಾನಯೋಗದಿಂದ ಬಿಂಬದರ್ಶನವಾಗಲು ತಕ್ಷಣಿ ಸಂಚಿತಾಗಾಮಿ ಕರ್ಮನಾಶವಾಗಿ, ಪ್ರಾರಬ್ಧಕರ್ಮವಾದರೂ ಕಿಂಚಿತ್ ಅನುಭೋಗದಿಂದ ಉಪಮರ್ದನಮಾಡಿ ಅಪುನರಾವರ್ತಿಯಾದ ಮೋಕ್ಷ ವನ್ನು ಹೊಂದುತ್ತಾನೆ. ಹೀಗೆ ವಾಯುಪುರಾಣದಲ್ಲಿ ಹೇಳಿದೆ.

ಇದು ಯಾವಾಗಲೂ ಮಹಾಗೌಪ್ಯವಾಗಿಡತಕ್ಕದ್ದು. ಮಂದಬುದ್ಧಿ ಗಳಿಗೆ, ದುರ್ಮತಿಗಳಿಗೆ, ಪಿಶುನರಿಗೆ, ಶ್ರದ್ಧಾಹೀನರಿಗೆ ಸರ್ವಥಾ ಹೇಳ ಕೂಡದು. ಭಕ್ತಿಯುತನಾದ ಸತ್ಪುತ್ರನಿಗೆ, ಸಚ್ಛಿಷ್ಯನಿಗೆ ಚಿಂಜ್ಞಾನವುಳ್ಳ ಸ್ವರೂಪಿಗಳಿಗೆ ಉಪದೇಶಮಾಡುವದು.

ಇಂಥ ಉತ್ತಮವಾದ ಗೌಪ್ಯಸಾರಭೂತವಾದದ್ದು ಮನೋರಮವಾ ದದ್ದು; ಸರ್ವಶಾಸ್ತ್ರಸಾರಭೂತವಾದದ್ದು. ಸಕಲ ಶಾಸ್ತ್ರಗಳನ್ನು ಸಾಂಗ ವಾಗಿ ಅಧ್ಯಯನಮಾಡಿ, ಸಾರಭೂತವಾದ ಜ್ಞಾನ ಧ್ಯಾನಯೋಗವನ್ನು ನಿಶ್ಚಯವಾಗಿ ಕೈಕೊಳ್ಳಲು ಮೋಕ್ಷವಾಗುತ್ತದೆ. ಈ ಧ್ಯಾನಯೋಗವು ವಿಷ್ಣುವಿಗೆ ಪ್ರೀತಿಕರವಾದದ್ದು, ಮಂಗಳವಾದದ್ದು, ಶುಭಕರವಾದದ್ದು.

(ಇಲ್ಲಿ ಕೆಲವು ಸಂಸ್ಕೃತ ಶ್ಲೋಕಗಳು ಮೂಲ ಪ್ರತಿಯಲ್ಲಿ ಹರಿದಿವೆ.)

ಈ ಪ್ರಕಾರ ಮಾನಸೀಕ ಧ್ಯಾನಪೂಜಾ ವಿಧಿಯನ್ನು ವ್ಯಾಸರಾಯರ ಜಿಹ್ವಾದಿಂದ ಶ್ರೀನಾರಾಯಣನು, ತಾನೇ ಹೇಳಿಸಿದಂಥಾ ಕ್ರಮಾನುಸಾರ ವನ್ನು, ಆತ್ಮಜ್ಞಾನಿ ಗುರುಗಳಿಗೆ ಶರಣಾಗತನಾಗಿ, ಉಪದೇಶಕೊಂಡು ನಿರಂತರದಲ್ಲಿ ಅನುಷ್ಠಾನ ಮಾಡಲು ಅವನೇ ಜೀವನ್ಮುಕ್ತನೆನಿಸುತ್ತಾನೆ. ಶಾಶ್ವತ ಪದವಿ ಐದುತ್ತಾನೆ. (ಉತ್ತಮ ಮಧ್ಯಮಾಧಿಕಾರಿಗಳ ಸಾಧನ.)

ಅಧಮಾಧಿಕಾರಿಗಳಿಗೆ ಸಾಧಿಸದಿದ್ದರೆ ಉಪದೇಶಕ್ಕೆ ಪಾತ್ರನಾಗಿ ಆ ಉಪದೇಶವನ್ನು ಸಹಸ್ರವಾಗಲಿ ಅಥವಾ ಅಷ್ಟೋತ್ತರ ಶತವಾಗಲಿ, ಯಥಾ ಶಕ್ತಿ ಜಪಮಾಡಬೇಕು. ಉಪದೇಶವಿಲ್ಲದ ದೇಹ ದೀಪವಿಲ್ಲದ ಮನೆ ಯಂತೆ ತಿಳಿಯಬೇಕು. ಪ್ರಪಂಚಾಸಕ್ತರಿಗಾದರೂ ಉಪದೇಶ ಮುಖ್ಯ ಹೇಳುವದು, ಪರಲೋಕ ಸೌಖ್ಯಪ್ರದವಾಗಿ, ಇಹಲೋಕದಲ್ಲಿ ದೋಷ ರಹಿತರಾಗಿ, ಭಗವದನುಗ್ರಹಕ್ಕೆ ಪಾತ್ರರಾಗುವರು.

ಇತಿಶ್ರೀ ವ್ಯಾಸರಾಜ ಅನುಭವಕೃತ ಮಾನಸಪೂಜಾಸಾಧನ ಸಮಾಪ್ತ.

॥ ಶ್ರೀಗುರುಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ಶ್ರೀಹರಯೇನಮಃ ॥

॥ ಹರಿಃ ಓಂ ॥

ಶ್ರೀರಾಘವೇಂದ್ರ ಶ್ರೀವರದೇಂದ್ರ ಗುರುಭ್ಯೋನಮಃ

# ಶ್ರೀಮದ್ರಾಘವೇಂದತೀರ್ಥ ಗುರುವರ್ಯ ವಿರಚಿತ ಭಗವಧ್ಯಾನ ಪ್ರಕರಣಮ್ ॥ ೪

ಓಂ ರೇಚಕ ಪೂರಕ ಕುಂಭಕ ಕ್ರಮೇಣ ವಾಯುಧಾರಣಾನಂತರಂ, ಧ್ಯಾನಂ ಕುರ್ಯಾದಿತ್ಯುಕ್ತಂಭವತಿ । ಹೃದಯೇ ಅಧೋಮುಖಂ ಹೃತ್ಕಮಲಂ ಅಷ್ಟಪತ್ರಂ ಪ್ರಣವೇನೋರ್ಧ್ವಮುಖಂ ಕೃತ್ವಾ ತೇನೈವವಿಕಾಶ್ಯ ತತ್ಕರ್ಣಿಕಾಯಾಂ ಸೂರ್ಯಮಂಡಲಂ ತದುಪರಿ ಚಂದ್ರಮಂಡಲಂ ತದುಪರಿ ಅಗ್ನಿಮಂಡಲಂ ಧ್ಯಾತ್ವಾ ತಜ್ಜ್ವಾಲಾಯಾಂ ರಮಾರೂಪದಿವ್ಯರತ್ನ ಮಂಟಪಮಧ್ಯೇ ದಿವ್ಯ ರತ್ನ ಖಚಿತ ಸುವರ್ಣಮಯ ಪೀಠಂ ಧ್ಯಾತ್ವಾ ತತ್ರ ಪೀಠದೇವತಾಃ ಪರದೇವತಾದ್ಯಾಃ ಆವಾಹ್ಯಂ ಪಿಠೋಪರಿ ಷಟ್‌ಕೋಣ ಪದ್ಮ ಭೂಮಿಂ ಧ್ಯಾತ್ವಾ ಕೋಣೇಷು ದೇವಸ್ಯಾಗ್ರೇ ಅಗ್ನಿಂ, ದಕ್ಷಿಣೇ ಸೂರ್ಯಂ, ಸವ್ಯೆ ಚಂದ್ರಮಸಮ್, ದೇವಸ್ಯ ಸವ್ಯೇಶ್ರಿಯಂ, ದಕ್ಷಿಣೇಭುವಂ ಪೃಷ್ಠಭಾಗೇ ದುರ್ಗಾಂ ಧ್ಯಾತ್ವಾ ತತ್ರ ಷಟ್‌ಕೋಣ ಭೂಮೌ ಅಷ್ಟದಳ ಪದ್ಮ ರಮಾರೂಪಂ ಧ್ಯಾತ್ವಾ ತತ್ರ ಪದ್ಮದಳೇಸೂರ್ಯಂ, ಕೇಶರೇಷು ಸೋಮಂ, ಕರ್ಣಿಕಾಯಾಂ ಹುತಾಶನಂ ಧ್ಯಾತ್ವಾ ಪ್ರತ್ಯೇಕಂ ಪದ್ಮಾಷ್ಟ ದಳೇಷು ಮಧ್ಯೇ ಕರ್ಣಿಕಾಯಾಂಚ "ವಿಮಲೋತ್ಕರ್ಷಣೀಜ್ಞಾನಾ ಕ್ರಿಯಾ ಯೋಗಾ ತಥೈವಚ॥ ಪ್ರಹ್ವೀಸತ್ಯಾತಥೇಶಾನಾನುಗ್ರಹಾಶ್ಚೇತಿ ಶಕ್ತಯಃ॥" ಇತಿಪರಮಾತ್ಮಮೂರ್ತಿಧ್ಯಾತ್ವಾ ಕರ್ಣಿಕೋಪರಿ ತಮೋರಜಸತ್ವ ಮಿತಿ ಕ್ರಮೇಣ ತ್ರಿಗುಣಾಭಿಮಾನಿನೀಂ ಲಕ್ಷ್ಮೀಂ ತಲ್ಪಾಕಾರಂ ಛತ್ರಕಾರಂ ಫಣಂ ಶೇಷಂ ಧ್ಯಾತ್ವಾ ತದುಪರಿ ಗುಣತ್ರಯಾಭಿಮಾನಿನೀಂ ಚಿತ್ರಾಸನ ರೂಪಂ ಲಕ್ಷ್ಮೀಂ ಧ್ಯಾತ್ವಾ ತತ್ರ ಸ್ವರೂಪಹೃದಯೇ ಬಾಹ್ಯಾಂಗುಷ್ಟ ಪರಿ ಮಿತಂ ತತ್ಪೃಷ್ಠಭಾಗೇ ಹೃತ್ಕಮಲಮಧ್ಯ ವ್ಯಾಪಿನಿಂ ಪ್ರಾದೇಶಪರಿಮಿತಂ ತದಧಃ ಕರ್ಣಿಕಾಮೂಲೇ ಅಂಗುಷ್ಠಾಗ್ರ ಪ್ರಮಾಣಂಚ ಪರಮಾತ್ಮಾನಂ ನಾರಾಯಣನಾಮಮಯಂ ಇತ್ಯಾದ್ಯುಕ್ತ ಪ್ರಕಾರೇಣ ಲಕ್ಷ್ಮೀಧರಾಭ್ಯಾ ಮಿತ್ಯಾದಿ ತಂತ್ರಸಾರೋಕ್ತ ಆವರಣದೇವತಾಸಹಿತಂ ಉದ್ಯದಾದಿತ್ಯವರ್ಣ

ಮೇಘಶ್ಯಾಮಂವಾಧ್ಯಾಯೇತ್" ॥ ತದುಕ್ತಂ॥ "ಏಕಾಂತೇತು ಶುಚೌ ದೇಶೆ ಜನಸಮ್ಮರ್ದವರ್ಜಿತೇ ॥ ಕುಶಾಽಜಿನಾದ್ಯಾಸನಗಃ ಸ್ವಸ್ಥಚಿತ್ತಸ್ಥಿರಃ ಶುಚಿಃ ॥ ಸಮಂ ಕಾಯಶಿರೋಗ್ರೀವಂ ಧಾರಯನ್ನ ಚಲಂಮನಃ ॥ ಸಂಪ್ರೇಕ್ಷ್ಯನಾಶಿಕಾಗ್ರಂ ಸ್ವದಿಶಶ್ಚಾನವಲೋಕಯೇತ್ ॥ ಅಷ್ಟಪತ್ರಂ ತಧೃದಯೇ ಪದ್ಮಮಧ್ಯೇ ಸೂರ್ಯೇಂದುವನ್ಹಿಗಮ್ ॥ ಪೀಠ ತನ್ಮಧ್ಯ ಮಧ್ಯಸ್ಥಂ ನಾರಾಯಣನಾಮಮಯಂ ॥ ಉದ್ಯದಾದಿತ್ಯಸಂಕಾಶ ತೇಜಸಾ ನುಪಸಂಪದಾ ॥ ಸಹಸ್ರಾಮಿತ ಸೂರ್ಯಾಣಾಂ ಸರ್ವದಾನಂದರೂಪಿಣಂ॥ ಅತಿರಕ್ತತಲಂಭಾಸ್ವನ್ ಸ್ವವ್ರಾತವಿಭೂಷಿತಮ್ ॥ ವೃತ್ತಜಂಘಂ ವೃತ್ತ ಜಾನುಂ ಹಸ್ತಿ ಹಸ್ತೋರುಮಿಶ್ವರಂ ॥ ಮಹಾಕಟಿತಟನ್ನದ್ಧ ಕಾಂಚೀ ಪೀತಾಂಬರೋಜ್ವಲಮ್ ॥ ನಿಮ್ನನಾಭಿಂಚ ತ್ರಿವಳಿಂ ಸುವೃತ್ತೋದರ ಬಂಧನಮ್ ॥ ವಿಸ್ತಾರ ವಕ್ಷಸಂಭ್ರಾಜತ್ಕೌಸ್ತುಭಾ ಮುಕ್ತಕಂದರಮ್ ॥ ವನಮಾಲಾಧರಂಹಾರ ಭುಜಕೇಯೂರಭೂಷಿತಮ್ ॥ ಪೃಥುದೀರ್ಘಚತು ರ್ಬಾಹುಂ ಶಂಖಚಕ್ರಗದಾಂಬುಜಮ್ ॥ ರಕ್ತಮುನ್ನಿದ್ರಪದ್ಮಾಕ್ಷಂ ಸ್ಫುರನ್ಮಕರಕುಂಡಲಮ್ ॥ ಪೂರ್ಣಚಂದ್ರಾಯುತೋದ್ರಿಕ್ತ ಕಾಂತಿ ಸನ್ಮುಖಪಂಕಜಮ್ ॥ ಸುಭ್ರುವಂ ಸುಲಲಾಟಂತಂ ಕಿರೀಟಾಬದ್ಧ ಮೂರ್ಧಜಮ್ ॥ ನಿಃಶೇಷ ದುಃಖಶಯನಂ ನಿತ್ಯಾನಂದಂ ಶುಚಿಸ್ಮಿತಮ್॥ ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ॥ ಬ್ರಹ್ಮವಾಯು ಶಿವಾಹೀಶವಿಪ್ಯೈಃಶಕ್ರಾದಿಕೈರಪಿ ॥ ಸೇವ್ಯಮಾನೋಧಿಕಂಭಕ್ತ್ಯಾ ನಿತ್ಯ ನಿಃಶೇಷಶಕ್ತಿಮಾನ್ ॥

## ಅಥದ್ವಾತ್ರಿಂಶಲ್ಲಕ್ಷಣಾನಿಜ್ಞೇಯಾನಿ

ಭುಜ ನೇತ್ರ ಹಸ್ತ ಜಾನುನಾಶಿಕ ಪಂಚಪಂಚ ಸ್ಥಾನೇಷು ದೈರ್ಘ್ಯಾಣಿ ॥ ಪಾಣಿ ಪಾದ ನೇತ್ರಾಂತ ತಾಲು ಜಿಂಹ್ವಾಧರೋಷ್ಠ ನಖ ಸಪ್ತಸ್ಥಾನೇಷು ರಕ್ತಾನಿ ॥ ಕಕ್ಷ ಕುಕ್ಷಿ ವಕ್ಷೋಘ್ರಾಣ ಸ್ಕಂದಲಲಾಟೇಷು ಔನ್ನತ್ಯಂ ॥ ಲಲಾಟ ಕುಕ್ಷಿ ಚಕ್ಷುಷಿ ಪೃಥುತ್ವಂ ॥ ಗ್ರೀವ ಪ್ರತನು ಪೃಷ್ಠೆ ಜಂಘೇಷು ಲಘುತ್ವಂ ॥ ಸ್ವರ ರಸನಾನಾಭಿಃ ತ್ರಿಷು ಸ್ಥಾನೇಷು ಗಂಭೀರತ್ವಂ ಚಿಂತಯೇತ್ ॥ ತದುಕ್ತಂ "ಪಂಚದೀರ್ಘಾ ಪಂಚಸೂಕ್ಷ್ಮಃ ಸಪ್ತರಕ್ತ ಷಡು ನ್ನತಃ ॥ ತ್ರಿಪೃಥು ತ್ರಿಲಘು ತ್ರಿಗಂಭೀರಃ" ॥ ಏವಂದ್ವಾತ್ರಿಂಶನ್

ಲ್ಲಕ್ಷಣಾನಿಸತ್ (ಅತ್ರಲಘುಶಬ್ದೋಽಹ್ರಸ್ವಾನಿರ್ವಿಜ್ಞೇಯಃ) ತಥಾ ದಣಕ್ಷ ಕರೇ ಸಹಸ್ರಾರಂ ಚಕ್ರಂ ಅಷ್ಟಾಸ್ತ್ರಾ ಗದಾ ॥ ಶತಾವರ್ತಶಂಖಂ ಲಕ್ಷ ಣಂಜ್ಞೇಯಂ ॥ ವಾಮಕರೇ ಸಹಸ್ರದಳಂಪದ್ಮಂ ಚಕ್ರಲಕ್ಷಣೇನಜ್ಞೇಯಂ॥ ಪಾದತಲಯೋಃ ವಜ್ರಾಂಕುಶಧ್ವಜ ಪದ್ಮರೇಖಾಃಧ್ಯೇಯಾಃ ॥ ತಜ್ಜ್ಯೋಕ್ತಂ ॥

ಹೃದಯೇ ಧ್ಯೇಯ ಮೂರ್ತಯಸ್ತ್ರಿಸ್ರಃ ಸರ್ವೇಶೋ ಹೃದಯೇ ವ್ಯಾಪ್ತಃಪ್ರಾದೇಶ ಪುರುಷೋತ್ತಮಃ ॥ ಜೀವಾನಾಂ ಸ್ಥಾನಮುದ್ದಿಷ್ಟಂ ಸರ್ವದೈವಸನಾತನಃ ॥ ಹೃತ್ಕರ್ಣಿಕಾ ಮೂಲಗಃಸ್ವಾಂಗುಷ್ಠಾಗ್ರ ಪ್ರಮಾಣಕಃ ॥ ಮೂಲೇಶ ಇತಿನಾಮಾಸ್ಮಿನ್ ಸರ್ವೇಜಿವಾಃ ಪ್ರತಿಷ್ಠಿತಾಃ ಅಂಗುಷ್ಠಮಾತ್ರ ಪುರುಷೇ ಕರ್ಣಿಕಾಗ್ರಸ್ಥಿತೇಹರೌ ॥ ಪ್ರವಿಶಂತಿ ಸುಷುಪ್ತೌತು ಪ್ರಬುಧ್ಯಂತೇ ತತಃಪರಂ ॥ ಸೋಽಯಂಪುರುಷೋ ತ್ರಿರೂಪೋ ಭಗವಾನ್ ಹೃದಯಾಖ್ಯೆ ಪ್ರವರ್ತಿತಃ ॥

ಇದಂಚ ಯಾವತ್ಕಾಲಂ ಧ್ಯಾನವಶಾತ್ ಹೃದಯೇ ವಾಸನಾಮಯ ಮೂರ್ತಿಃ ಪ್ರತೀಯೇತ್ । ತಾವತ್ಕಾಲಂ ಧ್ಯಾನಾಭ್ಯಾಸಂ ಕುರ್ಯಾತ್ ವಾಸನಾಮಯ ಪ್ರತೀತ್ಯನಂತರಂ (ವಾಸನಾಮಯಮೂರ್ತಿ ಕಂಡಮೇಲೆ) ತಸ್ಯಾಂ ಪ್ರತಿಮಾಯಾಂ ವಾಸನಾಮಯಾಯಾಂ ಅನವದ್ಯೋದಕ (ಪರಿಶುದ್ಧೋದಕೇಸ್ನಾನಂ) ಗಂಧ ಪುಷ್ಪಾದಿಭಿಃ ಮನಸಾ ಸಂಕಲ್ಪಿತಾಂ ಪೂಜಾಂಕೃತ್ವಾ ತತ್ಪ್ರತಿಮಾಂತರ್ಗತವಿಷ್ಣೌ ಪೂರ್ಣನಿರ್ದೋಷ ಪೂರ್ಣಾನಂದಾತ್ಮಕಃ ಪೂರ್ಣಸ್ವಾಮಿಃ ಪೂರ್ಣಗುಣಃ ಇತಿ ಧ್ಯಾನಂ ಕುರ್ಯಾತ್॥

ಇದಂ ಚ ಧ್ಯಾನಂ ಯಾವತ್ ಸ್ವರೂಪಜ್ಞ ಗುರುದರ್ಶನಂ ತಾವತ್ಕುರ್ಯಾತ್ ಪಶ್ಚಾತ್ತಾದೃಶಗುರೂಕ್ತ ಪ್ರಕಾರೇಣ ಯಾವದಪರೋಕ್ಷಂ ಧ್ಯಾನಂ ಕುರ್ಯಾತ್ ॥

ಧ್ಯಾನಸಮಾಪ್ತ್ಯನಂತರಂ ಸಂಪುಟಾ ಕಾರೇಣ ಮಾತೃಕಾನ್ಯಾಸ ತತ್ವನ್ಯಾಸೌ ಕೃತ್ವಾ ಧ್ಯಾನಂ ಹರೌ ಸಮರ್ಪಯೇತ್॥

ಇತಿ ಶ್ರೀ ರಾಘವೇಂದ್ರಯತಿ ಕೃತ ಧ್ಯಾನ ಪ್ರಕರಣಂ ಸಂಪೂರ್ಣಂ ॥

ಶ್ರೀಗುರು ಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು

ಶ್ರೀಮಧ್ವೇಶಾಯಮಂಗಳಂ ಶ್ರೀಗುರುರಾಜೋವಿಜಯತೇ

## ಶ್ರೀ ವ್ಯಾಸತತ್ವಜ್ಞ (ಐಜಿ ಸ್ವಾಮಿಗಳವರು ರಚಿಸಿದ) ಕನ್ನಡ ಗದ್ಯರೂಪ

# ಮಾನಸಸ್ಮೃತಿ ೫

॥ ಹರಿಃ ಓಂ ಶ್ರೀಗುರುಭ್ಯೋನಮಃ ॥

ಶ್ರೀಹರಿಯಾದಂಥ ಶ್ರೀನಿವಾಸನ ಪಾದಗಳಿಗೆರಗಿ, ಗುರುಪರಂಪರೆಯಿಂದ ಎಲ್ಲ ಗುರುಗಳಿಗೆ ನಮಸ್ಕರಿಸಿ ಮಾನಸಿಕಧ್ಯಾನೋಪಾಸನೆಯ ವಿಧಿಯನ್ನು ಯಥಾಮತಿ ತಿಳಿದಷ್ಟು ಹೇಳುತ್ತೇವೆ ಶ್ರೀಶಪಾದಾಂಬುಜ ಆಸಕ್ತನಾಗಿ, ಹೃದಯದಲ್ಲಿ ಮನದಿ ಶ್ರೀಹರಿಯಪಾದ ಆಸಕ್ತನಾಗಿ ಮನಸಾ ಸ್ನಾನವನ್ನು ಮಾಡಬೇಕು. ತನ್ನ ದೇಹಾಂತರ್ಗತವಾದ ನಾಡಿಗಳು ಪಿಂಗಳ, ಇಡಾ, ಸುಷುಮ್ನವೆಂಬ ಮೂರು ನಾಡಿಗಳು. ಪಿಂಗಳಾನಾಡಿ ಯಮುನಾನದಿಯೆಂತ ಕರೆಸಿಕೊಳ್ಳುತ್ತದೆ. ಇಡಾನಾಡಿ ಗಂಗಾ–ಭಾಗೀರಥೀನದಿಯೆಂದು ಕರೆಸಿಕೊಳ್ಳುತ್ತದೆ. ಈ ಉಭಯ ನಾಡಿಗಳಿಗೆ ಅಂತಸ್ಥಿತವಾದ ಎಂದರೆ ಮೂಲಕಾರಣವಾದ ಸುಷುಮ್ನಾನಾಡಿ ಸರಸ್ವತಿನದಿಯೆಂತ ಕರಿಸುತ್ತದೆ.

ಇಂಥ ಸುಷುಮ್ನಾನಾಡಿ ಸ್ಥಿತವಾದ ಹೃತ್ಪದ್ಮನಿವಾಸಿಯಾದ ಶ್ರೀಹರಿ ಬಿಂಬನಾದ ಧ್ಯಾನವೆಂಬೋ (ಜಲ) ಉತ್ತಮ ತೀರ್ಥದಲ್ಲಿ ಮಾನಸಿಕ ಸ್ನಾನವನ್ನು ಮಾಡಬೇಕು. ಇಂಥ ಶ್ರೀಹರಿ ಧ್ಯಾನರೂಪವಾದ ತೀರ್ಥದಲ್ಲಿ ಗಂಗಾ, ಯಮುನಾ, ಸರಸ್ವತೀ ತ್ರಿವೇಣಿಯಲ್ಲಿ ಸ್ನಾನಮಾಡಿ, ಶುದ್ಧಾತ್ಮನಾಗಿ ಮನೋಮೈಲಿಗೆ ಕಳೆದು ಶುದ್ಧಮನಸ್ಕನಾಗಬೇಕೆಂದು ವಾಮನಪುರಾಣದಲ್ಲಿ ಹೇಳಿದೆ. ಹೀಗೆ ಶ್ರೀಹರಿಧ್ಯಾನ ಸಲಿಲದಲ್ಲಿ ಸ್ನಾನಮಾಚರಿಸಿ ಶುದ್ಧಮನಸ್ಕನಾಗಿ, ಶುದ್ಧಶುಚಿಯಾದ ಏಕಾಂತಸ್ಥಳದಲ್ಲಿ ಅತಿ ಉನ್ನತವಾಗದೆ, ಅತಿ ತಗ್ಗಾಗದೆ ಇದ್ದ ಸಮವಾದ ಸ್ಥಳದಿ ಚೈಲಾಜಿನ ಕುಶೋತ್ತರವಾದ, ಸಮವಾದ ಆಸನದಲ್ಲಿ ಕುಳಿತು ಏಕಾಗ್ರಚಿತ್ತನಾಗಬೇಕು. ಹೀಗೆ ಗೀತಾದಲ್ಲಿ ಹೇಳಿದೆ.

ಶುದ್ಧವಾದ ಸ್ಥಳ ಸಮಾನವಾದ ಆಸನದಲ್ಲಿ ಕುಳಿತು ಏಕಾಗ್ರಚಿತ್ತದಿಂದ, ಶ್ರೀಹರಿಯಾದ ಪರಮಾತ್ಮನ ಅದ್ಭುತವಾದ ಅಧಿಷ್ಠಾನವನ್ನು ತನ್ನ ದೇಹದಲ್ಲಿ ಚಿಂತಿಸಬೇಕು. ಈ ಪಂಚಭೂತಾತ್ಮಕವಾದ ಪೃಥಿವಿ, ಅಪ್ಪು, ತೇಜ, ವಾಯು, ಆಕಾಶ ಈ ಐದುಭೂತ ಪಂಚೀಕೃತಿಯಿಂದಿರುವ ಪಂಚಭೂತವಾದ ಸ್ಥೂಲದೇಹದಲ್ಲಿ ತ್ವಕ್, ಚರ್ಮ, ಮಾಂಸ, ರುಧಿರ, ಮೇದಸ್ಸು, ಮಜ್ಜಾ, ಅಸ್ಥಿ ಈ ಏಳು ಧಾತುಗಳು ಪಂಚಭೂತಾತ್ಮವೆಂದೇ ಚಿಂತಿಸಬೇಕು. ಮನಸ್ಸೇನೇ ಮೊದಲಾಗಿ ಸಕಲೇಂದ್ರಿಯಗಳು ತತ್ವಾತ್ಮಕವೆಂದು ಕರೆಸುತ್ತವೆ ಕ್ರಮಾತ್ ಸಪ್ತಧಾತುಗಳಲ್ಲಿ ಕ್ರಮವಾಗಿ ತತ್ವ ಚರ್ಮ ಮಾಂಸ ನಡುವೆ, ಅನ್ನಮಯ, ಕೋಶ, ಮಾಂಸರುಧಿರದಲ್ಲಿ ಪ್ರಾಣಮಯ ಕೋಶ, ರುಧಿರಮೇದಸ್ಸಿನಲ್ಲಿ ಮನೋಮಯ, ಮೇದಸ್ಸು ಮಜ್ಜಾನಡುವೆ ವಿಜ್ಞಾನಮಯ, ಮಜ್ಜಾ ಅಸ್ಥಿ ನಡುವೆ ಆನಂದಮಯಕೋಶ ಹೀಗೆ ಐದು ಕೋಶಗಳಿವೆ. ಅವುಗಳಲ್ಲಿ ಅನಿರುದ್ಧಾದಿ ಪಂಚರೂಪಗಳು ಚಿಂತಿಸಬೇಕು. ಐತರೇಯದಲ್ಲಿ ಹೇಳಿದೆ. ಸಪ್ತದಾತುಗಳ ಒಳಗ, ಅನ್ನಮಯ ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯರೂಪಗಳು, ಗುಣತ್ರಯವಾದ ಅವ್ಯಕ್ತ ತತ್ವದಲ್ಲಿ ಆನಂದಮಯರೂಪ, ಮಹತ್ತತ್ವದಲ್ಲಿ ವಿಜ್ಞಾನಮಯರೂಪ ಚಿಂತಿಸಬೇಕು. ಅಹಂಕಾರ ತತ್ವದಲ್ಲಿ ಮನೋಮಯರೂಪ. ಆಕಾಶ, ವಾಯು, ತೇಜಸ್ಸು, ಈ ಮೂರುಗಳಲ್ಲಿ ಪ್ರಾಣಮಯರೂಪ. ಅಪ್ಪು ಪೃಥಿವಿ ಈ ಎರಡರಲ್ಲಿ ಅನ್ನಮಯರೂಪ, ಈ ಪ್ರಕಾರ ಐದು ಕೋಶಗಳು ಇದ್ದಂಥಾವು. ಆ ಕೋಶಗಳಲ್ಲಿ ಇದ್ದಂಥಾ ಚಕ್ಷುರ್ಮಯ, ಶ್ರೋತ್ರಮಯ, ವಾಙ್ಮಯ ಈ ಮೂರು ರಮಾಪತಿರೂಪಗಳು. ಆ ಕೋಶಗಳಿಗೆ ವ್ಯಾಪ್ತವಾದಂಥವು ಚಿಂತಿಸಬೇಕು. ಈ ರೂಪಗಳು ತೈತರೇಯದಲ್ಲಿ ಹೇಳಿದೆ. ಜ್ಞಾನಸ್ವರೂಪನಾದಕಾರಣ, ವಿಜ್ಞಾನಮಯ ಎಂತ ಕರೆಸಿಕೊಂಡ. ಸರ್ವವನ್ನೂ ತಿಳಿಯೋಸ್ವರೂಪವಾದಕಾರಣ ಮನೋಮಯ. ಬಲಪೂರ್ಣ ಸ್ವರೂಪಜ್ಞಾನಕಾರಣ ಶ್ರೋತ್ರಮಯ. ಸರ್ವಾಧಾರಕನಾದಕಾರಣ ಸುಗಂಧರೂಪನಾದಕಾರಣ ಪೃಥಿವಿಮಯ. ಸರ್ವರಿಗೆ ತೃಪ್ತಿಕರನಾದಕಾರಣ ಅಮ್ಮಯ. ಸರ್ವಕ್ರಿಯಕನಾದಕಾರಣ ವಾಯುಮಯ, ಅವಕಾಶಪ್ರದನಾದಕಾರಣ ಆಕಾಶಮಯ, ಪೂರ್ಣತೇ

ಜೋಮಯನಾದಕಾರಣ ತೇಜೋಮಯ, ಸೃಷ್ಟ್ಯಾದಿ ಇಚ್ಛಾಕರ್ತೃನಾದ ಕಾರಣ ಕಾಮಮಯ, ಸರ್ವದುಷ್ಟನಾಶಕನಾದಕಾರಣ ಕ್ರೋಧಮಯ, ಸುಖಸಾಧನವಾದ ಧರ್ಮರೂಪನಾದಕಾರಣ ಧರ್ಮಮಯನೆಂತ ದೇವರಿಗೆ ನಾಮಗಳು, ಬೃಹದಾರಣ್ಯದಲ್ಲಿ ಆರನೇ ಅಧ್ಯಾಯದಲ್ಲಿ ಹೇಳಿದೆ

ಸಪ್ತದಾತುಗಳ ಮೇಲೆ ಕವಚದೋಪಾದೇಲಿ, ಪಾದ ಆರಂಭಿಸಿ ಶಿರಸ್ಸಿನ ಪರಿಯಂತರ ವಾಸುದೇವಾಖ್ಯರೂಪವನ್ನು ಚಿಂತಿಸಬೇಕು ಈ ಪ್ರಕಾರ ಶಿರಸ್ಸು ಆರಂಭಿಸಿ ಪಾದಪರಿಯಂತರ, ನಾರಾಯಣರೂಪ ಚಿಂತಿಸಬೇಕು. ಬ್ರಹದಾರಣ್ಯಕದಲ್ಲಿ ಐತರೇಯದಲ್ಲಿ ಹೇಳಿದೆ.

ಈ ದೇಹದಲ್ಲಿ ಮೂರುವರಿಕೋಟಿ ರೋಮಕೂಪಗಳು ಉಳ್ಳಂಥಾವು ಅವುಗಳಲ್ಲಿ ವ್ಯಾಪ್ತವಾಗಿದ್ದಂಥಾ ಹಿಂ ಕಾರನಾದಂಥ ಪ್ರದ್ಯುಮ್ನರೂಪ ಚಿಂತಿಸಬೇಕು. ಛಾಂದೋಗ್ಯದಲ್ಲಿ ಹೇಳಿದೆ ಆ ರೋಮಕೂಪಗಳಲ್ಲಿ ಮೂರುವರಿಕೋಟಿ ತೀರ್ಥಗಳು ಅವೆ. ಆ ತೀರ್ಥಗಳಲ್ಲಿ ತನ್ನಿಯಾಮಕ ಭಗವದ್ರೂಪಗಳು ಮೂರುವರಿಕೋಟಿರೂಪ ಚಿಂತಿಸಬೇಕು.

## ಸಪ್ತಧಾತುಗಳಲ್ಲಿದ್ದ ಭಗವದ್ರೂಪಗಳ ವಿವರ

ತ್ವಕ್ಕಿನಲ್ಲಿ ಅನಿರುದ್ಧ ಪ್ರಸ್ತಾವನಾಮಕ ಮತ್ತು ಲಾವಣ್ಯಪ್ರದ ರಾಮರೂಪವು, ಚರ್ಮದಲ್ಲಿ ಉದ್ಗೀಥನಾಮಕ ಪ್ರದ್ಯುಮ್ನ ಮತ್ತು ಮಹಾವ್ರಣನಿವಾರಕವಾದಂಥ ಲಕ್ಷ್ಮೀಪತಿ ಎಂಬೋರೂಪ, ಮಾಂಸದಲ್ಲಿ ಪ್ರತಿ ಹಾರಾಖ್ಯ ಸಂಕರುಷಣ ಮತ್ತು ವರರೂಪಿಯಾದಂಥಾ ವಿಷ್ಣು ಪುಷ್ಟಿ ಅಭಿವೃದ್ಧಿಪ್ರದನಾಗಿ ಇದ್ದಾನೆಯಂತ ತಿಳಿಯಬೇಕು. ರುಧಿರದಲ್ಲಿ ಉಪದ್ರವನಾಮಕ ವಾಸುದೇವರೂಪ ಮತ್ತು ಶರೀರಕ ಬಲವಾದಂಥ 'ಶಾಂತಸಂವಿತ್' ಎಂಬೋರೂಪ, ಮೇದಸ್ಸಿನಲ್ಲಿ 'ನಿಧನನಾಮಕ ನಾರಾಯಣರೂಪ' ಅಲ್ಲೇವೇ ಐಶ್ವರ್ಯಾದಿ ಗುಣಪ್ರದನಾದಂಥ ಷಡ್ಗುಣನಾಮಕನಾದಂಥ ವಿಷ್ಣುರೂಪವು. ಮಜ್ಜಾದಲ್ಲಿ ವಷಟ್‌ಕಾರ ನಾಮಕರೂಪ, ಅಲ್ಲೇವೆ ಸಾರಾತ್ಮಎಂಬೋರೂಪ, ಮದವನ್ನು ಹುಟ್ಟಿಸುತ್ತಾನೆ ಎಂಬೋ ಕಾರಣ ಮಜ್ಜಾಯೆಂತ ಹೆಸರುಳ್ಳಂಥಾತನು. ಮತ್ತು ಮುನ್ನೂರಾ ಅರವತ್ತು ಭಗವದ್ರೂಪಗಳು ಚಿಂತಿಸಲಿಕ್ಕೆ ಯೋಗ್ಯವಾದಂಥಾವು. ಆ ರೂಪ

ಗಳು ಮುನ್ನೂರಾಅರವತ್ತು ದಿವಸ ಸಂಧಿಕಾಲಗಳಿಗೆ ದೇವತೆಗಳು ಆದಂಥಾವು. ಆ ಮಜ್ಜಾ ಏಂದ ರೇತಸ್ಸು ಹುಟ್ಟುತ್ತದೆ. ಆ ರೇತಸ್ಸಿನಲ್ಲಿ ಪ್ರಾಣನು ಇರುತ್ತಾನೆ ಆ ಪ್ರಾಣನಲ್ಲಿ ಶ್ರೀ ನಾರಾಯಣನು ಇರುತ್ತಾನೆ. ಆದಕಾರಣ ಆ ರೇತಸ್ಸ ಗರ್ಭತ್ವವನ್ನು ಐದುತ್ತದೆ ಅಸ್ಥಿಗಳಲ್ಲಿ ಆದಿಶಬ್ದ ವಾಚ್ಯವಾದಂಥ ಹಂಸರೂಪ. ಆ ಮುನ್ನೂರಾಅರವತ್ತು ಅಸ್ಥಿಗಳಲ್ಲಿ ಆಶ್ಚರ್ಯಕ ಕಾರಣವಾದಂಥ ಅಸ್ಥಿಶಬ್ದವಾಚ್ಯವಾದಂಥ ವ್ಯಾಪ್ತವಾದಂಥಾ ರೂಪಗಳು, ಮುನ್ನೂರಾಅರವತ್ತು ರೂಪಗಳು ರಾತ್ರಿಗಳಿಗೆ ದೇವತೆಗಳಾದಂಥಾವು ಎಂತ ಚಿಂತಿಸಬೇಕು.

ಪಾದಹಸ್ತಾಂಗುಲಿಗಳಲ್ಲಿ ಏಸುವರ್ಪಗಳವೋ ಆ ಪರ್ವ (ಸಂಧಿ) ಗಳಲ್ಲಿ ಪರ್ವಶಬ್ದವಾಚ್ಯವಾದಂಥಾ ರೂಪಗಳು ಚನ್ನಾಗಿ ತಿಳಿಯಬೇಕು. ಆ ಪರ್ವಗಳಲ್ಲಿ ಮುನ್ನೂರಾಅರವತ್ತು ಭಗವದ್ರೂಪಗಳು (ದಿನ) ಅಹಸ್ಸಿಗೆ ದೇವತೆಗಳಾದಂಥವು. ಪೂರ್ವೋಕ್ತ ಪ್ರಕಾರ ಸಾವಿರದಾಎಂಭತ್ತು ಭಗವದ್ರೂಪಗಳನ್ನು ದಾವಾತ ತಿಳಿಯುತ್ತಾನೋ ಆತನಿಗೆ ನಿತ್ಯದಲ್ಲಿ ಆಯುಷ್ಯಾಭಿವೃದ್ಧಿ ಆಗೋಅಂಥಾವು, ಹೀಗೆ ಐತರೇಯದಲ್ಲಿ ಹೇಳಿದೆ.

ದೇಹದಲ್ಲಿ ತತ್ವಾಭಿಮಾನಿ ದೇವತೆಗಳು ಒಂಭತ್ತುಕೋಟಿ ಮಂದಿ, ಆ ದೇವತೆಗಳು ಭಗವಂತನ ಆಜ್ಞಾದಿಂದ ಆ ಆ ತತ್ವಗಳಲ್ಲಿ ಬೋಧಕರಾಗಿ ಯಿರುಧಾರ. ಆ ತತ್ವಾಭಿಮಾನಿ ದೇವತೆಗಳವೊಳಗೆ ಮುಖ್ಯರಾದಂಥಾವರು ಇಪ್ಪತ್ತುನಾಲ್ಕುಮಂದಿ. ಅವರಲ್ಲಿ ನಿಯಾಮಕರಾದಂಥ, ಕೇಶವಾದಿ ಇಪ್ಪತ್ತುನಾಲ್ಕು ಭಗವನ್ಮೂರ್ತಿಗಳು, ಇವುಗಳ ವಿವರ ತಂತ್ರಸಾರದಲ್ಲಿ ಐತರೇಯದಲ್ಲಿ ಹೇಳಿದೆ. ತತ್ವಾಭಿಮಾನಿಯಾದಂಥ ಅಹಂಕಾರಿಕ ಪ್ರಾಣನಲ್ಲಿ ಅನಿರುದ್ಧನ್ನ ಚಿಂತಿಸಬೇಕು.

ಅಜನಾಮಕ ಅಂತನಾಮಕ ಎರಡು ಭಗವದ್ರೂಪಗಳು. ಶಿರಸ್ಸಿನಲ್ಲಿ ಆನಂದಮೂರ್ತಿ ಮುಖದಲ್ಲಿ ಶ್ರೋತ್ರಾಭಿಮಾನಿಗಳಾದಂಥಾ ದಿಗ್ದೇವತೆಗಳು ಚಂದ್ರನೇವೆ ಮೊದಲಾದವರು, ಆ ಚಂದ್ರನಲ್ಲಿ ಬೃಹತ್ಪಾಂಡುವಾಸ ಸೋಮರಾಜಾ ಎಂಬ ಭಗವದ್ರೂಪ ಚಿಂತಿಸಬೇಕು, ಹೀಗೆ ಐತರೇಯದಲ್ಲಿ ಹೇಳಿದೆ. ತನ್ನ ಹೃದಯದಲ್ಲಿದ್ದ ಭಗವದ್ರೂಪಕ್ಕ, ತನ್ನಲ್ಲಿ ವಿಶೇಷ ಸಂಬಂಧವನ್ನು ಜ್ಞಾನಾರ್ಥವಾಗಿ, ಪನಾರ್ಥವಾಗಿ, ಬೃಹತ್ಪಾಂಡುವಾಸಯೆಂತ

ಅಂದರು; ಯೆಂತ ಬೃಹದಾರಣ್ಯದಲ್ಲಿ ಹೇಳಿದೆ. ಹೀಗೆ ಶ್ರೋತ್ರೇಂದ್ರಿಯ ದಲ್ಲಿ ಧನ್ವಂತರೀ ಹಯಗ್ರೀವ ಚಿಂತಾಮಣಿ ಅಜಾದಿಗಳು ಹಂಸಮೂರ್ತಿ ಯನ್ನು ಚಿಂತಿಸಬೇಕು. ಈ ಎರಡೂ ಕರಣಗಳಲ್ಲಿ ಉಗ್ರ ಊರ್ಜ ಹೀಗೆ ಹಯಗ್ರೀವನು ದಿಕ್ಕುಗಳಲ್ಲಿ ನಿಯಾಮಕನಾದಂಥಾತ ವಿದಿಂಜ ಓಂ ನಿಯಾ ಮಕವಾದಂಥ, ವ್ಯಾಪ್ತನಾದಂಥ ಪ್ರದ್ಯುಮ್ನರೂಪ ಬ್ರಾಹ್ಮಣನ ಬಲದ ಕಿವಿಯಲ್ಲಿ, ಭಾಗೀರಥ್ಯಾದಿ ಸಮಸ್ತ ತೀರ್ಥಗಳು ಇವೆ ಅಂಥಾವು, ಆ ಕಾರ ಣದಿಂದ, ಸ್ವಕರ್ಣ ಸ್ಪರುಶದಿಂದ ಶುಚಿ ಹೀಗೆ ಪರಾಶರ ಹೇಳಿದ್ದಾನೆ. ವಿಷ್ಣುರಹಸ್ಯವೆಂಬೋ ಗ್ರಂಥದಲ್ಲಿ ಉತ್ತಮರಿಗೆ ತಾನು ಪ್ರೇರಣಾ ಮಾಡೋಣ, ತಾನು ನೀಚರಿಂದ ಪ್ರೇರಿತನಾಗೋಣಾ, ಇಂಥಾವುಗಳು ಮಾಡಿದರೆ ತನ್ನ ಬಲದಕಿವಿ ಮುಟ್ಟಬೇಕು ಈ ತಪ್ಪು ಮಾಡಿದರೆ ಜಲ ಸ್ಪರುಶ ಮಾಡಬೇಕು ಎಂತ ಹೇಳಿದೆ. ಪದ್ಮ ಪುರಾಣದಲ್ಲಿ ಸೀನೋಣ, ಅಪಾನವಾಯು ಬಿಡೋಣ, ಉಗುಳು ಸಿಡಿಯೋಣ, ಹಿರೇರ ಸಂಗಡ ಸುಳ್ಳು ಆಡೋಣ, ಅನುಷ್ಠಾನ ಕಾಲದಲ್ಲಿ ಅಯೋಗ್ಯರ ಸಂಗಡ ಮಾತನಾಡೋಣ ಇದಿಷ್ಟು ಮಾಡಿದರೆ ಬಲಕಿವಿ ಮುಟ್ಟಬೇಕುಯೆಂತ ಹೇಳಿದೆ

ಎರಡೂ ನೇತ್ರಗಳಲ್ಲಿ ಇಂದ್ರ ಈಶರೂಪಗಳು, ಚಕ್ಷುರಿಂದ್ರಿಯಕ್ಕೆ ಸೂರ್ಯ ಅಭಿಮಾನಿ, ಸೂರ್ಯನಲ್ಲಿ ಅತಿಷ್ಠಾಖ್ಯ ನಾರಾಯಣ, ಮೂರ್ಧ್ನಿ ರಾಜಾ, ವಾಜೀಸೀವಸು, ಅಜಾದಿಗಳು ಕಪಿಲ-ಉನ್ನಾಮಕ ಇವೆ ಮೊದ ಲಾದಂಥ ನಿಯಾಮಕ ರೂಪಗಳು. ಹೀಗೆ ತೈತರೇಯದಲ್ಲಿ ಐತರೇಯದಲ್ಲಿ ಹೇಳಿದೆ. ಬಲಗಣ್ಣಿನಲ್ಲಿ ಸ್ತಂಭದೋಪಾದೇಲಿ ಭಗವದ್ರೂಪ ಚಿಂತಿಸ ಬೇಕು. ಅಲ್ಲಿ ರಜ್ಜುವೋಪಾದೇಲಿ ರಮಾರೂಪ, ಅದಕ ಬದ್ಧವಾದಂಥ ಕರುವಿನೋಪಾದೇಲಿ ವಾಯುರೂಪ, ಎರಡೂ ನೇತ್ರಗಳಲ್ಲಿ ಇಷ್ಟಂಥಾ ರಕ್ತ ಗೆರೆಯಲ್ಲಿ ಗೌತಮನಾಮಕ ರುದ್ರನು, ಬಿಳಿಗೆರೆಯಲ್ಲಿ ವಶಿಷ್ಠನಾಮಕ ಇಂದ್ರ, ಕೃಷ್ಣತಾರಾದಲ್ಲಿ ಜಮದಗ್ನಿ ನಾಮಕವಹ್ನಿ, ಕೊನಿಕಣ್ಣುಗಳಲ್ಲಿ (ಕನೀನಿಕಾ) ವಿಶ್ವಾಮಿತ್ರನಾಮಕ ಸೂರ್ಯ, ಕನೀನಿಕಾ ಎಂದ ಕೃಷ್ಣ ತಾರಾದಲ್ಲಿ ಆಡೋಅಂಥಾವು. ಕಣ್ಣಿನ ಉದಕದಲ್ಲಿ ಭಾರದ್ವಾಜನಾಮಕ ವರುಣ, ಕೆಳಗಿನ ರೆಪ್ಪೆಯಲ್ಲಿ ಕಶ್ಯಪನಾಮಕಳಾದಂಥ ಪೃಥ್ವಿ. ಮೇಲಿನ ರೆಪ್ಪೆಯಲ್ಲಿ ದ್ಯುನಾಮಕಳಾದಂಥ ಭಾರತೀದೇವಿ; ಹೀಗೆ ಏಳುಮಂದಿ ದೇವ

ತಿಗಳು, ಕ್ಷೀಣರಹಿತವಾದಂಥ ಮನಸ್ಸಿನಿಂದ ಭಗವಂತನನ್ನು ಉಪಾಸನಾ ಮಾಡುತ್ತಾರೆ. ಪ್ರಮಾಣ ಬ್ರಹದಾರಣ್ಯಕದಲ್ಲಿ ಹೇಳಿದೆ.

## ಇನ್ನು ಅವಸ್ಥಾತ್ರಯ ವಿಚಾರ

ದಕ್ಷಣಾಕ್ಷಿಯಲ್ಲಿ ವಿಶ್ವನಾಮಕ ಅನಿರುದ್ಧನು, ಆತಗ ಎರಡು ಪಾದ ಐದುಹಸ್ತ, ಆಸಿನೆಗೊಂಡಿಲ್ಲೋಸಾವಿಯಲಿ ಮಧ್ಯದಲ್ಲಿ ಇದ್ದಷ್ಟು. ಆತಗೆ ಹತ್ತೊಂಭತ್ತು ಮುಖ; ಆ ಮುಖಗಳ ಮಧ್ಯದಲ್ಲಿ ಗಜಮುಖ ಒಂದು. ಉಭಯ ಪಾರ್ಶ್ವಗಳಲ್ಲಿ ಹದಿನೆಂಟು, ಅಂತೂಕೂಡಿ ಹತ್ತೊಂಭತ್ತು ಮುಖ. ಹೀಗೆ ಮಾಂಡೂಕದಲ್ಲಿ ಹೇಳಿದೆ. ಇಂಥಾ ಅದ್ಭುತವಾದಂಥ ವಿಶ್ವನ ರೂಪವು ಅಷ್ಟದಿಕ್ಪಾಲಕರಿಂದ ಸೇವಿತವಾದಂಥಾದ್ದು. ಈತನೇವೆ ಅಶೇಷ ಜೀವರಿಗೆ ಜಾಗ್ರತಾವಸ್ಥಿ ಪ್ರೇರಕನಾದಂಥಾತನು ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ.

ತರುವಾಯ ಕಂಠದಲ್ಲಿ ಉದಾನನಾಮಕ ವಾಯುನಿಂದ ಸೇವಿತನಾದಂಥಾ ತೈಜಸನಾಮಕ ಪ್ರದ್ಯುಮ್ನ, ಆತನು ವಿಶ್ವನೋಪಾದಿ ಮುಖ ಹಸ್ತಾದಿಗಳಿಂದ ಯುಕ್ತನಾದಂಥಾತನು. ಆ ತೈಜಸನೇವೆ ಸರ್ವಜೀವರಿಗೆ ಸ್ವಪ್ನಾವಸ್ಥಿ ಪ್ರೇರಕನಾದಂಥಾತನು. ಮಾಂಡುಕದಲ್ಲಿ ಹೇಳಿದೆ.

ಹೃತ್ಪದ್ಮಕರ್ಣಿಕಾಗ್ರದಲ್ಲಿ ಅಗ್ರೇಶನಾಮಕ ಸಂಕರುಷಣನು. ಪ್ರಾಜ್ಞನೆಯಂತ ಚಿಂತಿಸಬೇಕು. ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ. ಈ ಪ್ರಾಜ್ಞನೇ ಸುಷುಪ್ತ್ಯವಸ್ಥಿಯಲ್ಲಿ ಪ್ರೇರಕನಾದಂಥಾತನನ್ನು ಚಿಂತಿಸಬೇಕು. ವಿಶ್ವನು ಜಾಗ್ರತಾವಸ್ಥಿಯಲ್ಲಿ ಇಷ್ಟಂಥಾ ಪದಾರ್ಥಗಳನ್ನು ತೈಜಸನು ಸ್ವಪ್ನದಲ್ಲಿರುವ ಪದಾರ್ಥಗಳನ್ನು ತೋರಸಧಾನೆ. ಪ್ರಾಜ್ಞನು ಸುಷುಪ್ತಿಯಲ್ಲಿ ಸುಖವನ್ನು ಕೊಡುತ್ತಾನೆ. ಹೀಗೆ ಸ್ವಪ್ನಾವಸ್ಥಾದಲ್ಲಿ ಪದಾರ್ಥಗಳನ್ನು ಸೃಜಿಸಿ, ಪರನು ಸಮರ್ಥನಾದ ಸ್ವಾಮಿ ತಾನು ಸ್ವೀಕಾರ ಮಾಡುಥಾನೆ. ಅವಸ್ಥಾತ್ರಯಗಳು ಕ್ರಮಾತ್ ತಿಳಿಯಲಿಕ್ಕೆ ಯೋಗ್ಯವಾದಂಥಾವು. ವಿಶ್ವನು ಜೀವನ ವಿಶೇಷವಾದ ಪ್ರಕಾಶವನ್ನು ತೆಗೆದುಕೊಂಡು ಕಂಠದೇಶ ಕುರಿತು ಬಂದು, ಯಾವಾಗ ತೈಜಸನಿಂದ ಸಂಸೃಷ್ಟನಾಗ ತಾನೋ ಆ ಕಾಲದಲ್ಲಿ ತೈಜನು ಸಾಕ್ಷಾತ್ಕಾರವಾಗಿ ವಾಸನಾಮಯ

ಪದಾರ್ಥಗಳನ್ನು ಸೃಜಿಸಿ, ಜೀವನಗೋಸ್ಕರ ತೋರಸಥಾನೆ ಅದು ಸ್ವಪ್ನಾವಸ್ಥೆಯಂತ ಕರೆಸಿಕೊಳತದೆ. ತರುವಾಯ ಆ ತೈಜಸನು, ಕಂಠದ ದಶೆಯಿಂದ ವಿಶ್ವನಿಂದ ಕೂಡಿ, ಲೀಲೆಯಿಂದ ಜೀವನ ಪ್ರಕಾಶವನ್ನು ತೆಗದುಕೊಂಡು, ಹೃತ್ಪದ್ಮಕ್ಕೆ ಬಂದು ಪ್ರಾಜ್ಞನಿಂದಾ ಆಲಿಂಗಿತನಾಗುತಾನೆ. ಆ ಕಾಲದಲ್ಲಿ ಹೃತ್ಪದ್ಮಲ್ಲಿದ್ದಂಥಾ ಪ್ರಾಣನು ಜೀವನನ್ನು ನುಂಗಿ, ರಮಾದೇವರನ್ನ ಪ್ರವೇಶಮಾಡಥಾನೆ. ಆ ರಮಾದೇವಿಯು ಪ್ರಾಣನ್ನ ಉದರದಲ್ಲಿಟ್ಟುಕೊಂಡು, ಪ್ರಾಜ್ಞನಾಮಕ ಭಗವಂತನ ಆಲಿಂಗನ ಮಾಡುತಾಳೆ. ಆ ಪ್ರಾಜ್ಞನು ಆಗ ಜೀವನಸ್ವರೂಪ ಭೂತಸುಖವು ಎತ್ಕಿಂಚತ್ ಬಿಂದುಮಾತ್ರ ಯೋಗ್ಯಜೀವರಿಗೆ ತೋರಸಥಾನೆ ತಮೋಯೋಗ್ಯರಾದಂಥಾ ಜೀವರಿಗೆ ಅನಿತ್ಯವಾದಂಥ ಸುಖವು ಸೃಜಿಸಿ ಕೊಡಥಾನೆ. ಈ ಪ್ರಕಾರ ಸುಷುಪ್ತ್ಯಾವಸ್ಥೆಯಲ್ಲಿ ಜೀವರು ಹೊರಗಿನ ಸ್ಥಿತಿ ವೊಳಗಿನ ಸ್ಥಿತಿ ವಂದೂ ತಿಳಿಯುವಂಥಾವನಾಗೋದಿಲ್ಲ. ಆ ಕಾಲದಲ್ಲಿ ಪರಮಾತ್ಮನು, ಸ್ವಪ್ನ ಪದಾರ್ಥಗಳು ನಿರ್ಮಾಣಮಾಡುವಂಥವನಾಗುತ್ತಾನೆ. ಆತನೇ ಸುಪ್ತಿ ಜೀವರ ಹೃದಯ ಇದ್ದಂಥಾತನು ಆತನು ತಾನೈಶ್ವರ್ಯ ಕೊಡತಾನಾದ್ದರಿಂದ ಭೂತಿಯೆಂತ ಕರಿಸಿಕೋತಾನೆ. ಈ ಪ್ರಕಾರ ಯೋಗ್ಯ ಜೀವನು ಸುಪ್ತನಾಗಿರಲಾಗಿ, ವಾಯುದೇವರು 'ಭೂ,ಯೆಂದು ಶ್ವಾಸರೂಪದಿಂದ, ಭೂತಿ ಶಬ್ದ ವಾಚ್ಯನಾದಂಥ, ಭಗವಂತನನ್ನು ನಿರಂತರ ಕೊಂಡಾಡುತಾನೆ. ದುರ್ಜೀವನಲ್ಲಿ ವಾಯುವ್ಯಾದಿಗಳು, ಅಭೂಯೆಂತೆಂದು ಅಭೂತಿ ಶಬ್ದ ವಾಚ್ಯನಾದಂಥ ಭಗವಂತನನ್ನು. ಕೊಂಡಾಡತಾರೆ ಭೂ ಶಬ್ದ ಭೂತಿ ವಾಚಕವಾದಂಥಾದ್ದು. ದಾವಪುರುಷನು ಭೂತಿ ಶಬ್ದ ವಾಚ್ಯನಾದ ಭಗವಂತನನ್ನು ತಿಳಿಯುತ್ತಾನೋ, ಆತನು ಶೀಘ್ರ್ರದಿಂದ ಐಶ್ವರ್ಯವನ್ನು ಐದುತಾನೆ

ಪುನಃ ವಿಶ್ವನು ಜೀವನಪ್ರಕಾಶದಿಂದ ಯುಕ್ತನಾಗಿ ತೈಜಸನಿಂದ ಕೂಡಿ ಕಂಠದಿಂದ ಕುರಿತು ಬರಲಿಕ್ಕಾಗಿ ಅಲ್ಲಿ ಪುನಃ ಸ್ವಪ್ನವಾಗುತ್ತದೆ. ಆ ವಿಶ್ವನು ತೈಜಸನ ಬಿಟ್ಟು ನೇತ್ರವನ್ನು ಕುರಿತು ಬರಲಿಕ್ಕಾಗಿ ಜಾಗ್ರತಾವಸ್ಥೆಯಾಗತದೆ. ಈ ಪ್ರಕಾರ ಸಮೀಚಿನವಾಗಿ ಅವಸ್ಥಾತ್ರಯವು ತಿಳಿಯಲಿಕ್ಕೆ ತಕ್ಕದ್ದು ಹೀಗೆ ಗ್ರಂಥಾಂತರಗಳಲ್ಲಿ ಮಾಂಡುಕ ಮೊದಲಾದ ಉಪನಿಷತ್ತುಗಳಲ್ಲಿ ಹೇಳಿದೆ.

ತುರ್ಯಾಖ್ಯ (ನಾಮಕ) ವಾಸುದೇವನು ಶಿರಸ್ಸಿನ ಮೇಲಭಾಗದಲ್ಲಿ ಇದ್ದಂಥಾತನೆಂದು ಹೀಗೆ ಚಿಂತಿಸಬೇಕು. ಮಾಂಡೂಕದಲ್ಲಿ ಹೇಳಿದೆ

ಬ್ರಹ್ಮರಂಧ್ರದಲ್ಲಿ ಇದ್ದ ಬ್ರಹ್ಮನಾಡಿಯಲ್ಲಿ, ನಾರಾಯಣ ಇಹೋ ಅಂಥಾತಯಂತ ಚಿಂತಿಸಬೇಕು. ಹೀಗೆ ಐತರೇಯದಲ್ಲಿ ಹೇಳಿದೆ. ವಾಸುದೇವಕ ನಾಮಕ ವಿಷ್ಣು, ಸೂರ್ಯ ಮಂಡದಲ್ಲಿ ಇಹೋ ಅಂಥಾತನು ಆತನೇವೆ ಪುರುಷರ ಆಯುಷ್ಯವನ್ನು ತೆಗೆದುಕೊಳತಾನೆ. ಎಂಬೋ ಕಾರಣದಿ ಆದಿತ್ಯಾಯಂತ ಕರಿಸಿಕೊಳತಾನೆ. ಆ ವಾಸುದೇವನೇವೆ ಮನುಷ್ಯರ ದಕ್ಷಣಾಕ್ಷಿಯಲ್ಲಿ ಇದ್ದಂಥಾತನು. ಆ ವಾಸುದೇವನು ಚಕ್ಷು ಮಂಡಲದಶಿಯಿಂದ, ದಾವಾಗೆ ಹೊರಡಥಾನೋ ಆಗ ಜೀವನು ರಶ್ಮಿರಹಿತವಾದಂಥ ಸೂರ್ಯ ಮಂಡಲವನ್ನು ಕಾಣಥಾನೆ. ಆದಕಾರಣ ಪುರುಷ ಸಪ್ತ ರಾತ್ರಿಯಿಂದ ಅಧಿಕವಾಗಿ ಬದುಕುವದಿಲ್ಲ ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ. ಚಕ್ಷುಸ್ಸಿನಲ್ಲಿ ವೊಳಗಿದ್ದ, ವಾಮನ ನಾಮಕ ಭಗವಂತನು ದಾವ ಕಾರಣ ದೆಸೆಯಿಂದ ಸಂಗರಹಿತನಾಗಿದ್ದಾನೋ, ಆ ಕಾರಣ ವಸ್ತುಗಳಿಂದ ಅಸಂಗನಾದ್ಧಾನೆ ಎಂಬೋ ಕಾರಣ ವಾಮನಾಯೆಂತ ಕರೆಸಿಕೊಳತಾನೆ. ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ.

ಸ್ವರ್ಗವೈದ್ಯರಾದಂಥಾ ಅಶ್ವಿನೀದೇವತೆಗಳು ನಾಸಾಭಿಮಾನಿಗಳು. ಅವರಲ್ಲಿ ಸರ್ವವ್ಯಾಧಿನಿವಾರಕವಾದಂಥಾ ಧನ್ವಂತರೀರೂಪ ಚಿಂತಿಸಬೇಕು. ಋತುಂಭರ ಋಥಾ ಎರಡು ರೂಪಗಳು ನಾಶಿಕಾಪುಟದಲ್ಲಿ ಇದ್ದಂಥಾವರು. ನಾಶಿಕಾಗ್ರದಲ್ಲಿ ಸೂರ್ಯಲೋಕವಿದೆ. ಅಲ್ಲಿ ಸೂರ್ಯನೇವೆ ಅಭಿಮಾನಿ ದೇವತಿ, ಆ ಸೂರ್ಯನಲ್ಲಿ ಸೂರ್ಯಾಂತರ್ಗನಾದ ವಿಷ್ಣುನು 'ಇರಾಮಯಾ'ಯೆಂತ ಕರಸಿಕೊಳತಾನೆ. ಈನುಸಾರಿ ಆದಂಥ ಸುಖವು ಇರಾ ಎಂತ ಕರಸಿಕೊಳತದೆ. ಹೀಗೆ ತಿಳಿದಂಥಾವನು ಪರಮಾತ್ಮನ ಲೋಕವನ್ನು ಐದುಥಾನೆ. ಹೀಗೆ ಐತರೇಯದಲ್ಲಿ ಹೇಳಿದೆ. ಊರ್ಧ್ವಶ್ವಾಸದಲ್ಲಿ ಭಾರತೀದೇವಿಯನ್ನು ಚಿಂತಿಸಬೇಕು. ಅಧಃಶ್ವಾಸದಲ್ಲಿ ಮುಖ್ಯ ಪ್ರಾಣನ್ನ ಚಿಂತಿಸಬೇಕು. ದಕ್ಷಣಶ್ವಾಸದಲ್ಲಿ ಸೂರ್ಯನು, ವಾಮಶ್ವಾಸದಲ್ಲಿ ಚಂದನನ್ನು ಚಿಂತಿಸಬೇಕು. ಈ ಶ್ವಾಸವು ಹಂಸದೇವತಾಕವಾದಂಥಾದ್ದು. ಪ್ರಾಣನಲ್ಲಿ ಪರಮಾತ್ಮನು 'ಹಂಸಾ'ಯೆಂತ ಕರೆಸಿಕೊಳತಾನೆ. ಆ ಕಾರಣ

ರೇಚಕಪೂರಕ ಕುಂಭಕಗಳಿಂದ ಮಾಡಿದ ಪ್ರಾಣಾಯಾಮವು ಪಾಪಪರಿಹಾ ರಕವಾದಂಥಾವು. ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ. ಲ್ರು ಲ್ರೂ ಶ ಜ ಎರಡೂ ರೂಪಗಳು ಗಂಡಸ್ಥಳಗಳಲ್ಲಿ ಏಕಾತ್ಮ ಐರಸ ಎರಡೂ ರೂಪಗಳು ತುಟಿಗಳಲ್ಲಿ ಚಿಂತಿಸಬೇಕು. ಓಜೋಭೃತ ಔರಸ ಈ ಎರಡೂ ರೂಪಗಳು ದಂತಪಂಕ್ತಿಗಳಲ್ಲಿ ಚಿಂತಿಸಬೇಕು.

ಜಿಂಹದಲ್ಲಿ ವರುಣ ಅಲ್ಲಿ ಮಚ್ಛರೂಪನಿಯಾಮಕಯಂತ ಚಿಂತಿಸ ಬೇಕು.

ವಾಗೇಂದ್ರಿಯಾಭಿಮಾನಿ ವಹ್ನಿ ಆತನಲ್ಲಿ ವೃಷಾ ಸಹಿನಾಮಕರೂಪ ನಿಯಾಮಕ, ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ. ಹಾಗೇ ರಾತ್ರೀಸೂಕ್ತಕ್ಕೆ ಅಧಿದೇವತಿ ನಾರಾಯಣೀರೂಪ ಚಿಂತಿಸಬೇಕು

ವಾಚಿಯಲ್ಲಿ ಅರ್ಥಗರ್ಭನಾಮಕರೂಪ, ವಾಕ್ಯಗಳಲ್ಲಿ ಸರಸ್ವತೀ ಅಭಿಮಾನಿ ಎಂತ ಬ್ರಹದಾರಣ್ಯದಲ್ಲಿ ಹೇಳಿದೆ. ಸರಸ್ವತಿಯಲ್ಲಿ ವಾಗೀ ಶ್ವರನಾಮಕ ಭಗವದ್ರೂಪ, ನಿಯಾಮಕರೂಪ ಚಿಂತಿಸಬೇಕು. ಆತಗೆ ಫಲಿಕುಲಿಯೆಂತ ಹೆಸರುಗಳುಂಟು. ವಾಕ್ಯಗಳಲ್ಲಿ ಇವರಲ್ಲದೇ ಹಯಗ್ರೀವ ನಾಮಕವಾದಂಥ ಸಾಕ್ಷಾತ್ ಸ್ತ್ರೀರೂಪ, ಈ ಸ್ತ್ರೀರೂಪವನ್ನು ದಾರು ಉಪಾಸನಾಮಾಡುತ್ತಾರೋ ಅವರಿಗೆ ಜ್ಞಾನಪ್ರಾಪ್ತಿಯಾಗುತ್ತದೆ. ಹೀಗೆ ಐತರೇಯ ಮತ್ತು ಛಾಂದೋಗ್ಯದಲ್ಲಿ ಹೇಳಿದೆ.

ಎರಡೂ ಹಸ್ತಗಳಿಗೆ ದಕ್ಷಪ್ರಜೇಶ್ವರನು ಅಭಿಮಾನಿ. ಆತನಲ್ಲಿ ಮಧು ಸೂದನನಾಮಕ ಭಗವದ್ರೂಪ, ಹಸ್ತಸಂಧಿಗಳಲ್ಲಿ ಕಪಿಲಾದಿ ಐದುರೂಪಗಳ ಚಿಂತಿಸಬೇಕು. ಐದುರೂಪಗಳು ಮಾತೃಕಾವರಣದೇವತೆಗಳು. ಅಂಗು ಷ್ಟಮೂಲ ಪ್ರದೇಶದಲ್ಲಿ ಬ್ರಹ್ಮತೀರ್ಥಯೆಂತ ಕರೆಸಿಕೊಳತದೆ. ಕನಿಷ್ಟಕಾ ಮೂಲಪ್ರದೇಶದಲ್ಲಿ ಪ್ರಜಾಪತಿನಾಮಕ ಋಷಿತೀರ್ಥವು. ತರ್ಜನೀ ಮೂಲದೇಶದಲ್ಲಿ ಪೈತೃಕ ತೀರ್ಥವು; ನಾಲ್ಕು ಅಂಗುಲಿ ಅಗ್ರಭಾಗದಲ್ಲಿ ದೇವತೀರ್ಥವು; ಕರಮಧ್ಯದಲ್ಲಿ ಅಗ್ನಿತೀರ್ಥವು. ಈ ಪ್ರಕಾರ ಪಂಚತೀರ್ಥವು ತಿಳಿದು, ಆ ತೀರ್ಥ ತೀರ್ಥಾಭಿಮಾನಿಗಳ ದ್ವಾರಾಮಾಡಿದ ಕರ್ಮವು ಅಕ್ಷ ಯುವಾಗೋದು. ಹೀಗೆ ಮಾರ್ಕಾಂಡೇಯ ಪುರಾಣದಲ್ಲಿ ಹೇಳಿದೆ.

ವಾಮಹಸ್ತದಲ್ಲಿ ಶ್ರೀಧರನಾಮಕ ಭಗವದ್ರೂಪ ಹಸ್ತಸಂಧಿಗಳಲ್ಲಿ ಚಾರ್ವಾಂಗಾದಿ ಐದುರೂಪಗಳು.

ಬೊಜ್ಜೆಯಲ್ಲಿ ಮನುನಾಮಕರೂಪ ಚಿಂತಿಸಬೇಕು. ಪರಾಯಂಬೋ ರೂಪ ದಕ್ಷಣಪಾರ್ಶ್ವದಲ್ಲಿ, ವಾಮಪಾರ್ಶ್ವದಲ್ಲಿ ಫಲೀಯಂಬೋರೂಪ ಚಿಂತಿಸಬೇಕು. ಯಜ್ಞನಾಮಕ ಹೃದಯಲ್ಲಿ ಬಲಿನಾಮಕ ಪೃಷ್ಠದಲ್ಲಿ, ಕಟಿ ದೇಶದಲ್ಲಿ ಅನಿರುದ್ಧನಾಮಕರೂಪ ಚಿಂತಿಸಬೇಕು. ಗುಹ್ಯದಲ್ಲಿ ಸಪ್ಪಿಯಂ ಭುವಂನು ಅಭಿಮಾನಿ ಅಲ್ಲಿ' 'ಭಗ'ವನ್ನಾಮಕ ಭಗವದ್ರೂಪ ಚಿಂತಿಸಬೇಕು. ಆ ಭಗವನ್ನಾಮಕ ಪ್ರಜಾಪತಿಯೆಂತ ಕರಿಸಿಕೋತಾನೆ. ರೇತಸ್ಸಿನಲ್ಲಿ ಸೂರ್ಯ ಅಭಿಮಾನಿ ಅಲ್ಲಿ ಆದಿತ್ಯನಾಮಕ ಭಗವದ್ರೂಪ ಚಿಂತಿಸಬೇಕು. ಪೂಮಾತ್ಮಕವಾದಂಥಾ ರೇತಸ್ಸಿನಲ್ಲಿ ಪುನ್ನಾಮಕ ಭಗವದ್ರೂಪ ಆದಕಾರಣವಾಗಿ, ಪತ್ನಿಯು ಆ ಶುಕ್ಲನ ಗರ್ಭದ ದಶೆಯಿಂದ ಅಸಹ್ಯಬಡಬಾರದು ಇದೇ ಪ್ರಕಾರ ಸ್ತ್ರೀಲೋಹಿತದಲ್ಲಿ ಅಗ್ನಿದೇವರು ಅಭಿಮಾನಿ, ಆತನಲ್ಲಿ ಅಗ್ನಿನಾಮಕ ಭಗವದ್ರೂಪ ಚಿಂತಿಸಬೇಕು. ಸ್ತ್ರೀಲೋಹಿತದ ಸ್ತ್ರೀರೂಪವು, ಅಂಥ ಸ್ತ್ರೀಲೋಹಿತ ದಶೆಯಿಂದ ಪುರುಷ ಅಹಸ್ಯಬಡಬಾರದು. ಪುರುಷ ಸಂಯೋಗದಿಂದ ಪಿತೃನಲ್ಲಿ ಇದ್ದಂಥಾ ಭಗವಂತನು ಪುತ್ರತ್ವವನ್ನು ಐದುತ್ತಾನೆ. ಅಂಶಾಂಶಿ ಇಚ್ಛೇ ಇತ್ತೇ ಪುತ್ರವನ್ನು ಐದುತಾನೆ. ಅಂಶಾಂಶಿತ್ವ ಇಲ್ಲದೇ ಹೋದರೆ ಸಂತತಿ ಐದೋದಿಲ್ಲ. ಹೀಗೆ ಐತರೇಯದಲ್ಲಿ ಹೇಳಿದೆ.

ಮಿತ್ರನಾಮಕ ಸೂರ್ಯ ಅಪಾನನಾಮಕ ವಾಯು ಇವರಿಬ್ಬರು, ವಾಯುನಲ್ಲಿ ಇದ್ದಂಥಾವರು. ಅವರಲ್ಲಿ ಪ್ರದ್ಯುಮ್ನನಾಮಕ ಭಗವಂತನನ್ನು ಚಿಂತಿಸಬೇಕು.

ದಕ್ಷಿಣ (ತೊಡಿ) ಕಾಲು ಸಂಧಿಗಳಲ್ಲಿ, ಟಂಕ್ಯಾದಿ ಐದು ಭಗವದ್ರೂಪಗಳು. ವಾಮ (ತೊಡಿ) ಕಾಲು ಸಂಧಿಗಳಲ್ಲಿ ತಾರಾದಿ ಐದು ಭಗವದ್ರೂಪಗಳು, ಎರಡೂ ಪಾದಗಳಲ್ಲಿ ಜಯಂತನು ಅಭಿಮಾನಿ ಆತನಲ್ಲಿ ಯಜ್ಞನಾಮಕ ನಾರಾಯಣ ನಿಯಾಮಕರೂಪ ಚಿಂತಿಸಬೇಕು.

ದಕ್ಷಿಣ ಪಾದಾಂಗುಷ್ಠದಲ್ಲಿ ವಾಯುದೇವರ ಅಧಿಷ್ಠಾನದಲ್ಲಿ, ದೇಹ ಧಾರಣತ್ವದಿಂದ ನಾರಾಯಣನು ತೀರ್ಥರೂಪನಾಗಿ ಇದ್ದಾನೆಯಂತ ಚಿಂತಿಸಬೇಕು. ಅಲ್ಲಿ ಸಮಸ್ತವಾದಂಥ ತೀರ್ಥಗಳು, ಭಗವಂತನ ಆಜ್ಞದಿಂದ ಅವೆ. ಆದಕಾರಣವಾಗಿ ವಿಪ್ರಪಾದಪ್ರಕ್ಷಾಲನೋದಕವು ಅತ್ಯಂತ ಪಾವನವಾದಂಥವು

ವಾಕ್, ಪ್ರಾಣ, ಪ್ರಕ್ (ನೇತ್ರ) ಶ್ರೋತ್ರ ಮನೋಹೃದಯ ಈ ಅರುಸ್ಥಾನದಲ್ಲಿ ಆಕಾಶಃಖ್ಯ ರಮಾರೂಪ ಚಿಂತಿಸಬೇಕು. ಪ್ರಾಜ್ಞ, ಪ್ರಿಯ, ಸತ್ಯ, ಆನಂದ, ಅನಂತಾ, ಸ್ಥಿತೀ ಈ ಆರು ವಿಷ್ಣುರೂಪಗಳನ್ನು ಕ್ರಮಾತ್ ಚಿಂತಿಸಬೇಕು. ಈ ರೂಪಗಳನ್ನು ದಾವ ಜ್ಞಾನಿಯು ತಿಳಿಯುತ್ತಾನೋ ಅವನು ಅರಿಷಡ್ವರ್ಗಗಳಿಂದ ಜೈಸುತ್ತಾನೆ ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ.

ಹೃದಯಾಕಾಶದಲ್ಲಿ ವ್ಯಾಪ್ತವಾದಂಥ, ಪುರುಷಾಖ್ಯವಾದಂಥ ಅನಿರುದ್ಧನನ್ನು ಚಿಂತಿಸಬೇಕು. ಈತನೇ ಇಂದ್ರಯೋನಿಯಂತ ಕರೆಸಿಕೊಳಥಾನೆ. ಶಿರಸ್ಸಿನಾ ಅಂತ್ಯಭಾಗದಲ್ಲಿ 'ವೀತಿ' ಎಂಬೋ ಸಂಕರುಷಣ ನಾಮಕ, ಶಿರಸ್ಸಿನಫಾಲ ಊರ್ಧ್ವಭಾಗದಲ್ಲಿ 'ವ್ಯಯಃ' ನಾಮಕ ವಾಸುದೇವನು ಇರತಾನೆ. ಹೃದಯಾಂತದಲ್ಲಿ ಇದ್ದಂಥಾ ವಿಷ್ಣುನು ವಾಮನಾ ಯೆಂತ ಕರೆಸಿಕೊಳ್ಳುತ್ತಾನೆ. ವಾಮನನಾಮಕ ವಿಷ್ಣು ಪ್ರಾಣಾಪಾನಾದಿಗಳಿಗೆ ಚೇಷ್ಟಕನಾಗಿ ಸಮಸ್ತ ದೇವತೆಗಳಿಂದ ಉಪಾಸ್ಯನಾಗಿರುತ್ತಾನೆ ಹೀಗೆ ತೈತರೇಯದಲ್ಲಿ ಹೇಳಿದೆ.

ತತ್ವಾಭಿಮಾನಿ ದೇವತೆಗಳಲ್ಲಿ ಪ್ರಾಣಪಂಚಾಶನ್ ಭಗವದ್ರೂಪಗಳು ತಂತ್ರಸಾರ ಮೂರನೇ ಅಧ್ಯಾಯದಲ್ಲಿ ಹೇಳಿದೆ.

ಹೃತ್ಪದ್ಮದಲ್ಲಿ ಇಷ್ಟಂಥಾ ಉಪಾಸ್ಯನಾದಂಥ, ವೇದಪ್ರತಿಪಾದ್ಯನಾದಂಥ ಗಾಯತ್ರೀ ಶಬ್ದವಾಚ್ಯ ಭಗವದ್ರೂಪ, ಆ ಗಾಯತ್ರಿ ಅಂತ್ಯದಲ್ಲಿ ಇದ್ದ ಕಾರಣ, ಗಾಯತ್ರಿಯೆಂತ ಕರಿಸಿಕೊಳ್ಳುತ್ತಾನೆ. ದಾವ ಕಾರಣದಶೆಯಿಂದ ಗಾನಮಾಡೋ ಅಂಥಾ ವರಗಳನ್ನು, ರಕ್ಷಿಸುತ್ತಾನೆ ಎಂಬೋ ಕಾರಣ, ಗಾಯಿತ್ರಿ ಶಬ್ದವಾಚ್ಯನಾಗಿ ಇದ್ದಾನೆ. ಆ ಗಾಯಿತ್ರಿ ಎಂಬೋ ವಿಷ್ಣುಃ ಸಪ್ರಾಣಾ ಯೆಂತ ಕರಸಿಕೊಳತಾನೆ.

೧. ಆತನು ಪ್ರಾಣಾಗ್ನಿಯಲ್ಲಿದ್ದ ಪ್ರಾಣನಾಮಕ ಸೂರ್ಯನಾದ ದ್ವಾರಪಾಲಕರಿಂದ ಉಪಾಸ್ಯನು ಮುಖದಲ್ಲಿದ್ದಂಥಾ ಆಹವನೀಯಾಗ್ನಿಯಲ್ಲಿ ಹೃದಯದಲ್ಲಿದ್ದಂಥಾ ಪ್ರಾಣನು ಹೋತೃ, ಪ್ರಾಣಾಗ್ನಿಯಲ್ಲಿದ್ದಂಥಾ ಪ್ರಾಣನಾಮಕಸೂರ್ಯನು. ಪೂರ್ವದ್ವಾರಪಾಲಕ, ಪ್ರಾಣಾದಿಗಳ ಅಧಿಷ್ಠಾನ ತಿಳಿದು ಕ್ರಮದಿಂದ ಆಹುತಿಗಳಕೊಡೋಣದರಿಂದ ಪ್ರಾಣನಾಮಕನೆದಂಥ ಅನಿರುದ್ಧಾತ್ಮಕ ವೈಶ್ವಾನರ ಭಗವಂತನು ತೃಪ್ತಿ ಐದುತ್ತಾನೆ. ೨. ನಾಭಿಯಲ್ಲಿದ್ದ ದಕ್ಷಣಾಗ್ನಿಯಲ್ಲಿದ್ದ ದಕ್ಷಣಾಗ್ನಿಯಲ್ಲಿ, ಸರ್ವ ಶರೀರ ಗತನಾದಂಥ ವ್ಯಾನನಾಮಕವಾಯು, ಋತ್ವಿಕ ಅಗ್ನ್ಯಂತರ್ಗತ ಪರಮಾತ್ಮಗೆ, ವ್ಯಾನನಾಮಕಚಂದ್ರ, ದಕ್ಷಣದ್ವಾರಪಾಲಕ, ವ್ಯಾನನಾಮಕಚಂದ್ರನ ಅಧಿಷ್ಠಾನ ತಿಳಿದು, ಕ್ರಮದಿಂದ ಆಹುತಿಕೊಡೋಣ ಇದರಿಂದ ವ್ಯಾನನಾಮಕನಾದಂಥ ಪ್ರದ್ಯುಮ್ನಾತ್ಮಕ ವೈಶ್ವಾನರನು ತೃಪ್ತಿಯಾಗುತ್ತಾನೆ. ೩. ಹೃದಯದಲ್ಲಿದ್ದಂಥಾ ಗಾರ್ಹಸ್ಪತ್ಯಾಗ್ನಿಯಲ್ಲಿ ಅಪಾನನಾಮಕವಾಯು ಉದ್ಗಾತೃ, ಅಪಾನಾಗ್ನಿ ಅಂತರ್ಗತನಾದಂಥ ಪರಮಾತ್ಮಗೆ, ಪಶ್ಚಿಮ ದ್ವಾರ ಪಾಲಕನಾದ ಅಪಾನಾಗ್ನಿ ಆತನ ದ್ವಾರದಿಂದ ಆಹುತಿ ಕೊಡೋಣದ್ದರಿಂದ ಅಪಾನನಾಮಕನಾದಂಥ ಸಂಕರುಷಣಾತ್ಮಕ ವೈಶ್ವಾನರ ತೃಪ್ತನಾಗುತ್ತಾನೆ. ೪. ನಾಭಿಯ ಉತ್ತರಭಾಗದಲ್ಲಿ ಇದ್ದಂಥಾ ಅವಸಭ್ಯಾಗ್ನಿಯಲ್ಲಿ ಸಮಾನ ವಾಯುನು ಎಜಮಾನನು. ಸಮಾಗ್ನಿಗತನಾದಂಥಾ ಪರಮಾತ್ಮಗೆ ಸಮಾನ ನಾಮಕ ವರುಣನು, ಉತ್ತರದ್ವಾರಪಾಲಕನು ಸಮಾನಾಗ್ನಿ ದ್ವಾರದಿಂದ ಆಹುತಿಕೊಡೋಣದರಿಂದ, ಸಮಾನನಾಮಕ ವಾಸುದೇವಾತ್ಮಕ ವೈಶ್ವಾನರ ತೃಪ್ತನಾಗುತ್ತಾನೆ. ೫. ನಾಭಿ ದಕ್ಷಣ ಭಾಗದಲ್ಲಿ ಇದ್ದಂಥಾ ಸಭ್ಯಾಗ್ನಿಯಲ್ಲಿ, ಕಂಠಗತನಾದಂಥ ಉದಾನನಾಮಕ ವಾಯುನೇ ಅಧ್ವರ್ಯನು. ಆಕಾಶನಾಮಿಕಳಾದ ರಮಾದೇವಿಯಿಂದ, ಆವಿಷ್ಟನಾದಂಥ ಉದಾನ ವಾಯು, ಊರ್ಧ್ವಶ್ವಾಸಉಳ್ಳಾತನು. ಆ ಉದಾನವಾಯು ಅಧಿಷ್ಠಾನ ಕ್ರಮದಿಂದ, ಆಹುತಿ ಕೊಡೋಣದರ ದಶೆಯಿಂದ, ಉದಾನಾಖ್ಯ ನಾರಾಯಣಾತ್ಮಕ, ವೈಶ್ವಾನರ ತೃಪ್ತನಾಗುತ್ತಾನೆ. ಪಂಚಪ್ರಾಣಾತ್ಮಕನಾದಂಥಾ ವಾಯು ಯಜ್ಞದಲ್ಲಿ ಇದ್ದಂಥಾತನು. ಆದಕಾರಣ ವಾಯುದೇವರು ಯಜ್ಞನಾಮಕಾ ಎಂತ ಕರೆಸಿಕೊಳತಾನೆ. ಆ ಯಜ್ಞನಾಮಕ ವಾಯು

ನೇವೆ ಅಗ್ನಿ ಅಂತರ್ಗತನಾದಂಥ ವೈಶ್ವಾನರನಾಮಕ ಪರಮಾತ್ಮನ ಯಾಗ ಮಾಡಥಾನೆ. ಆದಕಾರಣ ಆ ಜೀವನಿಂದ ಕೊಡಲ್ಪಟ್ಟಂಥಾ ಉತ್ತಮ ವಾದಂಥ ಅನ್ನವನ್ನು ಪಂಚಪ್ರಾಣಾದಿಗಳಿಂದ ಯುಕ್ತನಾದಂಥಾ ಪರ ಮಾತ್ಮನು ಪಚನಮಾಡುತ್ತಾನೆ. ಈತನು ಶುಭಸಾರವನ್ನು ಸ್ವೀಕರಿಸು ತ್ತಾನೆ ಅಶುಭರಸವನ್ನು ಸ್ವೀಕರಿಸುವದಿಲ್ಲ. ಹೀಗೆ ಐತರೇಯದಲ್ಲಿ ಹೇಳಿದೆ.

ಪೂರ್ವೋಕ್ತ ಪ್ರಕಾರದಿಂದ ಪ್ರಾಣಾಗ್ನಿಹೋತ್ರ ಮಾಡುವದರಿಂದ ವೈಶ್ವಾನರನಾಮಕ ಭಗವಂತನು ತೃಪ್ತನಾಗುತ್ತಾನೆ ಹಾಗೆ ದ್ವಾರಪಾಲಕ ದೇವತೆಗಳು ತೃಪ್ತರಾಗುತ್ತಾರೆ. ಇಂಥ ಪ್ರಾಣಾಗ್ನಿ ವಿಧಿಯನ್ನು ಸಾಧಕ ಮಾಡೋ ಅಂಥ ಪುರುಷನು ನಾಶರಹಿತವಾದಂಥ ಪದವನ್ನು ಐದುಥಾನೆ. ಕೆಲವರು ಪ್ರಾಣಾಗ್ನಿಖಂಡೋಕ್ತ ಪ್ರಕಾರದಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಹೀಗೆ ಕ್ರಮದಿಂದ ಅವಸ್ಥಾಭೇದವನ್ನು ಅಂಗಿಕರಿಸಿ, ಪ್ರಾಣಪಂಚವನ್ನು ಹೋಮಿಸುತ್ತಾರೆ. ಜಠರಾಗ್ನಿಯಲ್ಲಿದ್ದಂಥ ಅಗ್ನಿನಾ ಮಕ ಪರಮಾತ್ಮನ್ನ ವಾಯುದೇವರು ಸರ್ವದಾ, ಅವಿಚ್ಛಿನ್ನವಾಗಿ ಘೋಷ ರೂಪದಿಂದ ಸ್ತೋತ್ರಮಾಡುತ್ತಾರೆ. ಇದಕ್ಕೆ ದೃಷ್ಟಾಂತ ಏನುಯೆಂದರೆ, ಎರಡು ಕಿವಿಯಲ್ಲಿ ಬೆರಳು ಇಟ್ಟರೆ, ಸರ್ವರಿಗೆ ಪರಮಮಂಗಳಕರವಾದಂಥ ಶಬ್ದವನ್ನು ಅದ್ಯಾಪಿ ಕೇಳಥಾರೆ. ಇಂಥ ಘೋಷರೂಪವಾದಂಥ ಪರಮ ಮಂಗಳಕರವಾದ ಸ್ತುತಿಯು ದಾವಪ್ರಾಣಿಯಿಂದ ಕೇಳಲ್ಪಡುವದಿಲ್ಲ. ಆ ಪ್ರಾಣಿಯು ದೇಹದದಶಿಯಿಂದ ಶೀಘ್ರದಿಂದ ಉತ್ಕ್ರಮಣವನ್ನು ಐದು ತಾನೆ. ದಾವಾತನು ಈ ಪ್ರಕಾರದಿಂದ ತಿಳಿಯುತ್ತಾನೆಯೋ, ಭಗವಂತನು ಆತನಿಂದ ಸ್ತುತ್ಯನಾಗತಾನೆ. ಪಂಚಾಗ್ನಿ ವಿಷಯದಲ್ಲಿ ಛಾಂದೋಗ್ಯದಲ್ಲಿ ಭಗವದ್ಗೀತೆಯಲ್ಲಿ ಹೇಳದೆ.

## ದೇಹಾಖ್ಯರಥ ಪ್ರಕರಣವು

ದಿವ್ಯವಾದಂಥಾ ವೈಷ್ಣವ ದೇಹಾಖ್ಯರಥವು ಪರಮಾತ್ಮಗೆ ಆಶ್ರಯ ವಾದವು. ಸೂರ್ಯನು ಸೂರ್ಯನ ಪತ್ನಿ ಸಂಜ್ಞಾ ಇವರಿಬ್ಬರೂ, ವಾಜಿ ರೂಪದಿಂದ ಚಕ್ಷುರ್ದ್ವಯಗಳಲ್ಲಿ ಆಶ್ರಿತರಾಗಿ ಇದ್ದಂಥಾವರು. ಆದೇ ಪ್ರಕಾರ ಚಂದ್ರನು, ಚಂದ್ರಪತ್ನಿ ರೋಹಿಣಿ ಇವರಿಬ್ಬರು ಹಯಾಕಾರರಾಗಿ,

ಹೊತ್ತಂಥವರು ಎರಡು ಕರಣಗಳಲ್ಲಿ ಈ ಪ್ರಕಾರ ನಾಲ್ವರು ರಥವನ್ನು ವಹಿಸಿದ್ದಾರೆ. ಆ ಅಶ್ವಗಳಿಗೆ ಬದ್ಧವಾದಂಥ ವಾಚಿಸ್ಥಿತವಾದಂಥ ಉಮಾ ದೇವಿಯು ರಜ್ಜುರೂಪಗಳಾಗಿ ಇದ್ದಾಳೆ ಮನಸ್ಥಿತನಾದಂಥ ಉಮಾ ಪತಿಯು ಆ ರಥಕ್ಕೆ ಸಾರಥಿಯಾಗಿದ್ದಾನೆ ಆ ರಥದಲ್ಲಿ ಮುಖ್ಯ ಪ್ರಾಣ ದೇವರು ಇದ್ದಾರೆ ಆ ಮುಖ್ಯ ಪ್ರಾಣನಲ್ಲಿ ಉತ್ಕೃಷ್ಟನಾದಂಥ, ಜ್ಞಾನ ರೂಪದದಕೆಯಿಂದ ಪ್ರಾಣನಾಮಕ ಭಗವಂತನು ಅಶ್ವ (ರಥಿಕ) ಶಬ್ದ ವಾಚ್ಯನಾಗಿ ಇರತಾನೆ ಆದ ಕಾರಣ ವೈಷ್ಣವರಾದಂಥವರು ಸರ್ವದಾ ಈ ದೇಹವನ್ನು ಊರ್ಧ್ವಪುಂಡ್ರಗಳಿಂದ ಅಲಂಕರಿಸಬೇಕು. ಹೀಗೆ ಐತ ರೇಯದಲ್ಲಿ ಹೇಳಿದೆ.

ಇಂಥ ದೇಹ ವೃಷಣಾಸನ ಮಧ್ಯದಲ್ಲಿ ಗಡ್ಡಿ ಇದೆ. ಇದು ಎಂಥಾದು ಎಂದರೆ ಒಟುವಾದಂಥಾದ್ದು, ಎರಡು ಅಂಗುಲಿ ಉದ್ದವಾದಂಥಾದ್ದು. ನಾಲ್ಕು ಅಂಗುಲಿ (ಬೆರಳು) ವಿಸ್ತಾರವಾದಂಥ ಅತ್ಯಂತವಾಗಿ ದೇಹಕ್ಕ ಆಧಾರರೂಪವಾದಂಥಾದ್ದು ಸರ್ವನಾಡಿಗಳಿಗೆ ಮೂಲಾಧಾರವಾಗಿ, ಸ್ಥಾನಯಂತ ಕರೆಸಿಕೊಳತದೆ ಆ ಕಂದ ಮಧ್ಯದೇಶ ಆರಂಭಿಸಿ ಶಿರಸ್ಸಿನ ಕಡಿಪರ್ಯಂತರದಲ್ಲಿ ಹೋದು. ಬಿದರಿನೋಪಾವೇಲಿ ನೆಟ್ಟಕವಾಗಿ ಸೂಕ್ಷ್ಮವಾದಂಥಾ ಸುಷುಮ್ನಾನಾಖ್ಯ ನಾಡಿ ತಿಳಿಯಲಿಕ್ಕೆತಕ್ಕದ್ದು. ಆದಕ್ಕೆ ಐದು ಅಂಶಗಳು ವಜ್ರಿಕಾ, ಆರ್ಯಾ, ಪ್ರಕಾಶಿನೀ, ವೈದ್ಯುತಾ, ಬ್ರಹ್ಮನಾಡಿ ಎಂತ ಪಂಚಾಂಶವುಳ್ಳದ್ದು

ಸುಷುಮ್ನಾನಾಡಿ, ಪೃಷ್ಟಭಾಗದಲ್ಲಿ ಪಶ್ಚಿಮಕೆ, ವಜ್ರಿಕಾ ಎಂಬ ನಾಡಿಯಲ್ಲಿ ಹರಿದ್ವರ್ಣ ಉಳ್ಳಂತಾ ಪ್ರದ್ಯುಮ್ನನು ಇದ್ದಾನೆಯೆಂತ ಚಿಂತಿಸ ಬೇಕು. ಸುಷುಮ್ನಾವಾಮಭಾಗದಲ್ಲಿ ಆರ್ಯಾ ನೀಲವರ್ಣನಾದ ಅನಿ ರುದ್ಧ ಇದ್ದಾನೆಯಂತ ಚಿಂತಿಸಬೇಕು. ಸುಷುಮ್ನಾ ಮುಂಭಾಗದಲ್ಲಿ ಪ್ರಕಾಶಿನಿ ಎಂಬೋ ನಾಡಿಯಲ್ಲಿ ಶ್ವೇತವರ್ಣನಾದಂಥ ವಾಸುದೇವ ಇದ್ದಾನೆ. ಸುಷುಮ್ನಾ ದಕ್ಷಣಭಾಗದಲ್ಲಿ ವೈದ್ಯುತಾ ಎಂಬೋ ನಾಡಿ ಯಲ್ಲಿ, ಪಿಂಗಳವರ್ಣನಾದ ಸಂಕರುಷಣನು ಇದ್ದಾನೆ. ಸುಷುಮ್ನಾ ಮಧ್ಯಭಾಗದಲ್ಲಿ ಬ್ರಹ್ಮಾಎಂಬೋ ನಾಡಿ, ಅಲ್ಲಿ ರಕ್ತವರಣನಾದಂಥ ಶ್ರೀ

ನಾರಾಯಣನು ಇದ್ದಾನೆಂತ ಹೀಗೆ ಚಿಂತಿಸಬೇಕು. ಹೀಗ ತಂತ್ರಸಾ ದಲ್ಲಿ ಹೇಳಿದೆ.

## ಸುಷುಮ್ನಾನಾಡಿಯಲ್ಲಿದ್ದ ಕಮಲಗಳ ವಿವರ

೧. ಸುಷುಮ್ನಾ ಮೂಲದೇಶ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮಧ್ಯದಲ್ಲಿ ಒಂದು ನಾಲ್ಕುದಳವುಳ್ಳ ಐದುಕಮಲವುಳ್ಳಂಥವುಯೆಂತ ಪ್ರಕಾಶ ಸಂಹಿತೆಯಲ್ಲಿ ಹೇಳಿದೆ. ಅವುಗಳಲ್ಲಿ ಅನಿರುದ್ಧಾದಿ ಐದುರೂಪ ಚಿಂತಿಸಬೇಕು. (ಮತ್ತು ನಾಲ್ಕುದಳಗಳಲ್ಲಿ ಬುಧ, ಬೃಹಸ್ಪತಿ, ಚಂದ್ರ, ಶನಿ ಈ ನಾಲ್ಕು ದೇವತೆಗಳು ದಳಾಭಿಮಾನಿಗಳು. ಈ ಚತುರ್ದಳ ಕಮಲಕ್ಕೆ ಸ್ವಾಯಂಭು ಮನು ಅಭಿಮಾನಿ ಭೂಲೋಕವೆನಿಸಿಕೊಳ್ಳುತ್ತದೆ.)

೨. ತರುವಾಯ ಸುಷುಮ್ನಾ ಸಂಸಕ್ತವಾದಂಥ ನಾಭಿಯಲ್ಲಿ ಐದು ಕಮಲಗಳು, ರಕ್ತವರ್ಣವುಳ್ಳಂಥ ಷಡ್‌ದಳವುಳ್ಳಂಥಾವು. ಅವುಗಳಲ್ಲಿ ಪ್ರದ್ಯುಮ್ನಾದಿ ಐದುರೂಪಗಳನ್ನು ಚಿಂತಿಸಬೇಕು. (ಈ ಆರುದಳ ಕಮಲಕ್ಕೆ ಗಣಪತಿ ಅಭಿಮಾನಿ ಕಮಲದಳಗಳಲ್ಲಿ ಶ್ರೀಹರಿಯ ರಾಣಿಯರು, ನೀಲ, ಭದ್ರಾ, ಮಿತ್ರವಿಂದ, ಜಾಂಬವತಿ, ಕಾಳಿಂದಿ, ಲಕ್ಷಣ ಆರು ಜನ ದಳಾಭಿಮಾನಿಗಳು.)

೩. ಸುಷುಮ್ನಾ ಹೃತ್ಪದ್ಮದಲ್ಲಿ ಅಷ್ಟಪತ್ರವುಳ್ಳ ಕಮಲ ರಕ್ತವರ್ಣವುಳ್ಳದ್ದು. ಮೂವತ್ತೆರಡು ಕೇಶರವುಳ್ಳಂಥಾದ್ದು ನಿರ್ದುಷ್ಟವಾದಂಥ ರಕ್ತವರ್ಣವುಳ್ಳಂಥಾ ಒಂದು ಕಮಲ ಆ ಹೃತ್ಪದ್ಮಕಮಲದಳ ಒಳಭಾಗಕ್ಕೆ ಕಿಂಚಿತು ಬಾಗಿದಕಾರಣ ಅಧೋಮುಖ ಎಂತ ಕರೆಸಿಕೊಳ್ಳುತ್ತದೆ ಆ ಕಮಲವು ನಾಡಿದೆಸೆಯಿಂದ ಹೊರಟ ಕಾರಣ ಊರ್ಧ್ವನಾಳಾಯೆಂತ ಕರಿಕೊಳ್ಳುತ್ತದೆ. ಇಂಥಾ ಪದ್ಮವುಳ್ಳಂಥಾ ಉರಸಂಪುಟಯೆಂತ ಕರೆಸಿಕೊಳ್ಳುತ್ತದೆ ಆ ಹೃತ್ಪದ್ಮ ನಾಲ್ಕು ಪಾರ್ಶ್ವಗಳಲ್ಲಿ ಇದ್ದಂಥಾ, ಅಷ್ಟಪತ್ರವುಳ್ಳಂಥಾ ನಾಲ್ಕು ಕಮಲಗಳು. ಸಂಕರುಷಣಾದಿ ಐದು ರೂಪಗಳು. ಒಟ್ಟು ಅವುಗಳಲ್ಲಿ ಚಿಂತಿಸಬೇಕು. ಹೀಗೆ ಹೃತ್ಪದ್ಮ ಸಹಿತ ಐದು ಕಮಲಗಳು, ಆ ಕರ್ಣಿಕಾಬಿಂಬದಲ್ಲಿದ್ದಂಥಾ ನಾರಾಯಣರೂಪವನ್ನು ಚಿಂತಿಸಬೇಕು. (ಈ ಅಷ್ಟದಳಗಳಲ್ಲಿ ಪೂರ್ವದಿವಿಡಿದು ಇಂದ್ರ, ಅಗ್ನಿ, ಯಮ, ನೈರುತಿ, ವರುಣ,

ಪ್ರವಾಹ, ವಾಯು, ಕುಬೇರ, ರುದ್ರ, ಹೀಗೆ ಎಂಟುಜನರು ಅಭಿಮಾನಿಗಳು, ಮುಖ್ಯ ಕಮಲಾಭಿಮಾನಿ ಇಂದ್ರ. ಇದೇ ಸ್ವರ್ಗಲೋಕವೆಂತ ಕರಿಸಿಕೊಳ್ಳುತ್ತದೆ.)

೪. ಹೃದಯದ ಮೇಲ್‌ಭಾಗ ಉರಸ್ಸಿನಲ್ಲಿ, ಹನ್ನೆರಡು ದಳವುಳ್ಳ, ರಕ್ತವರ್ಣವುಳ್ಳಂಥಾ ಒಂದೇ ಕಮಲ. ಆ ಕಮಲದಲ್ಲಿ ಅನಿರುದ್ಧಾದಿ ಐದು ರೂಪಾತ್ಮಕನಾದಂಥ ವಿಷ್ಣುಸಿದ್ಧಿಯನ್ನು ಅಪೇಕ್ಷವುಳ್ಳಂಥವರುಗಳಿಂದ, ಧ್ಯೇಯನಾದಂಥಾತನು (ಈ ಹನ್ನೆರಡು ದಳಕ್ಕೆ, ೧೨ ಜನ ಸೂರ್ಯರು ಅಭಿಮಾನಿ ದೇವತೆಗಳು, ಇದಕ್ಕೆ ಮಹರುದ್ರ ಅಭಿಮಾನಿ, ಮಹರ್ಲೋಕವೆಂದು ಕರೆಸಿಕೊಳ್ಳುತ್ತದೆ.) ೧ ಧಾತ, ೨ ಅರ್ಯಮ, ೩ ಮಿತ್ರ, ೪ ವರುಣ, ೫ ಪುರುಹೂತ, ೬ ವಿವಸ್ವಾನ್, ೭ ತ್ವಷ್ಟ್ರ, ೮ ಹರಿ, ೯ ಸವಿತೃ, ೧೦ ಭಗ, ೧೧ ಪೂಷಾ, ೧೨ ಪರ್ಜನ್ಯ. ಸೂರ್ಯಕಲೆಗಳು. ೧ ತಪಿನಿ, ೨ ತ್ರಾಪಿನಿ, ೩ ಧೂಮ್ರ, ೪ ಮರೀಚಿ, ೫ ಜ್ವಾಲಿನಿ, ೬ ಖುಚಿ, ೭ ಸುಷ್ಮ್ನೆಸ್, ೮ ಭೋಗದ, ೯ ವಿಶ್ವ, ೧೦ ಬೋಧಿನಿ, ೧೧ ಧಾರಿಣಿ, ೧೨ ಕ್ಷಮಾ.

೫. ಸುಷುಮ್ನಾನಾಡಿಯಲ್ಲಿ ಸಂಬಂಧವಾದಂಥ ತಾಲು ಮಧ್ಯದಲ್ಲಿ ಶ್ವೇತವರ್ಣವಾದಂಥ ಎರಡು ದಳವುಳ್ಳಂಥಾ ನಾಲ್ಕು ದಿಕ್ಕಿನಲ್ಲಿ ನಾಲ್ಕು ಕಮಲ, ಮಧ್ಯದಲ್ಲಿ ವಂದು ಹೀಗೆ ಐದು ಕಮಲಗಳು ಆ ಐದುಕಮಲಗಳಲ್ಲಿ ಅನಿರುದ್ಧಾದಿ ಐದುರೂಪಗಳು ಚಿಂತಿಸಬೇಕು. ಹೀಗೆ ತಂತ್ರಸಾರದಲ್ಲಿ ಹೇಳಿದೆ. (ಶ್ರೀ ವಿಜಯದಾಸರು ಉಪಾಸನಾಭಾಗ ಸುಳಾದಿಯಲ್ಲಿ ಸುಳಾದಿ ೧೫, ಮೂಲಾಧಾರದಲ್ಲಿ ಚತುರದಳಕಮಲ, ಎಂಬೋ ಸುಳಾದಿಯಲ್ಲಿ ಝಂಪಿತಾಳ ೫ ರಲ್ಲಿ ಇಂದ್ರಯೋನಿಯಲ್ಲಿ ಷೋಡಶದಳವುಳ್ಳ ಅರವಿಂದ ಧವಳವರ್ಣದಿಂತಿಪ್ಪದು. ಚಂದ್ರಕಲಾಭಿಮಾನಿಗಳು ಅಲ್ಲಿ ವಾಸವೆಂದು ಹೇಳಿದ್ದಾರೆ. ತಂತ್ರಸಾರಕ್ಕೂ ಇದಕ್ಕೂ ವ್ಯತ್ಯಾಸ ತೋರುತ್ತದೆ. ಇದು ಬಲ್ಲ ಜ್ಞಾನಿಗಳಿಂದ ತಿಳಿದು ಸರಿಪಡಿಸಿಕೊಳ್ಳತಕ್ಕದ್ದು. ಹೊರ್ತಾಗಿ ಜ್ಞಾನಿಗಳ ವಚನದಲ್ಲಿ ಎಂದಿಗೂ ವ್ಯತ್ಯಾಸವಿಲ್ಲ. ಚಂದ್ರನ ಕಲಾಭಿಮಾನಿಗಳು. ೧ ಅಮೃತ, ೨ ಮಾನವ, ೩ ಪೂಷಾ, ೪ ತುಷ್ಟಿ, ೫ ಪುಷ್ಟಿ,

೬ ರತಿ, ೭ ಧೃತಿ, ೮ ಶಶಿನಿ, ೯ ಚಂದ್ರಿಕಾ, ೧೦ ಜ್ಯೋತ್ಸ್ನಾ, ೧೧ ಶ್ರೀಃ ೧೨ ಕಾಂತಿ, ೧೩ ಪ್ರೀತಿ, ೧೪ ಅಂಗದಾ, ೧೫ ಪೂರ್ಣ, ೧೬ ಪೂರ್ಣ-ರಾಕಾ. ಹೀಗೆ ಚಂದ್ರಕಲೆಗಳು ತನ್ನಾಮ ಕಲಾಭಿಮಾನಿ ದೇವತೆಗಳು. ಕಮಲಪತ್ರಾಭಿಮಾನಿಗಳು, ದಧಿವಾಮನ ದೇವರ ಉಪಾಸ್ಯ ಚಂದ್ರನು ಮಾಡುತ್ತಾನೆ. ಫಣೀಂದ್ರ ಕಮಲಾಭಿಮಾನಿ ಲಕ್ಷ್ಮೀನಾರಾಯಣನ್ನ ಪೂಜಿಸುತ್ತಾನೆ.) ಇದು ಜನೋಲೋಕವೆಂದು ಹೇಳುತ್ತಾರೆ.

೬. ಭ್ರೂಮಧ್ಯದಲ್ಲಿ ಸುಷುಮ್ನಾನಾಡಿಗೆ, ನಾಲ್ಕು ಪಾರ್ಶ್ವಗಳಲ್ಲಿ ನಾಲ್ಕು ಮಧ್ಯ ಒಂದು ಕಮಲ ಹೀಗೆ ೫ ಕಮಲ ಶ್ವೇತವರ್ಣವುಳ್ಳಂಥಾ, ಚತುರ್ದಳವುಳ್ಳಂಥಾ ಐದು ಕಮಲಗಳಲ್ಲಿ ಅನಿರುದ್ಧಾದಿ ೫ ರೂಪಗಳನ್ನು ಚಿಂತಿಸಬೇಕು. (ಶ್ರೀ ವಿಜಯದಾಸರ ಸುಳಾದಿ ಮೇಲೆ ಅಟ್ಟತಾಳದಲ್ಲಿ ಭ್ರೂಮಧ್ಯದಲ್ಲಿ ದ್ವಿದಳ ಕಮಲವುಂಟು, ದಳಾಭಿಮಾನಿ ಬ್ರಹ್ಮ ವಾಯು, ಗರುಡದೇವರು ಕಮಲಾಭಿಮಾನಿ ಶ್ರೀಕೃಷ್ಣನ್ನ ಉಪಾಸನಾ ಮಾಡುತ್ತಾನೆ. ಇದೇ ತಪೋಲೋಕ.) ಇಲ್ಲಿಯೂ ಕಮಲಗಳಲ್ಲಿ ವ್ಯತ್ಯಾಸವಿದೆ. ಮೇಲಿನಂತೆ ಇದು ಜ್ಞಾನಿಗಳಿಂದ ಸರಿಯಾಗಿ ತಿಳಿಯುವದು ಅತ್ಯಾವಶ್ಯ

೭. ಶಿರಸ್ಸಿನ ಕಡೆಯಲ್ಲಿ ಸುಷುಮ್ನಾನಾಡಿಯ ನಾಲ್ಕುಭಾಗದಲ್ಲಿ ೪ ಮಧ್ಯದಲ್ಲಿ ಒಂದು ಹೀಗೆ ೫ ಶ್ವೇತವರ್ಣವಾದ ದ್ವಾದಶದಳವುಳ್ಳಂಥ ಐದು ಕಮಲಗಳಲ್ಲಿ ಅನಿರುದ್ಧಾದಿ (೫) ರೂಪ ಚಿಂತಿಸಬೇಕು. (ಸುಳಾದಿ ಆದಿತಾಳದಲ್ಲಿ ಸಾಸಿರದಳವುಳ್ಳ ಕಮಲ ಶಿರಸ್ಸಿನಲ್ಲಿ, ಲೇಸಾಗಿಪ್ಪೊಪ್ಪುತಿದೆ ವಜ್ರ ಪ್ರಕಾಶದಂತೆ. ವಿಶ್ವಾದಿಸಾವಿರರೂಪಗಳು ಬ್ರಹ್ಮದೇವರು ಕಮಲಾಭಿಮಾನಿ, ಶ್ರೀರಂಗಮೂರ್ತಿ ಧ್ಯಾನಮಾಡುತ್ತಾನೆ ಇದೇ ಸತ್ಯಲೋಕವೆಂದು ಹೇಳಿದ್ದಾರೆ. ವಾಸುದೇವನಿಯಾಮಕ)

೮. ಶಿರಸ್ಸಿನ ಊರ್ಧ್ವಭಾಗದಲ್ಲಿ ದ್ವಾದಶಾಂಗುಲಿ ಮೇಲೆ ಛತ್ರದೋಪಾದಲಿ ಶ್ವೇತವರ್ಣವುಳ್ಳಂಥಾ ದ್ವಾದಶದಳವುಳ್ಳ ಒಂದು ಕಮಲ ಚಿಂತಿಸಬೇಕು. ಆ ಕಮಲದಲ್ಲಿ ತುರ್ಯನಾಮಕನಾದ, ಕರ್ಮಗಳಿಗೆ ಸಾಕ್ಷೀಭೂತನಾದ, ಮೋಕ್ಷಪ್ರದನಾದಂಥ, ವಾಸುದೇವನ್ನ ಚಿಂತಿಸಬೇಕು. ಇದೇ ವೈಕುಂಠ.

## ದ್ವಾತ್ರಿಂಶತಿ (೩೨) ಕಮಲಗಳ ವಿವರ

(೧) ಸುಷುಮ್ನಾ ಮೂಲದಲ್ಲಿ ೫ ಕಮಲ, (೨) ನಾಭಿದೇಶದಲ್ಲಿ ೫ ಕಮಲ (೩) ಹೃದಯದಲ್ಲಿ ೫, (೪) ಕಂಠದಲ್ಲಿ ೫, (೫) ಭ್ರೂಮಧ್ಯ ದಲ್ಲಿ ೫, (೬) ಶಿರಸ್ಸಿನಲ್ಲಿ ೫, ೬×೫=೩೦, ಉರದಲ್ಲಿ ೧, ಶಿರೋರ್ಧ್ವ ದಕ್ಷಿಣ ಭಾಗದಲ್ಲಿ ೧, ಹೀಗೆ ೩೨ ಕಮಲಗಳಲ್ಲಿ ಇಷ್ಟಂಥ ಭಗವಂತನನ್ನು ಚಿಂತಿಸಬೇಕು. ಇಂಥ ಭಗವಂತನಧ್ಯಾನ ಮಾಡೋಪ್ರಭಾವದಿಂದ ಮುಕ್ತ ನಾಗುತ್ತಾನೆ. ಹೀಗೆ ತಂತ್ರಸಾರದಲ್ಲಿ ಹೇಳಿದೆ.

ಸುಷುಮ್ನಾನಾಡಿಗೆ ಚತುರ್ದಿಕ್ಕುಗಳಲ್ಲಿ ನಾಲ್ಕು ನಾಡಿಗಳು. ಧಾರುಣಿ, ಪಿಂಗಳಾ, ವಜ್ರಿಕಾ, ಇಡಾ, ಸುಷುಮ್ನಾನಾಡಿಗೆ ಬ್ರಹ್ಮ ಅಭಿ ಮಾನಿ; ಪಿಂಗಳಾನಾಡಿಗೆ ಸೂರ್ಯಾಭಿಮಾನಿ; ಇಳಾನಾಡಿಗೆ ಚಂದ್ರ, ಯಥಾಕ್ರಮದಿಂದ ಮೂರುಮುಂದಿನ್ನ ತಿಳಿಯಬೇಕು. ಸುಷುಮ್ನಾ ಪೂರ್ವಭಾಗ ಧಾರುಣಿನಾಮಕ ನಾಡಿಯಲ್ಲಿ ಸ್ಫಟಿಕದೋಪಾದೇಲಿ ನಿರ್ದು ಷ್ಟವಾದ ಕಾಂತಿಯುಳ್ಳಂತಾ ವಾಸುದೇವನಾಮಕನನ್ನು ಚಿಂತಿಸಬೇಕು. ಬಲಭಾಗದಲ್ಲಿದ್ದ ಪಿಂಗಳಾನಾಡಿಯಲ್ಲಿ ಪಿಂಗಳವರ್ಣಉಳ್ಳಂಥಾ ಸಂಕುರುಷಣ ನಾಮಕನನ್ನು ಚಿಂತಿಸಬೇಕು ಹಿಂದೆಡೆ ಪಶ್ಚಿಮದಲ್ಲಿದ್ದ ವಜ್ರಿಕಾನಾಡಿ ಯಲ್ಲಿ ಪೀತವರ್ಣಉಳ್ಳಂಥಾ ಪ್ರದ್ಯುಮ್ನನನ್ನು ಚಿಂತಿಸಬೇಕು. ಎಡಗಡೇ ಇಷ್ಟ ಇಳಾನಾಡಿಯಲ್ಲಿ ಶ್ಯಾಮವರ್ಣವುಳ್ಳ ಅನಿರುದ್ಧನ್ನ ಚಿಂತಿಸಬೇಕು. ಮಧ್ಯದಲ್ಲಿಷ್ಟಂಥಾ ಸುಷುಮ್ನಾನಾಡಿಯಲ್ಲಿ ಬಾಲಸೂರ್ಯನೋಪಾದೆಲಿ ಕಾಂತಿಯುಳ್ಳಂಥಾ ನಾರಾಯಣನನ್ನು ಚಿಂತಿಸಬೇಕು. ಈ ರೂಪಗಳು ಸೂರ್ಯಮಂಡಲದಲ್ಲಿ ಇದ್ದಂಥಾವು. ಹೀಗೆ ಛಾಂದೋಗ್ಯದಲ್ಲಿ ಹೇಳಿದೆ.

ಆ ಸೂರ್ಯಮಂಡಲದಲ್ಲಿ ನಾಲ್ಕು ದಿಕ್ಕುಗಳಲ್ಲಿ ೨೦೦–೨೦೦ ಕಿರುಣ ಮಧ್ಯದಲ್ಲಿ ೨೦೦ ಕಿರುಣ, ಹೀಗ ಸಹಸ್ರ ಕಿರಣಗಳು ಸೂರ್ಯಮಂಡಲದಲ್ಲಿ ಉಳ್ಳಂಥಾವು ಯೆಂತ ಚಿಂತಿಸಬೇಕು.

ಈ ಪ್ರಕಾರವೇ ಸುಷುಮ್ನಾನಾಡಿಯ ನಾಲ್ಕು ದಿಕ್ಕಿನಲ್ಲಿ ತಥಾ ಮಧ್ಯಭಾಗದಲ್ಲಿ ಕೂಡಿಸಿ, ಸಹಸ್ರಶಾಖಾ(ಕಿರಣ)ವುಳ್ಳಂಥಾವು. ಸೂರ್ಯ ಪ್ರಾಚೀದಿಕ್ಕಿನಲ್ಲಿ ರಕ್ತವರ್ಣವುಳ್ಳಂಥಾ, ಇನ್ನೂರು ಕಿರಣಗಳು. ಆ ಕಿರಣ

ಗಳಲ್ಲಿ ಮಧುನಾಮಕನಾದಂಥಾ ಋಗ್ವೇದ ಪ್ರತಿಪಾದ್ಯನಾದಂಥ ಅಗ್ನಿಯೋ ಪಾದೆಲಿ ಕಾಂತಿವುಳ್ಳಂಥ ವಾಸುದೇವನು, ಅಗ್ನಿವಸುಗಳಿಂದ ಉಪಾಸ್ಯನಾಗಿದ್ದಾನೆ. ಸೂರ್ಯನ ದಕ್ಷಿಣಭಾಗದಲ್ಲಿ ಗೌರವರ್ಣವುಳ್ಳಂಥ ೨೦೦ ಕಿರಣಗಳಲ್ಲಿ ಶುಕ್ಲವರ್ಣವುಳ್ಳಂಥಸಂಕರ್ಷಣನು, ಮಧುವಿದ್ಯಾವುಳ್ಳಂಥವಾಯುದೇವರು ಮೊದಲಾದಂಥ ರುದ್ರಾದಿಗಳಿಂದ ಉಪಾಸ್ಯನು ಸೂರ್ಯನ ಪಶ್ಚಿಮಭಾಗದಲ್ಲಿ ಶ್ಯಾಮವರ್ಣವುಳ್ಳಂಥಾ, ಇನ್ನೂರು ಕಿರಣಗಳಲ್ಲಿ ಶ್ಯಾಮವರ್ಣವುಳ್ಳಂಥಾ ಸಾಮವೇದ ಮೊದಲಾದಂಥ, ವೇದಗಳಿಂದ ಪ್ರತಿಪಾದ್ಯನಾದಂಥ ಪ್ರದ್ಯುಮ್ನನನ್ನು, ಆತನ ಸಾಮಾಭಿಮಾನಿಗಳಾದಂಥ, ಸಾಮಕರಾದಂಥ ಸೂರ್ಯರುಗಳಿಂದ ಉಪಾಸ್ಯನು. ಸೂರ್ಯನ ಉತ್ತರಭಾಗದಲ್ಲಿ ನೀಲವರ್ಣವುಳ್ಳಂಥ ಇನ್ನೂರು ಕಿರಣಗಳು ಆ ಕಿರಣಗಳಲ್ಲಿ ನೀಲವರ್ಣವುಳ್ಳಂಥ ಅಥರ್ವಣವೇದ ಇತಿಹಾಸ ಪುರಾಣ ಪ್ರತಿಪಾದ್ಯನಾದಂಥ ಮಧುನಾಮಕ ಅನಿರುದ್ಧನು, ಆತನು ಚಂದ್ರಮೊದಲಾದಂಥ ಮರುತಗಳಿಂದ ಉಪಾಸ್ಯನು ಯೆಂತ ಚಿಂತಿಸಬೇಕು. ಸೂರ್ಯಮಂಡಲ ಮಧ್ಯದಲ್ಲಿ ಊರ್ಧ್ವಭಾಗಕ್ಕೆ ಪೀತವರ್ಣವುಳ್ಳಥಾ ಇನ್ನೂರು ಕಿರಣಗಳು ಆ ಕಿರಣಗಳಲ್ಲಿ ಉದಿತ ಸೂರ್ಯನೋಪಾದೆಲಿ ಕಾಂತಿವುಳ್ಳಂಥಾ, ಅನಂತ ವೇದಪ್ರತಿಪಾದ್ಯನಾದಂಥ ಮಧುನಾಮಕ ನಾರಾಯಣನು. ಆತನು ವೇದಾಭಿಮಾನಿಗಳಾದಂಥ ಬ್ರಹ್ಮ, ಸರಸ್ವತೀ, ಶೇಷ, ವಾರುಣೀ, ಗರುಡ, ಸೌಪರ್ಣೀನೇ ಮೊದಲಾಗಿವುಳ್ಳಂಥವರಿಂದ ಸರ್ವದಾ ಉಪಾಸ್ಯನು. ಈ ಪೂರ್ವೋಕ್ತ ಪ್ರಕಾರ ಸೂರ್ಯನಲ್ಲಿ ಐದುರೂಪದಿಂದ ಭಗವಂತನು ಇದ್ದಾನೆ ಈ ಪ್ರಕಾರ ಐದುರೂಪಗಳು, ಸುಷುಮ್ನಾನಾಡಿ ನಾಲ್ಕು ಪಾರ್ಶ್ವಗಳಲ್ಲಿ ತಥಾ ಮಧ್ಯದಲ್ಲಿದ್ದ ಕಾರಣ ಸೂರ್ಯನೋಪಾದೆಲಿ ಸಹಸ್ರ ಕಿರಣಗಳ ಸ್ಥಿತಿ ತಿಳಿಯಬೇಕು. ಹೀಗೆ ಛಾಂದೋಗ್ಯದಲ್ಲಿ ಹೇಳಿದೆ.

ಪಿಂಗಳಾದಕ್ಷಿಣ ನಾಡಿಯೆಂತ ಕರಸಿಕೊಳ್ಳುತ್ತದೆ. ಇಡಾನಾಡಿಯು ವಾಮನಾಡಿಯೆಂತ ಕರಸಿಕೊಳ್ಳುತ್ತದೆ. ಪಿಂಗಳಾನಾಡಿಯ ಅಂಶಗಳು ಪಂಚಾಶತ (೫೦೦) ಅವು ದಕ್ಷಿಣಾಯನೀಯೆಂತ ಕರೆಸಿಕೊಳ್ಳುತ್ತದೆ. ಇಂಥಾ ದಕ್ಷಿಣನಾಡಿ ಕಿಂಚಿತ ಡೊಂಕಾಗಿ ವಾಮಭಾಗಕ್ಕೆ ಪಸರಿದಂಥಾವು. ಇವುಗಳಲ್ಲಿ ಸೂರ್ಯನ ದಕ್ಷಿಣಾಯನ ಐನೂರು ರಶ್ಮಿಗಳು ವ್ಯಾಪ್ತವಾ

ದಂಥಾವು. ಇದು ದಕ್ಷಿಣಾಯನಮಾರ್ಗ ತಥಾ ಧೂಮ್ರಾದಿ ಮಾರ್ಗ ಯೆಂದು ಕರಸಿಕೊಳ್ಳುತ್ತದೆ ಅದಕ್ಕೇವೆ ಪಿತೃಯಾನಾಯೆಂದು ಹೇಳುತ್ತಾರೆ. ಈ ಮಾರ್ಗದಿಂದ ದಾನಜೀವರು ಉತ್ಕ್ರಮಣವನ್ನು ಐದುತಾರೋ ಆ ಜೀವರು ಪುನಃ ಸಂಸಾರಕ್ಕ ಬಾಹೋ ಅಂಥವರು.

ಇಳಾ (ಡಾ) ನಾಡಿ ಅಂಶಗಳು ಐನೂರು, ಅವು ಉತ್ತರಾಯಣ ಯೆಂತ ಕರಸಿಕೊಳ್ಳುತ್ತದೆ. ಆ ಉತ್ತರಾಯಣನಾಡಿಗಳು ಸ್ವಲ್ಪ ಡೊಂಕಾಗಿ ದಕ್ಷಣಕ್ಕೆ ಬಂದಂಥಾವು ಆ ನಾಡಿಗಳಲ್ಲಿ ಸೂರ್ಯನ ಸಂಬಂಧಿ ಯಾದಂಥ ಐನೂರು ಉತ್ತರಾಯಣ ರಶ್ಮಿಗಳು ವ್ಯಾಪ್ತವಾಗಿ ಅವೆ. ಇದು ಉತ್ತರಾಯಣಮಾರ್ಗ, ಅರ್ಚಿರಾದಿಮಾರ್ಗಯೆಂತ ಕರೆಸಿಕೊಳ್ಳುತ್ತದೆ. ಇದಕೆ ದೇವಯಾನಯೆಂತೆಂದು ಜ್ಞಾನಿಗಳು ಹೇಳುತ್ತಾರೆ. ಮಧ್ಯ ಸುಷು ಮ್ನಾನಾಡಿ ಬ್ರಹ್ಮಯಾನಯೆಂತ ಕರೆಸಿಕೊಳ್ಳುತ್ತದೆ. ಹೀಗೆ ದ್ವಿತಿಯಸ್ಕಂದ ಭಾಗವತದಲ್ಲಿ ಹೇಳಿದೆ. ತಥಾಸೂತ್ರ ಭಾಷ್ಯದಲ್ಲಿಯೂ ಹೇಳಿದ್ದಾರೆ.

ದಾವಪ್ರಾಣಿಗಳು ಧೂಮ್ರಾದಿ ಮಾರ್ಗದಿಂದ ತನ್ನ ದೇಹದಲ್ಲಿದ್ದ ಪಿಂಗಳಾನಾಡಿಯಲ್ಲಿ ಇದ್ದಂಥ ಕಿರಣಗಳಿಂದ ಸಹಿತವಾಗಿ ವಾಮಕರ್ಣದ ದೆಶೆಯಿಂದ ಉತ್ಕ್ರಮಣವನ್ನು ಐದುತಾರೋ ಅವರು ಪಿತೃಯಾನಮಾರ್ಗ ವುಳ್ಳಂಥವರು. ಅವರೇವೇ ಅಧಮಾಧಿಕಾರಿ (ತಮೊ) ಅಧಿಕಾರಿಗಳು.

ಅರ್ಚಿರಾದಿ ಮಾರ್ಗಸ್ಥರಾದಂಥ, ಮುಕ್ತಿಯೋಗ್ಯರಾದಂಥ ಮುಮು ಕ್ಷ್ಯೋತ್ತರು, ಅವರು ತಮ್ಮ ದೇಹದಲ್ಲಿ ಇದ್ದ ಇಡಾನಾಡಿ ತಥಾ ರಶ್ಮಿಗಳಿಂದ ಸಹಿತವಾಗಿ ದೇವಯಾನ ಮಾರ್ಗಸ್ಥರಾಗಿ ದಕ್ಷಿಣಕರ್ಣದ ದೆಶೆಯಿಂದ ಉತ್ಕ್ರಮಣವನ್ನು ಐದುತಾರೋ, ದಾವಯೋಗ್ಯ ಜೀವರು ತಮ್ಮ ತಮ್ಮ ಯೋಗ್ಯತಾನುಸಾರ ಸಾಧನ ಪರಿಪೂರ್ಣರಾದಂಥ, ಪಕ್ವವಾದಂಥ ಪ್ರಾರಬ್ಧ ಭೋಗವುಳ್ಳವರು. ಅನಾದಿಯಾದಂಥ ಲಿಂಗದೇಹಕ್ಕೆ, ಭಂಗಕಾಲ ಪ್ರಾಪ್ತ ವಾಗತಿರಲಿಕ್ಕೆ ಯೋಗಪ್ರಭಾವದಿಂದ ತಮ್ಮ ಮನಸ್ಸು ಪರಮಾತ್ಮನಲ್ಲಿಟ್ಟು ಪೃಥಿವ್ಯಾದಿ ಪಂಚಮಹಾಭೂತ ಕ್ರಮದಿಂದ, ಅವ್ಯಕ್ತ ತತ್ವ ಪರಿಯಂತ ಲಯವನ್ನು ಚಿಂತಿಸಿ ಹಾಗೆ ತತ್ವಾಭಿಮಾನಿ ದೇವತೆಗಳನ್ನು ಕ್ರಮದಿಂದ ನಿಯೋಜಿಸಿ, ಆ ತತ್ವದೇವತೆಯಿಂದ ಕೂಡಿ, ತನ್ನ ದೇಹದೊಳಗೆ ಇದ್ದಂಥಾ ಪರಮಾತ್ಮನಿಂದ ಸಹಿತನಾಗಿ ಸುಷುಮ್ನಾ ಮಾರ್ಗದದಶಿಯಿಂದ, ವಾಯು

ದೇವರಿಂದ ಕೂಡಿ, ಬ್ರಹ್ಮರಂಧ್ರ ದೆಶೆಯಿಂದ ಉತ್ಕ್ರಮಣ ಐದುತ್ತಾ, ಅವರು ಚತುರ್ಮುಖ ಬ್ರಹ್ಮನಿಂದ ಕೂಡಿ, ಸ್ವ ಸ್ವಯೋಗ್ಯ (ಮುಕ್ತಿ ಯನ್ನು) ಮೋಕ್ಷವನ್ನು ಐದುತ್ತಾರೆ. ಇದು ಬ್ರಹ್ಮಯಾನ

ಈ ಪೂರ್ವೋಕ್ತವಾದಂಥ ಮಾರ್ಗತ್ರಯವನ್ನು ದಾವತಿಳಿತಾನೋ ಅವನು ಮುಕ್ತಿಯನ್ನು ಐದುತ್ತಾನೆ ಹೀಗೆ ಭಾಷ್ಯದಲ್ಲಿ ಹೇಳಿದೆ.

ಇನ್ನು ಮುಕ್ತಿಯೋಗ್ಯರು ಮುಕ್ತಿಯನ್ನು ಐದಬೇಕಾದರೆ ಶೇಷ ಮಾರ್ಗ, ಗರುಡಮಾರ್ಗ ಇವು ಎರಡು ದೇವತೆಗಳ ಲಯಮಾರ್ಗಗಳು ಹೇಳುತ್ತಾರೆ. ಗಂಧರ್ವರೇ ಮೊದಲಾದಂಥ ಸಮಷ್ಠರು ಕುಬೇರನ್ನ ಪ್ರವೇಶಿಸುತ್ತಾರೆ. ಕುಬೇರನು ವರುಣನಿಂದ ಕೂಡಿ ಚಂದ್ರದೇವರನ್ನು ಪ್ರವೇಶ ಮಾಡುತ್ತಾನೆ. ಚಂದ್ರನು ವಿಷ್ವಕ್ಸೇನ ಮೊದಲಾದ ಪಾರ್ಷದ ರಿಂದ ಕೂಡಿ, ಕಾಮಪುತ್ರ ಅನಿರುದ್ಧನನ್ನು ಪ್ರವೇಶಿಸುತ್ತಾನೆ. ಅನಿರು ದ್ಧನು ಸನಕನೇವೆ ಮೊದಲಾದಂಥ ಯೋಗಿಗಳಿಂದ ಕೂಡಿ, ಕಾಮದೇವ ರನ್ನು, ಕಾಮದೇವರು, ವಾರುಣಿಯನ್ನು, ವಾರುಣೀದೇವಿಯರು ತನ್ನ ಗಂಡನಾದಂಥ ಶೇಷದೇವರನ್ನು, ಶೇಷದೇವರು ಸರಸ್ವತೀದೇವಿಯನ್ನು, ಸರಸ್ವತೀದೇವಿ ಬ್ರಹ್ಮದೇವರನ್ನ ಪ್ರವೇಶಿಸುತ್ತಾಳೆ. ಆ ಬ್ರಹ್ಮದೇವರು ತೇಜಃ ಯೆಂತ ಹೆಸರು ಉಳ್ಳಂಥ ರಮಾದೇವಿಯನ್ನು ಪ್ರವೇಶಿಸುತ್ತಾನೆ. ರಮಾದೇವೇರು ಪರಮಾತ್ಮನ ಸಾಮಿಪ್ಯ ಲಕ್ಷಣವಾದಂಥ ಸಂಗವನ್ನು ಐದು ತ್ತಾರೆ. ಈ ಉಕ್ತವಾದಂಥ ದೇವತಿಗಳಿಗೆ ಇದು ಶೇಷಮಾರ್ಗ.

ಇನ್ನು ಗರುಡಮಾರ್ಗದಾವುದೆಂದರೆ

೧ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಈ ನಾಲ್ಕೂವರ್ಣ ಬ್ರಹ್ಮ ಚಾರಿ ಮೊದಲಾದ ಚತುರಾಶ್ರಮ ಉಳ್ಳಂಥ ಮನುಷ್ಯೋತ್ತಮರು. ನಿರು ಋತಿ, ಸಮಸ್ತ ಪಿತೃಗಳು, ವೈವಸ್ವತ ಮೊದಲಾದ ಮನುಗಳು ಪೃಥು ರಾಯನೇ ಮೊದಲಾದ ಅರಸ ಶ್ರೇಷ್ಠರು ಇವರಿಷ್ಟು ಮಂದಿ, ಯಮದೇವ ರನ್ನು ಪ್ರವೇಶಿಸುತ್ತಾರೆ. ಯಮದೇವರು ಇವರು ಸರ್ವರು ಸ್ವಾಯಂಭುವ ಮನುವಿನನ್ನು, ಸ್ವಾಯಂಭುವಮನು ಇಂದ್ರದೇವರನ್ನು ಪ್ರವೇಶಿಸುತ್ತಾನೆ.

೨ ಪ್ರವಾಹ ವಾಯುದೇವರೆ ಮೊದಲಾದಂಥ ಮರುದ್ಗಣದವರು. ಆಹಂಕಾರಿಕ ಪ್ರಾಣನನ್ನು. ಅಹಂಕಾರಿಕ ಪ್ರಾಣದೇವರು ಇಂದ್ರನನ್ನು ಪ್ರವೇಶಿಸುತ್ತಾರೆ

೩ ಇನ್ನು ವಿನಾಯಕ ಸಾಧ್ಯಗಣದವರು ಆಕಾಶಾಭಿಮಾನಿ ಗಣೇಶನನ್ನು ಪ್ರವೇಶಮಾಡಿ ಆಕಾಶದಲ್ಲಿ ಇರುತ್ತಾರೆ (೨)ಮೃತ್ಯುಋಭುಗಳು ಸಮಸ್ತರೂ ಪೃಥಿವಿಯನ್ನು ಕ್ರಮದಿಂದ ಪ್ರವೇಶಿಸುತ್ತಾರೆ.

ಸಮಸ್ತ ಅಗ್ನಿ ಪುತ್ರನೇ ಮೊದಲಾದ ಉಕ್ತೇತರ ದೇವತೆಗಳು ಇವರು ಸರ್ವರು ಅಗ್ನಿದೇವರನ್ನು ಪ್ರವೇಶಿಸುತ್ತಾರೆ ಅಗ್ನಿದೇವರು ಸೂರ್ಯ ದೇವರನ್ನು ಪ್ರವೇಶಿಸುತ್ತಾರೆ. ಮೇಲೆ ಹೇಳಿದಂಥ, ಆಕಾಶ ಪೃಥಿವಿ, ಆದಿತ್ಯ ಇವರು ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಪ್ರವೇಶಿಸುತ್ತಾರೆ. ದೇವತೆಗಳಿಗೆ ಗುರುಗಳಾದಂಥ ಬೃಹಸ್ಪತ್ಯಾಚಾರ್ಯರು ಇಂದ್ರ ದೇವರನ್ನು ಪ್ರವೇಶಿಸುತ್ತಾರೆ

೪ ಭೃಗುಋಷಿ ಅತ್ರಿ ಮೊದಲಾದ ಬ್ರಹ್ಮ ಪುತ್ರರು ದಕ್ಷಪ್ರಜೇಶ್ವರನನ್ನು. ದಕ್ಷನು ಇಂದ್ರನನ್ನು ಪ್ರವೇಶಿಸುತ್ತಾನೆ.

ಇಂದ್ರದೇವರು ಸೌಪರಣಿ ದೇವೇರನ್ನು, ಸೌಪರಣಿ ದೇವಿಯರು ಸ್ವಪತಿಯಾದ ಗರುಡದೇವರನ್ನು, ಗರುಡನು ಸರಸ್ವತೀದೇವಿಯರನ್ನು, ಸರಸ್ವತೀದೇವಿಯರು ಬ್ರಹ್ಮದೇವರನ್ನು. ಪ್ರವೇಶಿಸುತ್ತಾರೆ. ಬ್ರಹ್ಮದೇವರು ತೇಜೋಯಂತ ಹೆಸರುಳ್ಳಂಥಾ ತನ್ನ ತಾಯಿಯಾದಂಥಾ ರಮಾದೇವಿಯನ್ನು ಪ್ರವೇಶಿಸುತ್ತಾರೆ. ನಿತ್ಯಾವಿಯೋಗಿನಿಯಾದಂಥಾ ರಮಾದೇವಿಯರು ಶ್ರೀಪರಮಾತ್ಮನ ಅತಿಸಾಮಿಪ್ಯವನ್ನು ಐದುತ್ತಾಳೆ. ಮುಕ್ತಿಗೋಸುಗವಾಗಿ ದೇವತೆಗಳ **ಗರುಡಮಾರ್ಗ** ಹೇಳಲ್ಪಟ್ಟಿತು. ಈ ಎರಡೂ ಮಾರ್ಗ ದಾವಾತನು ತಿಳಿಯೋದಿಲ್ಲವೋ ಅವನು ಯಮನ ಸಂಬಂಧಿಕವಾದ ಪದವಿ (ನರಕ) ಯನ್ನು ಐದುತ್ತಾನೆ. ಇದಕ್ಕೆ ಪ್ರಮಾಣಾ ಅಧ್ಯಾತ್ಮಗ್ರಂಥದಲ್ಲಿ ಹೇಳಿದೆ.

ಇನ್ನು ಮೇಲೆ ಸುಷುಮ್ನಾನಾಡಿ ಮೊದಲು ಮಾಡಿಕೊಂಡು ದಕ್ಷಿಣ ಪಾರ್ಶ್ವದಲ್ಲಿ ಇಪ್ಪಂಥ, ಮೂವತ್ತಾರುಸಾವಿರ ನಾಡಿಗಳಲ್ಲಿ ಭಗವಂತನ ಪುರು

ಷರೂಪಗಳು, ಮೂವತ್ತಾರುಸಾವಿರ ಚಿಂತಿಸಬೇಕು. ಈ ರೂಪಗಳು ಪುರುಷನ ಆಯುಃಪ್ರಮಾಣ ಲೆಖ್ಖ ಮುನ್ನೂರಾಅರವತ್ತು ದಿವಸ ಆ ಲೆಖ್ಖದಿಂದ ಮೂವತ್ತಾರುಸಾವಿರ ದಿವಸ ಅಹಸ್ಸಿಗೆ ನಿಯಾಮಕವಾದಂಥಾ ದ್ದುಯೆಂದು ಚಿಂತಿಸಬೇಕು.

ಸುಷುಮ್ನಾ ವಾಮಪಾರ್ಶ್ವದಲ್ಲಿದ್ದ ಮೂವತ್ತಾರುಸಾವಿರ ನಾಡಿಗಳಲ್ಲಿ, ಪರಮಾತ್ಮನ ಸ್ತ್ರೀರೂಪ ಮೂವತ್ತಾರುಸಾವಿರ ಚಿಂತಿಸಬೇಕು. ಈ ರೂಪಗಳು ಮನುಷ್ಯನೇ ಮೊದಲಾಗಿ ಉಳ್ಳಂಥವರ ಆಯುಃಪ್ರಮಾಣದ ಮೂವತ್ತಾರುಸಾವಿರ ರಾತ್ರಿಗೆ ನಿಯಾಮಕವಾದಂಥವು. ಈ ಪುರುಷ ಸ್ತ್ರೀರೂಪಗಳು ಬ್ರಹತೀಸ್ತುತಿ (ಬ್ರಹತೀಸಹಸ್ರ ಛಂದಸ್ಸಿನ ಋಕ್ಕುಗಳಲ್ಲಿ) ಹೇಳಿದೆ. ಈ ಬ್ರಹತೀಸಹಸ್ರ ಛಂದಸ್ಸು, ಸ್ವರ, ವ್ಯಂಜನ ಭೇದದ ದರಿಯಿಂದ ಎಪ್ಪತ್ತೆರಡುಸಾವಿರ, ವರ್ಣಗಳಾಗುತ್ತವೆ. ಸ್ವರ ವರಣ ಪ್ರತಿಪಾದ್ಯವಾದಂಥ ಮೂವತ್ತಾರುಸಾವಿರ, ಪರಮಾತ್ಮನ ಪುರುಷರೂಪಗಳು ಹಾಗೆ ಪರಮಾತ್ಮನ ಮೂವತ್ತಾರುಸಾವಿರ ವ್ಯಂಜನವರ್ಣ ಪ್ರತಿಪಾದ್ಯವಾದಂಥಾವು. ಅಲ್ಲಿ ಸ್ತ್ರೀರೂಪಗಳು ಮೂವತ್ತಾರುಸಾವಿರ ಚಿಂತಿಸಬೇಕು. ಇಂಥಾ ಪುರುಷ ಸ್ತ್ರೀರೂಪಗಳು ಮನುಷ್ಯನಾದವನು ಯಾವನು ತಿಳಿಯುವನೋ ಅವನು ಪೂರ್ಣಾಯುಷ್ಯವನ್ನು ಐದುತ್ತಾನೆ. ಹೀಗೆ ಐತರೇಯದಲ್ಲಿ ಹೇಳಿದೆ.

ವಿಚಿತ್ರವಾದಂಥ ಭಗವನ್ಮೂರ್ತಿಗಳು ದಾವನಾಡಿಯಲ್ಲಿದ್ದ ಕಾರಣ ಹಿತನಾಡಿಗಳೆಂದು ಕರಸಿಕೊಳ್ಳುವವು. ರಮಾಪತಿಯು ಆ ನಾಡಿಗಳಲ್ಲಿ ಪ್ರವೇಶನಾಗಿ, ಚಂದ್ರಯೆಂತ ಕರೆಸಿಕೊಂಬೊ ಅಂಥವನು ಆಗಿ, ಸಮಸ್ತವಾದಂಥ ಸಾರರೂಪಗಳನ್ನು ಭೋಜನ ಮಾಡುತ್ತಾನೆ. ಪೂರ್ವೋಕ್ತವಾದಂಥಾ ಭಗವದ್ರೂಪಗಳು, ತಥಾನಾಮಗಳು ತಿಳಿಯಲಿಕ್ಕೆ ಶಕ್ಯವಲ್ಲ ಹೀಗೆ ಬ್ರಹದಾರಣ್ಯದಲ್ಲಿ ಹೇಳಿದೆ

ಮೇಲೆ ವಿವರಿಸಿದ ೧೩ ದ್ವಾರಗಳಿಂದ ಶೋಭಿಸುವಂಥ ಹೃದಯಾಖ್ಯ ಬ್ರಹ್ಮಪಟ್ಟಣ, ಆ ಪಟ್ಟಣದ ಪೂರ್ವಭಾಗಕ್ಕೆ ಮೂರು ದ್ವಾರಗಳು ಕ್ರಮದಿಂದ ಅವೆ ಮೊದಲನೇ ದ್ವಾರದಲ್ಲಿ ರಮಾ (ಶ್ರೀಭೂ) ರೂಪ ಚಿಂತಿಸಬೇಕು. ದ್ವಿತಿಯದ್ವಾರದಲ್ಲಿ ಪ್ರಾಣನಾಮಕಸೂರ್ಯ, ಹಾಗೆ ದ್ಯುನಾಮ

ಕಳಾದಂಥ ಭಾರತೀದೇವಿ, ತೃತೀಯದ್ವಾರದಲ್ಲಿ ಜಯವಿಜಯರಿಬ್ಬರನ್ನು ಚಿಂತಿಸಬೇಕು. ದಕ್ಷಣ ದಿಕ್ಕಿನಲ್ಲಿ ಮೂರು ದ್ವಾರಗಳು. ಪ್ರಥಮದಲ್ಲಿ ರಮಾ (ಶ್ರೀಭೂ) ರೂಪವನ್ನು ಚಿಂತಿಸಬೇಕು. ದ್ವಿತಿಯದ್ವಾರದಲ್ಲಿ ವ್ಯಾನ ನಾಮಕಚಂದ್ರ ಮತ್ತು ದಿಂಜ್ಞನಾಮಕ ಭಾರತೀದೇವಿಯನ್ನು ಚಿಂತಿಸ ಬೇಕು. ತೃತೀಯದ್ವಾರದಲ್ಲಿ ಬಲ-ಪ್ರಬಲರನ್ನು ಚಿಂತಿಸಬೇಕು.

ಪಶ್ಚಿಮದಲ್ಲಿ ಮೂರು ದ್ವಾರಗಳು ಪ್ರಥಮದಲ್ಲಿ ರಮಾದೇವಿ (ಶ್ರೀಭೂ) ದ್ವಿತಿಯದ್ವಾರದಲ್ಲಿ ಅಪಾನನಾಮಕವಸ್ನಿ, ಪೃಥ್ವಿನಾಮಕಳಾದ ಭಾರತೀದೇವಿಯನ್ನು ಚಿಂತಿಸಬೇಕು. ತೃತೀಯದ್ವಾರದಲ್ಲಿ ಕುಮುದ ಕುಮುದಾಕ್ಷ ಇವರಿಬ್ಬರನ್ನೂ ಚಿಂತಿಸಬೇಕು

ಉತ್ತರ ದಿಕ್ಕಿನಲ್ಲಿ ಮೂರುದ್ವಾರಗಳು. ಪ್ರಥಮದ್ವಾರದಲ್ಲಿ ರಮಾ ದೇವಿ (ಶ್ರೀಭೂ) ದ್ವಿತಿಯದ್ವಾರದಲ್ಲಿ ಸಮಾನವಾಯು, ಇಂದ್ರನಾಮಕ, ವಿದ್ಯುನ್ನಾಮಕಳಾದಂಥ ಭಾರತೀದೇವಿಯನ್ನು ಚಿಂತಿಸಬೇಕು. ಮೂರನೇ ದ್ವಾರದಲ್ಲಿ ನಂದ–ಸುನಂದ ಇವರನ್ನು ಚಿಂತಿಸಬೇಕು. ಊರ್ಧ್ವದಲ್ಲಿ ಒಂದುದ್ವಾರ, ಅಲ್ಲಿ ಆಕಾಶನಾಮಕಳಾದಂಥ ರಮಾದೇವಿಯನ್ನು ಚಿಂತಿ-ಸಬೇಕು. ಎಡಪಾರ್ಶ್ವದಲ್ಲಿ, ಉದಾನನಾಮಕ ವಾಯುದೇವರನ್ನು ವಾಂಜ್ಞನಾಮಕಳಾದ ಭಾರತಿಯನ್ನು ಜ್ಞಾನಿಗಳಾದವರು ಈ ಪ್ರಕಾರ ದ್ವಾರದಲ್ಲಿ ಚಿಂತಿಸಬೇಕು.

ಇಂಥ ಪಟ್ಟಣ ಮಧ್ಯದಲ್ಲಿ ಮನೋಹರವಾದಂಥ, ಸುಷುಮ್ನಾನಾಡಿ ಉಪ್ಪರಿಗಿಯೊಳಗ ಪೂರ್ಣನಾದಂಥ ಪರಬ್ರಹ್ಮನಾಮಕ ಮಹಾರಾಜನು ಇದ್ದಾನೆ. ಹೀಗೆ ಛಾಂದೋಗ್ಯದಲ್ಲಿ ಹೇಳಿದೆ.

ಆ ಬ್ರಹ್ಮನು ಪುರದಲ್ಲಿ ಹರಾಖ್ಯವಾದಂಥ ಹೃತ್ಪದ್ಮದಿಂದ ಒಪ್ಪುವಂಥ ಕರ್ಣಿಕಾಲಯದಲ್ಲಿ ಶ್ರೀ ದೇವಿಯನ್ನು ಚಿಂತಿಸಬೇಕು. ಹೀಗೆ ಛಾಂದೋಗ್ಯದಲ್ಲಿ ಹೇಳಿದೆ. ಹೃತ್ಕಮಲ ಅಷ್ಟಪತ್ರದಲ್ಲಿ ಶಕ್ತಿ, ಪ್ರತಿಷ್ಠಾ, ಸವಿತ್, ಸ್ಫೂರ್ತಿ, ಪ್ರಕೃತಿ, ಕಳಾ, ವಿದ್ಯಾ. ಮತಿ, ನಿಯತಿ, ಮಾಯಾ. ಕಾಲ, ಪುರುಷ ಹೀಗೆ ಹನ್ನೆರಡು ರೂಪಗಳು ಚಿಂತಿಸಬೇಕು. ಅದರೊಳಗೆ ಭಗ ವಂತನ ಸ್ತ್ರೀರೂಪಗಳು ಹನ್ನೊಂದು. ಬ್ರಹ್ಮ ವಾಯು ಅಧಿಷ್ಠಾನದಲ್ಲಿ ಇಷ್ಟಂಥ ಪುರುಷರೂಪ ಹನ್ನೆರಡನೇದು. ಈ ಕಮಲದ ಎಂಟುದಳದಲಿ

ಇಹೋ ಪ್ರಕಾರ, ದಿಗ್‌ದಳಗಲ್ಲಿ ಎರಡೆರಡು ರೂಪಗಳು, ವಿದಿಗ್‌ದಳಗಳಲ್ಲಿ ಒಂದೊಂದು, ಈ ಪ್ರಕಾರ ಹನ್ನೆರಡು ರೂಪಗಳು ಅಷ್ಟಪತ್ರಗಳಲ್ಲಿ ತಿಳಿಯು ಬೇಕು. ಹೀಗೆ ತಂತ್ರಸಾರದಲ್ಲಿ ಹೇಳಿದೆ.

ಹೃತ್ಪದ್ಮ ಕರ್ಣಿಕಾಗ್ರದಲ್ಲಿ ಇದ್ದಂಥ ಅಂಗುಷ್ಠ ಪ್ರಮಾಣವುಳ್ಳಂಥ ಅಗ್ರೇಶನಾದಂಥ ಪ್ರಾಜ್ಞನು ಜೀವರುಗಳಿಗೆ ಸುಷುಪ್ತಿಯನ್ನು ಕೊಡೊ ಅಂಥಾತನು. ಸರ್ವಗ ಹೃದಯಾಕಾಶದಲ್ಲಿ ಪ್ರಾದೇಶ ಪರಿಮಿತಉಳ್ಳಂಥ ವ್ಯಾಪ್ತನಾಗಿ ಇದ್ದಂಥಾತನು. ಜೀವರಿಗೆ ಆಧಾರಭೂತನಾದಂಥಾತನು, ಪುರುಷನಾಮಕನುಯೆಂತ ಕರೆಸಿಕೊಳ್ಳುತ್ತಾನೆ

ಕರ್ಣಿಕಾ ಮೂಲದಲ್ಲಿ ಅಂಗುಷ್ಠಾಗ್ರ ಪ್ರಮಾಣಉಳ್ಳಂಥಾ ಮೂಲೇಶನು, ವಿಜ್ಞಾನಾತ್ಮಾಯೆಂದು ಕರಸಿಕೊಳ್ಳುತ್ತಾನೆ. ಹೀಗೆ ಬ್ರಹದಾರಣ್ಯ ದಲ್ಲಿ ಹೇಳಿದ ಹೀಗೆ ಅಗ್ರೇಶ, ಪ್ರಾದೇಶ, ಮೂಲೇಶ ಈ ರೂಪಗಳು ಹೃದಯಾಖ್ಯವಾದಂಥ ವಿಷ್ಣುರೂಪ ಚಿಂತಿಸಬೇಕು

ಮೂಲೇಶನ ಪಾದವನ್ನು ಆಶ್ರೈಸಿ ಮುಖ್ಯ ಪ್ರಾಣನು ಕೃತಾಂಜಲಿ ಪುಟನಾಗಿ ನಿರಂತರದಲ್ಲಿ ಇರುತ್ತಾನೆ. ಆ ಮುಖ್ಯ ಪ್ರಾಣನಲ್ಲಿ ಶುಚಿಷತ್ ಎಂಬೋ ಹೆಸರು ಉಳ್ಳಂಥವನಾಗಿ ವಿಷ್ಣು ಇದ್ದಾನೆ ಆತನಿಗೇ ಪೆ 'ಲಾಳೂಕ' ಎಂತ ಹೆಸರು. 'ಲಾಳೂಕನ' ಉಪಾಸನಾ ಮಾಡೋ ಅಂಥವರು, ಅಪರಾಜಿತಃ ಸೇನಕಃ ಇಂದ್ರವೈಕುಂಠಯೆಂತ ಈ ನಾಮಗಳು ಆತನಿಗೆ ಉಂಟೆಂದು ತಿಳಿಯಬೇಕು. ಹೀಗೆ ಛಾಂದೋಗ್ಯದಲ್ಲಿ ಹೇಳಿದೆ.

ಮುಖ್ಯ ಪ್ರಾಣದೇವರು ಶ್ವಾಸರೂಪವಾದಂಥ ಹಂಸ ಮಂತ್ರವನ್ನು ಜಪಿಸುತ್ತಾರೆ. ಹರಿತುಷ್ಟ್ಯರ್ಥವಾಗಿ ಜೀವನ ಕೈಯಿಂದ ಮಾಡಿಸುತ್ತಾರೆ. ಶ್ವಾಸಗಳಸಂಖ್ಯ ಹಗಲು ರಾತ್ರಿ ಕೂಡಿ, ಇಪ್ಪತ್ತೊಂದುಸಾವಿರದಾ ಆರುನೂರು ಆಗುತ್ತವೆ. ಇಂಥ ಶ್ವಾಸರೂಪವಾದ ಜಪವು ತಿಳಿದು, ಭಕ್ತಿಯಿಂದ ನಿರಂತರದಲಿ ಪರಮಾತ್ಮಗೆ ಸಮರ್ಪಣೆ ಮಾಡಬೇಕು. ಹೀಗೆ ತಂತ್ರಸಾರ ದಲ್ಲಿಯೂ ವರಾಹ ಪುರಾಣದಲ್ಲಿಯೂ ಹೇಳಿದೆ.

ಜೀವನ ಪರಿಮಿತಿ ವಿಚಾರವನ್ನು ಹೇಳಲ್ಪಡುತ್ತದೆ. ಅಶ್ವಬಾಲಾಗ್ರ ಸಹಸ್ರ ವಿಭಾಗ ಮಾಡಿದರೆ ಎಷ್ಟು ಉಳಿಯುತ್ತದೋ ಅಷ್ಟು ಪರಿಮಿತಿ ಉಳ್ಳಂಥಾ ಜೀವನು, ಶಶ್ವನೇಕ ಪ್ರಕಾರವಾಗಿ ಪ್ರಕಾಶಮಾನ ಚಿದಾನಂದಾ

ತ್ಮಕನಾಗಿ ಇರೋ ಅಂಥಾತನು. ಹೀಗೆ ಸೂತ್ರಭಾಷ್ಯದಲ್ಲಿ ಹೇಳಿದೆ. ಮತ್ತು ಪರಮಾಣು ಲಕ್ಷಣ ತೃತೀಯಸ್ಕಂಧದಲ್ಲಿ ಹೇಳಿದೆ.

ಇಂಥ ಜೀವನು ಮುಖ್ಯಪ್ರಾಣದೇವರ ಪಾದ ಸಮೀಪವನ್ನಾಶ್ರೈಸಿ ನಿರಂತರದಲ್ಲಿ ಕರ್ಮ ಮಾಡೋ ಅಂಥವನಾಗಿರುತ್ತಾನೆ. ಹೀಗೆ ವಿಷ್ಣು ರಹಸ್ಯದಲ್ಲಿ ಹೇಳಿದೆ. ಜೀವನ ಸ್ವದೇಹ ಅಂಗಾಂಗಗಳಲ್ಲಿ, ಪರಮಾತ್ಮನ ಅಂಗಾಂಗಗಳು ಅವಿಚ್ಛನ್ನವಾಗಿ, ಶಶ್ವದೇಕ ಪ್ರಕಾರವಾಗಿ ಪರಮಾತ್ಮನ ದಶೆಯಿಂದ ಅತ್ಯಂತ ಭಿನ್ನವಾಗಿರುತ್ತವೆ.

ವಾಸುದೇವನೆ ಪರಮಾತ್ಮನ ಶಿರಸ್ಸು, ಜೀವನ ಶಿರಸ್ಸಿನಲ್ಲಿರುತ್ತದೆ. ನಾರಾಯಣನೇವೆ ಪರಮಾತ್ಮನ ಮಧ್ಯಸ್ಥಾನವು ಅದು ಜೀವನ ಮಧ್ಯದಲ್ಲಿ ಇಹೋ ಅಂಥಾದ್ದು ಪ್ರದ್ಯುಮ್ನನೇವೆ ಪರಮಾತ್ಮನ ದಕ್ಷಣಪಕ್ಷ, ಅದು ಜೀವನ ದಕ್ಷಣಪಕ್ಷದಲ್ಲಿ ಇದ್ದಂಥಾದ್ದು. ಅನಿರುದ್ಧನೇವೆ ಪರಮಾತ್ಮನ ವಾಮ ಪಕ್ಷ, ಅದು ಜೀವನ ವಾಮಪಕ್ಷದಲ್ಲಿ ಇದ್ದಂಥಾದ್ದು. ಸಂಕರುಷಣನೇವೆ ಪರಮಾತ್ಮನ ಪಾದಗಳು, ಅದು ಜೀವನ ಪಾದಗಳಲ್ಲಿ ಇದ್ದಂಥಾದ್ದು. ವಿಷ್ಣು ಪರಮಾತ್ಮನ ವಾಗೇಂದ್ರಿಯವು, ಆ ವಾಗೇಂದ್ರಿಯವು ಜೀವನ ವಾಚಿಯಲ್ಲಿ ಇದ್ದಂಥಾದ್ದು. ನರಸಿಂಹನೇವೆ ಪರಮಾತ್ಮನ ಪ್ರಾಣನು, (ಘ್ರಾಣನು) ಆ ಪ್ರಾಣ (ಘ್ರಾಣ) ನು ಜೀವನ ಪ್ರಾಣ (ಘ್ರಾಣ) ದಲ್ಲಿ ಇದ್ದಂಥಾತನು. ಕಪಿಲನಾಮಕ ಪರಮಾತ್ಮನೇವೆ ಪರಮಾತ್ಮನ ಚಕ್ಷುಸ್ಸುಗಳು, ಜೀವನ ಚಕ್ಷುಸ್ಸುಗಳಲ್ಲಿ ಇಹೋ ಅಂಥಾವು. ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದೆ.

ಅನಿರುದ್ಧಾದಿಗಳಿಂದ ಸೂಕ್ಷ್ಮಸೃಷ್ಟಿಯಲ್ಲಿ ಸೂಕ್ಷ್ಮ ದೇಹಗಳು ನಿರ್ಮಾಣಮಾಡಿದಂಥಾವು, ಕೋಶಗಳು. ನಾಲ್ಕರಲ್ಲಿ ಅನಿರುದ್ಧಾದಿ ನಾಲ್ಕು ರೂಪಗಳು ಇಹೋ ಅಂಥಾವು. ಷೋಡಶಕಳಾತ್ಮಕವಾದಂಥ ಲಿಂಗ ದೇಹಕ್ಕೆ ಇಹೋ ಅಂಥಾವು. ಹೀಗೆ ವಿಷ್ಣುರಹಸ್ಯ ತೃತಿಯಸ್ಕಂದ ಭಾಗ ವತ ತಾತ್ಪರ್ಯದಲ್ಲಿ ಹೇಳಿದೆ. ಅನಾದಿ ಭೂತವಾದಂಥ ಅನಿತ್ಯವಾದ ಲಿಂಗದೇಹದಲ್ಲಿ ಜೀವನು ಇರುತ್ತಾನೆ. ದೇವತೆಗಳಿಗೆ ಅಂಶತಾವ್ಯಾಪ್ತಿ, ನಿರಂಶರಾದ ಮನುಷ್ಯಾದಿಗಳಿಗೆ ದೇಹದಲ್ಲಿ ಪ್ರಕಾಶವ್ಯಾಪ್ತಿ, ಸ್ವರೂಪೇಂದ್ರಿ ಯಗಳಿಂದ ಬಾಹ್ಯೇಂದ್ರಿಗಳು ಸಂಬಂಧವಾಗಿ, ಇರತಿರಲಿಕ್ಕಾಗಿ ವಿಷಯ ಜ್ಞಾನವುಳ್ಳಂಥವನಾಗುತ್ತಾನೆ. ಹೀಗೆ ಪ್ರಕಾಶಸಂಹಿತಾದಲ್ಲಿ ಹೇಳಿದೆ.

ಆದಕಾರಣ ನಾನು ಭಕ್ಷಿಸುತ್ತೇನೆ, ನಾನು ಮಾಡುತ್ತೇನೆ, ಇದು ನನ್ನದು ಇವೇ ಮೊದಲಾದಂಥ ಅಜ್ಞಾನದಿಂದ ಮೋಹಿತನಾದವನಾಗಿರುವಕಾರ ಕರ್ಮದಿಂದ ಪತನನಾಗುತ್ತಾನೆ. ಇಂಥಾ ವಿಷಯದಿಂದ ಜನ್ಯವಾದಂ ನಾನು ನನ್ನದು ಎಂಬೋದು ಬಿಟ್ಟರೆ, ಬಂಧದದಶೆಯಿಂದ ಮುಕ್ತನಾಗ ತ್ತಾನೆ. ಹೀಗೆ ವಿಷ್ಣುರಹಸ್ಯದಲ್ಲಿ ಹೇಳಿದೆ.

## ಜೀವನ ಹೃತ್ಕಮಲದಲ್ಲಿದ್ದ ಭಗವಂತನ ವಿಚಾರ

ಕರಣಿಕಾದಿಂದ ಯುಕ್ತವಾದಂಥ, ಅಷ್ಟಪತ್ರವುಳ್ಳಂಥ, ಶ್ವೇತವರ್ಣ ಉಳ್ಳಂಥಾ ಜೀವನ ಹೃತ್ಕಮಲವನ್ನು ಚಿಂತಿಸಬೇಕು. ಆ ಶ್ವೇತವರ್ಣ ಹೃತ್ಕರ್ಣಿಕೆಯಲ್ಲಿ ಆವಿಷ್ಟನಾದಂಥ ಆತ್ಮನಾಮಕ ನಾರಾಯಣನು. ಹೀಗೆ ದ್ವಿತಿಯಸ್ಕಂದ ತಾತ್ಪರ್ಯದಲ್ಲಿ ಹೇಳಿದೆ.

ಜೀವನ ಹೃನ್ಮಂಡಲದಲ್ಲಿ ಇರುತ್ತಾನೆಂಬ ಕಾರಣ ಹೃದಯನಾಮಕ ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ಛಾಂದೋಗ್ಯದಲ್ಲಿ ಹೇಳಿದೆ. ನರ ಸಿಂಹನಾಮಕ ಭಗವಂತನು ಸರ್ವದಾ ಜೀವನಲ್ಲಿ ಇರುತ್ತಾನೆ, ಎಂಬೋ ಕಾರಣ ಜೀವನಾಮಕಯೆಂದು ಕರಿಸಿಕೊಳ್ಳುತ್ತಾನೆ. ಅನಿರುದ್ಧನು ಜೀವನ ಅಂತಃಶರೀರದಲ್ಲಿ ವ್ಯಾಪ್ತನಾಗುತ್ತಾನೆ. (ಛಾಂದೋಗ್ಯ) ಸರ್ವ ಅಹಂಕಾ ರಗಳಿಗೆ ಭಂಜಕನಾಗಿ ಇದ್ದಾನೆಂಬ ಕಾರಣ ಅಹಂಕಾರಯಂತ ಕರಿಸಿಕೊ ಳ್ಳುತ್ತಾನೆ. ಜೀವನ ಅಂತಃಪ್ರೇರಕನಾದ ವಿಷ್ಣು, ಅಂತರಾತ್ಮ ಎಂದು ಕರೆಸಿಕೊಳ್ಳುತ್ತಾನೆ. ಈತನೇ ಜೀವನಿಂದ ಉಪಾಸ್ಯನು. ಸರ್ವದಾ ಇಷ್ಟವಾದಂಥಾತನು. ಸರ್ವದಾ ಜೀವನಲ್ಲಿ ಪರಮಾತ್ಮ ಸಂಚರಿಸುವಂಥಾ ತನು. (ಐತರೇಯದಲ್ಲಿ ಹೇಳಿದೆ) ಮಚ್ಛಾದಿ ಸಮಸ್ತವಾದಂಥ ವಿಷ್ಣು ವಿನ ಅವತಾರಗಳು ತತ್‌ಶಕ್ತಿಯಿಂದ ಯುಕ್ತವಾಗಿ ಜೀವನಸ್ವರೂಪ ದೇಹದವೊಳಗೆ ಉಪಾಸ್ಯನಾಗಿ ಇರುವಂಥಾವು ಎಂದು ಚಿಂತಿಸಬೇಕು. (ಛಾಂದೊಗ್ಯದಲ್ಲಿ ಹೇಳಿದೆ)

ಹೀಗೆ ಜೀವನಸ್ವರೂಪ ಶ್ವೇತವರ್ಣ ಅಷ್ಟಪತ್ರದಲ್ಲಿ ಜೀವನಸ್ವರೂಪ, ದೇಹದೊಳಗೆ ಉಪಾಸ್ಯಕನಾಗಿ ಇರುವಂಥಾ ರೂಪಗಳನ್ನು ಚಿಂತಿಸಿ, ತರು ವಾಯ ಇದೇ ಪ್ರಕಾರ ಜ್ಞಾನಿಯಾದಂಥವನು, ಸ್ಥೂಲ ಶರೀರ ರಕ್ತವರ್ಣದ ಹೃತ್ಕಮಲದಲ್ಲಿ ಧ್ಯಾನಮಾಡಬೇಕು.

ಸ್ಥೂಲಶರೀರ ರಕ್ತವರ್ಣ ಹೃತ್ಪದ್ಮ ಅಷ್ಟಪತ್ರದಲ್ಲಿ ಒಪ್ಪುವಂಥಾ, ಶತಸ್ತಂಭಮಂಟಪವು. ಮುತ್ತುಗಳಿಂದ ಒಪ್ಪುವಂಥ ನಾನಾ ರತ್ನಗಳಿಂದ ಪ್ರಕಾಶವಾದಂಥ ರಮಾತ್ಮಕವಾದಂಥ ಹೇಮಮಂಟಪವನ್ನು ಚಿಂತಿಸಬೇಕು. ಆ ಮಂಟಪದಲ್ಲಿ, ಹನ್ನೆರಡು ಮೂಲಿಯುಳ್ಳ ರವಿಮಂಡಲ, ಅದರ ಮೇಲೆ ಬಟುವಾದಂಥಾ ಚಂದ್ರಮಂಡಲವು ಆ ಚಂದ್ರಮಂಡಲದಿ ತ್ರಿಕೋಣ ಅಗ್ನಿಮಂಡಲವು ಪ್ರಕಾಶವಾದಂಥಾದ್ದು. ಅಲ್ಲಿ ಶೋಭಿತವಾದಂಥ ಶೇಷಪರಿಯಂಕವು ಆ ಪರಿಯಂಕದಲ್ಲಿ ರಮಾತ್ಮಕವಾದಂಥ ತಲ್ಪವನ್ನು ಚಿಂತಿಸಬೇಕು. ಅಲ್ಲಿ ವಿಚಿತ್ರವಾದಂಥ ರತ್ನಗಳಿಂದ ದಟಿತವಾದಂಥ ಆಸನವು, ಹಾಗೆ ರತ್ನಮಯವಾದಂಥ ತಲಿದಿಂಬವನ್ನು ಚಿಂತಿಸಬೇಕು. ಹೀಗೆ ತಂತ್ರಸಾರದಲ್ಲಿ ಹೇಳಿದೆ.

ಅಂಥಾದರಲ್ಲಿ ಇಷ್ಟ ಭಗವಂತನು, ಪರಮಾತ್ಮಯೆಂತ ಕರಿಸಿಕೊಳ್ಳುತ್ತಾನೆ. ಆತನೇವೇ ಸರ್ವಯೋಗ್ಯ ಜೀವರಿಂದ ಉಪಾಸ್ಯನಾದಂಥ ಬಿಂಬನಾದಂಥ ಸಾಕ್ಷಾತ್ ನಾರಾಯಣನು ಯೆಂತ ತಿಳಿಯಬೇಕು. ಹೀಗೆ ಛಾಂದೋಗ್ಯದಲ್ಲಿ ಹೇಳಿದೆ.

ಅಂಥ ನಾರಾಯಣನು, ಅನಾದಿಯಾದಂಥ ಸೃತಿಸಂಸ್ಥರಾದ ಲೋಕರುಗಳನ್ನು, ಕೃಪೆಯಿಂದ ನೋಡಿ ಇಂಥ ಸಂಸಾರ ಬಂಧನದಿಂದ ಮುಕ್ತರನ್ನ ಮಾಡಬೇಕುಯೆಂತೆಂದು, ತತ್ತದ್ಯೋಗ್ಯಪದವಿಯನ್ನು ಕೊಡೋದರಗೋಸ್ಕರ ಪರಮಸಮರ್ಥನಾದಂಥ ಪರಮಾತ್ಮನು, ಅವರ ಹೃದ್ಗುಹದಲ್ಲಿ ವ್ಯಕ್ತತಯಾ ಪ್ರವೇಶಮಾಡಿ ಅವರ ಯೋಗ್ಯತಾನುಸಾರ ಮಾಡಲ್ಪಟ್ಟಂಥ, ಶುಭಾಶುಭ ಕರ್ಮಗಳನ್ನು ಬಿಡಿಸಿ ಪಂಚಭೂತಾತ್ಮಕವಾದಂಥ, ಬಂಧನದಶೆಯಿಂದ ಮುಕ್ತನಮಾಡಿ ಅಂಥ ಜೀವರುಗಳಿಗೆ ಸ್ವರೂಪಾನಂದವನ್ನು ಕೊಡುತ್ತಾನೆ.

ಶ್ವೇತದ್ವೀಪದಲ್ಲಿ ಇದ್ದಂಥ ಪರಮಾತ್ಮನು ಜೀವನ ಹೃತ್ಕಮಲದಲ್ಲಿ ಇದ್ದಂಥಾತನು. ಶ್ವೇತದ್ವೀಪದಲ್ಲಿ ಇದ್ದಂಥ ಪರಮಾತ್ಮಗೆ, ಜೀವರುಗಳ ಹೃತ್ಕಮಲದಲ್ಲಿ ಇದ್ದಂಥಾ ಪರಮಾತ್ಮಗೆ, ಶರೀರದಲ್ಲಿ ಇದ್ದಂಥ ಪರಮಾತ್ಮಗೆ ಶರೀರದಲ್ಲಿದ್ದ ಸರ್ವನಾಡಿಗತ ಭಗವದ್ರೂಪಗಳಿಗೆ, ಬ್ರಹ್ಮಾಂಡದ ಹೊರಗೆ ಒಳಗೆ ಇದ್ದಂಥ ಸಮಸ್ತರೂಪಗಳಿಗೆ, ಜೀವನ ಹೃತ್ಕಮಲದಲ್ಲಿ ಇದ್ದಂಥಾ

ಆತ್ಮನಾಮಕ ಪರಮಾತ್ಮಗೆ, ಐಕ್ಯಚಿಂತಿಸೋಣವೆ ಉತ್ತಮವಾದಂಥ ಪೂಜೆ ಯೆಂದು ಅನಿಸಿಕೊಳ್ಳುತ್ತದೆ. ಹೀಗೆ ದ್ವಿತಿಯಸ್ಕಂದ ತಾತ್ಪರ್ಯದಲ್ಲಿ ಹೇಳಿದೆ.

ಹೃತ್ಪದ್ಮ ಕರ್ಣಿಕಾವಿಷ್ಟನಾದಂಥ ಬಿಂಬನಾಮಕ ಪರಮಾತ್ಮನಧ್ಯಾನ ಪ್ರಕಾರ-ಉದಯಿಸುವಂಥ ಸೂರ್ಯನ ಪ್ರಕಾಶವುಳ್ಳಂಥ ಸಚ್ಚಿದಾನಂದ ವಿಗ್ರಹನಾದಂಥಾತನು. ಪೀತಾಂಬರ ಧರಿಸಿದಂಥ, ಕ್ರೀಡಾದಿಗುಣವಿಶಿಷ್ಟ ನಾದಂಥ, ಶಂಖ-ಚಕ್ರ ಧರಿಸಿದಂಥ, ಬಂಗಾರದ (ಹಂಸ) ಪಕ್ಷಿವುಳ್ಳಂಥ, ಚಿಕ್ಕ ಚಿಕ್ಕ ಗಂಟಿಗಳುಳ್ಳಂಥ, ಕಾಲಂದಿಗಿವುಳ್ಳಂಥ, ಸುವರ್ಣಾಂಬರದಿಂದ ಒಪ್ಪುವಂಥ, ಉಡದಾರದಿಂದ ಪ್ರಕಾಶಿಸುವಂಥ, ಕಟಿತಟವುಳ್ಳಂಥ, ಬಂಗಾರದ ಕಡಗಗಳು, ಶಿರೋರತ್ನ, ಉಗ್ರಗಳು ಬಾಹುಪುರೀಯುವಗಳಿಂದ ಭೂಷಿತನಾದಂಥಾತನು. ಮುತ್ತು, ರತ್ನ, ಹವಳ ಇವುಗಳಿಂದ ಕೆತ್ತಿದ, ಬಂಗಾರ ಕವಚವುಳ್ಳಂಥಾತನು. ಶ್ರೀವತ್ಸಕೌಸ್ತುಭಗಳಿಂದ ಒಪ್ಪುವಂಥ ಉರಸ್ಥಳವುಳ್ಳಂಥಾ, ನಾನಾ ಭೂಷಣಗಳಿಂದ ಅಲಂಕೃತನಾದಂಥಾತನು. ಮುಗುಳುನಗಿಯಿಂದ ಯುಕ್ತನಾದಂಥಾತನು. ಮುಖಕಮಲವುಳ್ಳಂಥ, ಕಮಲದೋಪಾದಿ ವಿಸ್ತ್ರತವಾದಂಥ ಕಣ್ಣುಗಳುವುಳ್ಳಂಥ, ನೀಲವಾದಂಥ ಉಂಗುರು ಕೂದಲಗಳಿಂದ ಒಪ್ಪುವಂಥ, ಸುವರ್ಣ ಕಟಕವುಳ್ಳಂಥ, ಕರ್ಣಕುಂಡಲುವುಳ್ಳಂಥಾತನು. ಬ್ರಹ್ಮರುದ್ರಾದಿಗಳಿಂದ ಸೇವಿತನಾದಂಥ, ಸ್ವರೂಪಗಣ ಮಧ್ಯದಲ್ಲಿ ಇದ್ದಂಥ ಸರ್ವೋತ್ತಮನಾದಂಥ ಶ್ರೀ ನಾರಾಯಣ ನನ್ನು, ಆಪಾದ ಮೌಳಿಪರಿಯಂತರವಾಗಿ ಧ್ಯಾನಮಾಡಬೇಕು. ಹೀಗೆ ಪ್ರಣವ ಕಲ್ಪವೆಂಬೋ ಗ್ರಂಥದಲ್ಲಿ ಮತ್ತು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಲ್ಪಟ್ಟಿದೆ.

ಧ್ಯಾನ ಎರಡು ಪ್ರಕಾರ. ಖಂಡ ಅಖಂಡ ಭೇದದಿಂದ, ಒಂದು ಅವ ಯವಗಳನ್ನು ಬುದ್ಧಿಯಿಂದ ಧ್ಯಾನಮಾಡೋಣವು ಖಂಡ ಎಂದು ಕರೆಸಿಕೊ ಳ್ಳುತ್ತದೆ. ವಿಶಿಷ್ಟವಾದಂಥ ಪರಮಾತ್ಮನ ಸರ್ವಾಂಗಧ್ಯಾನ ಮಾಡೋಣ ಅಖಂಡವೆಂದು ಕರೆಸಿಕೊಳ್ಳುತ್ತದೆ. ಹೀಗೆ ದ್ವಿತಿಯಸ್ಕಂದದಲ್ಲಿ ಹೇಳಿದೆ.

ನಿರಂತರ ಧ್ಯಾನಯೋಗದಿಂದ ನಿಷ್ಪ್ರತ್ನ ಸಮಾಧಿಯೋಗವುಳ್ಳವನಾಗಿ ಅಥವಾ ಸಮಾಧಿರೂಢನಾಗಲಿ, ಜ್ಞಾನಿಯಾದಂಥಾವನು ಏಕಾಗ್ರ ಮನಸ್ಸಿ

ಜ್ಞವನಾಗಿ, ಆವಾಹನಾದಿ ಷೋಡಶೋಪಚಾರ ಪೂಜಾ, ಪ್ರಾಕೃತವಾದ ಅಥವಾ ಅಪ್ರಾಕೃತವಾದ, ಪೂಜಾಗಳಿಂದ ಚಿದಾನಂದನಾದ, ವಿಷ್ಣುರೂಪಾತ್ಮಕನಾದ ಪರಮಾತ್ಮನು ಹೃತ್ಕಮಲದಲ್ಲಿಪ್ಪ ಹರಿಯ ನಿರ್ದುಷ್ಟವಾದಂಥ ಮನಸ್ಸಿನಿಂದ ಲೌಕಿಕ ಅಲೌಕಿಕವಾದಂಥ ಮಹಾರಾಜೋಪಚಾರಗಳಿಂದ ಭಕ್ತಿಯಿಂದ ಅನನ್ಯಮನಸ್ಕನಾಗದೇ ಪೂಜಿಸಬೇಕು. ಇದರಂತೆ ಬಹಿರದಲ್ಲಾದರು ಅರ್ಚಿಸಬೇಕು. ಪ್ರಣವಕಲ್ಪದಲ್ಲಿ ಹೇಳಿದೆ.

ಹೀಗೆ ಮಾನಸ ಪೂಜಾ ಮುಗಿದ ತರುವಾಯದಲ್ಲಿ ಕಾಯಿಕ ವಾಚಿಕದೀವ ಶಕ್ತ್ಯಾನುಸಾರವಾಗಿ ನಮಸ್ಕರಿಸಬೇಕು. ಹಾಗೆ ವಾಗೇಂದ್ರಿಯಗಳಿಂದ ತನ್ನ ಶಕ್ತ್ಯಾನುಸಾರ ಬುದ್ಧ್ಯಾನುಸಾರವಾಗಿ, ಪರಮಾತ್ಮನ್ನ ಸ್ತೋತ್ರ ಮಾಡಬೇಕು. ಸಂಚಾರವೇ ಪರಮಾತ್ಮಗೆ ಪ್ರದಕ್ಷಣವು, ಶಯನವೇ ಪರಮಾತ್ಮಗೆ ನಮಸ್ಕಾರವು ಮಾತುಗಳಾಡುವದೇ ಪರಮಾತ್ಮನ ಸ್ತೋತ್ರ ರೂಪವಂಥಾದ್ದು. ಇಂಥ ಮಾನಸರೂಪವಾದಂಥ ಪೂಜೆಯು ಬಿಂಬರೂಪನಾದಂಥಾ ಪರಮಾತ್ಮನಲ್ಲಿ ಮುಖ್ಯ ಪ್ರಾಣನದ್ವಾರಾ ಸಮರ್ಪಣೆ ಮಾಡಬೇಕು ಮತ್ತು ಆ ಆ ಸ್ಥಾನಗಳಲ್ಲಿ ಹಾಗು ಆ ಆ ನಾಡಿಗಳಲ್ಲಿದ್ದಂಥಾ ಭಗವದ್ರೂಪಗಳನ್ನು ಉಪಸಂಹಾರ ರೂಪದಿಂದ ಚಿಂತಿಸಬೇಕು.

ಈ ಪ್ರಕಾರ ದಾವ ಪುರುಷನು ಅಪ್ರಮತ್ತನಾಗಿ ನಿರಂತರದಲ್ಲಿ ಪರಮಾತ್ಮನನ್ನು ಮನದಲ್ಲಿಟ್ಟು ಮಾನಸ ಪೂಜೆಯನ್ನು ಮಾಡುತ್ತಾನೋ ಅವನು ಜೀವನ್ಮುಕ್ತ ಯಂತ ಕರೆಸಿಕೊಳ್ಳುತ್ತಾನೆ ಸಂಶಯವಿಲ್ಲವು. ಈ ಪ್ರಮೇಯಗಳು ಅಪರಿಮಿತವಾದಂಥವು. ಅವು ಗ್ರಂಥ ಬಾಹುಳ್ಯ ಭಯದಿಂದ ಹೇಳಲ್ಪಡಲಿಲ್ಲ. ಸರ್ವದಾ ಧ್ಯಾನ ಮಾಡಲಿಕ್ಕೆ ಬಾಹೋ ಕಾರಣ ಸಂಕೋಚವಾಗಿ ಸಂಗ್ರಹ ಮಾಡಿ ಹೇಳಲ್ಪಟ್ಟಿತು. ಜ್ಞಾನದಿಂದ ಆಗಲಿ ಅಜ್ಞಾನದಿಂದ ಆಗಲಿ ನನ್ನಿಂದ ಹೇಳಲ್ಪಟ್ಟಂಥಾದ್ದು. ಯುಕ್ತವೋ ಅಯುಕ್ತವೋ ಸಜ್ಜನರಾದಂಥವರು ಸ್ವೀಕಾರ ಮಾಡಲಿ, ಹೀಗೆ ತಿಳಕೊಂಡು ಸರ್ವದಾ ಧ್ಯಾನಾನುಷ್ಠಾನ ಮಾಡೋಣದರಿಂದ ಮೋಕ್ಷಾದಿ ಚತುರ್ವಿಧ ಪುರುಷಾರ್ಥವಾಗುತ್ತದೆ. ಇತಿ ಮಂಗಳಂ.

ಐಜಿ ವೆಂಕಟ ಕುಮಾರಾರ್ಯ ರಾಮಾರ್ಯರು ಮಾಡಿದರು.

ಇತಿಮಾನಸಪೂಜಾ ಸಮಾಪ್ತ. ಶ್ರೀಮಧ್ವೇಶಾರ್ಪಣಮಸ್ತು ಗಾಲವಪುರಿ,

# ತಿದ್ದುಪಡಿ



| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೯ | ೧೧ | ಆದಕ | ಆದರ |
| ೧೨ | ೧೦ | ಕನಯಲಿ | ಕನ್ನೆಯಲಿ |
| ೩೦ | ೫ | ಒಲಿಮೂರುತಿ | ಬಲಿಮೂರುತಿ |
| ೩೫ | ೨೧ | ಪದು ಸ್ವಲ್ಪ | ಪದುಮ ಸ್ವಲ್ಪ |
| ೩೬ | ೨೬ | ದಾರಕ್ಕೆ | ದ್ವಾರಕ್ಕೆ |
| ೩೭ | ೨೬ | ಸಪುತ್ರಋಷಿ | ಸಪುತಋಷಿ |
| ೩೮ | ೧೧ | ಸತ್ಕಾರಾಚರಿಸಿದರು | ಸತ್ಕರ್ಮಾಚರಿಸಿದರು |
| ೭೪ | ೨೭ | ಬಿದ ಬಿಡು | ಬಿಡುಬಿಡು |
| ೭೪ | ೧೩ | ಗಳೈಶರ್ಯ | ಗಳೈಶ್ವರ್ಯ |
| ೧೦೨ | ೨೬ | ವಿಸಕದೆ | ಮಿಸಕದೆ |
| ೧೦೫ | ೧೮ | ಲಿಲೇ | ಲೀಲೆ |
| ೧೩೭ | ೭ | ಯದ:ಕುಲೋತ್ತಮ | ಯದುಕುಲೋತ್ತಮ |
| ೧೯೭ | ೧೩ | ಶ್ರೀಥರ | ಶ್ರೀಧರ |
| ೨೦೦ | ೨೫ | ಭ್ರಭು | ಭ್ರಮೆ |
| ೨೦೩ | ೧೮ | ಬಿಂಧು | ಬಂಧು |
| ೨೧೦ | ೩ | ದಿಕ್ಕಿನಲಿ | ದ್ವಿದಿಕ್ಕಿನಲಿ |
| ೨೧೧ | ೧೯ | ಪ್ತನ್ನೆ | ಪ್ರಶ್ನೆ |
| ೨೧೪ | ೯ | ಕುಂಡಲೀಪ | ಕುಂಡಲೀಶೇಷ |
| ೨೧೬ | ೧೮ | ಸಸ್ವರ್ದ | ಸ್ವಾರ್ಥ |
| ೨೧೭ | ೧೯ | ತರ್ಕ | ತ್ವರ್ಕ |
| ೨೧೮ | ೧೦ | ಊಚಾರ್ಯು | ಊಜಾರ್ಯು |
| ೨೧೮ | ೨೦ | ಉಧಕೇ | ಉದಕೇ |
| ೨೧೮ | ೨೧ | ಅಥರೇ | ಅಧರೇ |
| ೨೧೯ | ೬ | ಹೃದಯಾಮ | ಹೃದಯಾಯ |
| ೨೧೯ | ೧೧ | ಈಶಾಯ | ಏಕಾತ್ಮನೆ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೧೯ | ೧೧ | ಐರ್ಸಾಯು | ಐರಸಾಯು |
| ೨೨೧ | ೨೫ | ನಾಸಿಕಾ | ನಾಶಿಕಾ |
| ೨೨೨ | ೩ | ಸನರ್ಭ | ಸಗರ್ಭ |
| ೨೨೬ | ೧೪ | ಆಹರ್ನಿಯಲ್ಲಿ | ಅಹರ್ನಿಸಿಯಲ್ಲಿ |
| ೨೩೩ | ೧೯ | ಧಾತ್ವಾ | ಧ್ಯಾತ್ವಾ |
| ೨೩೩ | ೨೫ | ನಾರಾಯಣನಾಮಯಂ | ನಾರಾಯಣಮನಾಮಯಂ |
| ೨೩೪ | ೭ | ತೇಜಸಾನುಪಸಂಪದಾ | ತೇಜಸಾನುಪಮಂ ಸದಾ |
| ೨೩೪ | ೧೧ | ಕಂದರಮ್ | ಕಂಧರಮ್ |
| ೨೩೪ | ೧೬ | ದುಃಖಿಶಯನಂ | ದುಃಷಿಶನುನಂ |
| ೨೩೭ | ೨೬ | ಸರ್ವಕೃರ್ನಾದ | ಸರ್ವಕರ್ತೃನಾದ |
| ೨೩೯ | ೯ | ಏಸು ವರ್ಷ | ಏಸು ಪರ್ವ |
| ೨೩೯ | ೨೭ | ಪನಾರ್ಥವಾಗಿ | ಜ್ಞಾಪನಾರ್ಥವಾಗಿ |
| ೨೪೩ | ೨೧ | ಈನುಸಾರಿ | ಇಚ್ಛಾನುಸಾರಿ |
| ೨೪೩ | ೨೫ | ಚಂದ | ಚಂದ್ರ |
| ೨೪೫ | ೨೦ | ವಾಯುಃನಲ್ಲಿ | ಪಾಯುನಲ್ಲಿ |
| ೨೪೯ | ೬ | ಅಸ್ವ | ಅಶ್ವ |
| ೨೪೯ | ೧೧ | ಒಟು | ಬಟು |
| ೨೫೦ | ೨೬ | ಪೂರ್ದಿ | ಪೂರ್ವಾದಿ |
| ೨೫೧ | ೨೬ | ಮಾನವ | ಮಾನದ |
| ೨೫೯ | ೨೧ | ಹರಾಖ್ಯ | ದಹರಾಖ್ಯ |
| ೨೬೪ | ೨೬ | ನಿಷ್ಪ್ರತ್ನ | ನಿಷ್ಪ್ರಯತ್ನ |
| ೨೬೪ | ೨೭ | ಜ್ಞಾ ಯಾದಂಥಾತ | ಜ್ಞಾನಿಯಾದಂಥಾತ |



ಸುಮಾರು ೧|| ತಿಂಗಳು ಪ್ರೆಸಿನಲ್ಲಿ ಕುಳಿತು ಪ್ರೂಫ ನೋಡಲು ೨೦೦ ಪುಟದಲ್ಲಿ ೧೩ ತಪ್ಪುಗಳಾದವು. ಮುಂದೆ ಎಲ್ಲ ಭಾರ ಪ್ರೆಸಿನವರಿಗೊಪ್ಪಿಸಲು, ೬೫ ಪುಟದಲ್ಲಿ ಬಹು ತಪ್ಪು ಹೊರಟಿರುವವು. ಇದು ದೃಷ್ಟಿ ದೋಷ ಕ್ಷಮಿಸಿ ಈ ಒಪ್ಪೋಲೆಯಂತೆ ತಿದ್ದಿ ಓದುವದಾಗಿ ವಿನಂತಿ.

# ಶ್ರೀ ವಿಜಯದಾಸರ ಗುಟ್ಟಿನ ವಿವರ.

ಹಿಂದೆ ಪ್ರಕಟಿಸಿದಂತೆ ಒಬ್ಬರೂ ಉತ್ತರ ಬರೆಯಿಲಿಲ್ಲ ಸಾಧನ ೨ನೇ ಭಾಗ ಸುಳಾದಿ ೭೫, ಆರಾದರೂ ಹಳಿಯಲಿ, ಎಂಬುವ ಸುಳಾದಿ [ಹರಿಭಕ್ತರ ನಿಂದಾವರ್ಜಕ] ಈ ಸುಳಾದಿ ಅಟ್ಟತಾಳದಲ್ಲಿ ಹರಿ ಭಕ್ತರ ನಿಂದಾವರ್ಜನ ಕೆಲವು ಅಪವಾದಗಳನ್ನು ಹೇಳಿರುತ್ತಾರೆ ಆ ಜೀವರು ಎಂಥವರೆಂದರೆ, ಮುಂದೆ ಆದಿತಾಳದಲ್ಲಿ ಶ್ರೀ ಹನುಮದವತಾರವಾದ ಮಧ್ವ ಮತದಲಿ ಪುಟ್ಟಿ, ಎಲ್ಲ ಕಾಲದಲ್ಲಿ ಉತ್ತಮರ ದ್ರೋಹವನು ಮಾಡುತ್ತ ತಿರುಗುತ್ತಿರುವರು. ಇವರು ಉತ್ತಮರೇನು ? ಅಲ್ಲ. ಕುಹಕ ತಾಮಸಿಗ ಳಾದ ದೈತ್ಯರಿಗೆ ಪೂರ್ವಜನ್ಮದ ಪುಣ್ಯದಿಂದ, ಉತ್ತಮರ ನಿಜ ಗ್ರಹದಲಿ ಪುಟ್ಟಿ ವೈಷ್ಣವರೆಂದೆನಿಸಿ "ರೂಹ ತೋರಿಸಿ" ಮೇಲೆ ವೈಷ್ಣವಾಭಾಸಕ ಚಿನ್ಹ ತೋರುತ್ತ ತಮ್ಮ ನಿಜವಾದ ದುಷ್ಟಸ್ವಭಾವ ತೊಲಗದಲೇ, ಉತ್ತಮರ ದ್ರೋಹಮಾಡುವರು ಈ ದ್ರೋಹಿಗಳಿಗೆ ಎಂದಿಗಾದರೂ ಉತ್ತಮಗತಿ ಯಾಗಬಲ್ಲದೆ ? ಎಂದಿಗೂ ಇಲ್ಲ. ಹೇಗೆಂದರೆ, ಕಬ್ಬಿಣಕ್ಕೆ ಬಂಗಾರ ಕಾಸಿ ಬಂಗಾರ ವರಿಕೊಟ್ಟರೆ, ಬಹುದಿವಸನಿಲ್ಲದೆ ಕೆಲಕಾಲ ಮೇಲೆ ಹಾರು ವದು. ದೂರದಿಂದ ನೋಡುವವರಿಗೆ ಬಂಗಾರದಂತೆ ಮೋಹಪುಟ್ಟಿಸುತ್ತದೆ ಹೊರ್ತಾಗಿ, ಆ ಲೋಹ ಎಂದಿಗಾದರೂ ಬಂಗಾರವಾದೀತೆ ? ಕೆಲ ದಿನದ ಮೇಲೆ ಮೇಲಿನ ಬಂಗಾರ ನಿಲ್ಲದೇ ಹೋಗಿ ಕಬ್ಬಿಣಕ್ಕೆ ಕಬ್ಬಿಣವೇ ಉಳಿ ಯುವದು. ಈ ಲೋಹದಂತೆ ಕುಹಕರ ಸ್ವಭಾವ. ಪೂರ್ವಪುಣ್ಯದಿಂದ ಬ್ರಾಹ್ಮಣ ಜನ್ಮ ಬಂದರೆ ನಿಜಸ್ವಭಾವ ಎಂದಿಗೂ ತೊಲಗಬಲ್ಲದೇ? ಈ ಕಾರಣ ಈ ದ್ರೋಹಿಗಳು ಉತ್ತಮ ಚಿನ್ಹ ಧರಿಸಿ ವೈಷ್ಣವರಾದಾಗ್ಯೂ ಅವರ ನಿಜವಾಗಿ ಅನ್ಯಥಾ ಮತಿಗಳು. ೧. ಮಿಥ್ಯಾಜ್ಞಾನಿಗಳು ೨. ಕಾಮಚಾರಿಗಳು ೩. ನಿಂದಕರು ೪. ಕ್ರೋಧಯುಕ್ತವಾದ ವರು ೫. ಬಚ್ಚಲ ಗುಂಡಿಯ ನೀರಿನಂತೆ ದುರ್ಗಂಧವಾಸನೆ ಅರಸಿಕರು ೬. ವಿಷಯಗಳನ್ನು ತಿಳಿಯದೇ ಮನಬಂದಂತೆ ತೋಡುವರು ೭. ವಂಚ ಕರು ೮ ದಾಸಿಯ ಮಕ್ಕಳೆಂದು ವರ್ಣಿಸಿರುವರು. ಹೇಗೆಂದರೆ,

೧ ತೊಗಲ ತಿತ್ತಿಯಲ್ಲಿ ತರಲಾಗದು ಉದಕ, "ಪತಿತನ ಕಪಾ ಲದೊಳು ಭಾಗೀರಥಿಯ ಜಲವಿರೆ ಪೇಯವೆನಿಪುದೆ" ಎಂಬಂತೆ ಅನ್ಯಥಾ ಮತಿಯುಳ್ಳ ಮಿಥ್ಯಾಜ್ಞಾನಿಗಳಿಂದ, ಉದಕ ದ್ರವರೂಪ ಹರಿಯುವಂಥಾದು.

ಜ್ಞಾನವು ಪ್ರವಾಹತ್ವೇನ ದ್ರವಿಸುವಂಥಾ ಚಲನವಸ್ತು. ಇಂಥ ಜ್ಞಾನವನ್ನು ಮಿಥ್ಯಾಜ್ಞಾನಿಗಳಿಂದ ಸಂಪಾದನೆ ಮಾಡಬಾರದು. "ತೃತೀಯು ಅಪರಾಧ ಅಯೋಗ್ಯರಲ್ಲ್ಯುಪದೇಶ" ವ್ಯಾಸರಾಜರ ವಚನದಂತೆ ಅಯೋಗ್ಯರಲ್ಲಿ ಉಪದೇಶಕೊಳಬಾರದು.

೨ **ಬೊಗಳಲಾಗದು ನಮ್ಮ ನಾಯಿಯಸಂಗಡ,** ನಮ್ಮಮನೆಯ ಮುಂದೆ ಬಿದ್ದಿರುವದು. ಕಾಮಚಾರಿ, [ಬೆದೆಯಾಗಿ] ಸ್ವೇಚ್ಛಾಮನಬಂದಂತೆ ಹೆಣ್ಣುನಾಯಿಯ ಸಂಗಡ ಲಜ್ಜೆ ಇಲ್ಲದೆ ವಿಹಾರ ಮಾಡುವ ನಾಯಿಯು ಇನ್ನೊಂದು ನಾಯಿಯ ಸಂಗಡ ಬಗಳುವಂತೆ "ಶಾಸ್ತ್ರಮರ್ಯಾದಾ ಜ್ಞಾನವಿಲ್ಲದೆ ಮನಬಂದಂತೆ ಪ್ರವರ್ತಿಸುವ ಸ್ವೈರಣಿಯಂತಿರುವ, ಅನ್ಯಥಾ ಮತಿಗಳ ಸಂಗಡ ಅವರಂತೆ ಬೊಗಳಾಡಿದರೆ ತತ್ವಜ್ಞಾನಕ್ಕೆ ದಾರಢ್ಯ, ಸಾರ್ಥಕ್ಯವಾಗುವದೆ ?

೩ **ಹಗೆ ತಾಳಲಾಗದು ನಮ್ಮ ಹಂದಿಯ ಕೂಡ,** ಹಂದಿಯು, ಊರಲ್ಲಿ ಮನೆಯ ಮುಂದಿರುವ ಕಶ್ಮಲಮಲಾದಿಗಳನ್ನು ತಿಂದು ಸ್ವಚ್ಛ ಮಾಡುವದು. ಇಂಥ ಹಂದಿಸಮಾನ ನಿಂದಕನು, ಸಜ್ಜನರ ದೋಷಗಳನ್ನು ತನ್ನ ನಾಲಿಗೆಯಿಂದ ನೆಕ್ಕಿ ದೋಷಗಳನ್ನು ಕಳೆಯುವನು. ಇಂತಹ ನಿಂದಕನ ಸಂಗಡ ವೈರತ್ವ [ಹಗೆ] ತಾಳಲಾಗದು. ಏಕೆಂದರೆ "ನಿಂದಕಾಚೇ ಘರಿ ಅಸಾವೆ ಸೇಜಾರಿ'' ಮತ್ತು ನಿಂದಕರು ಇರಬೇಕು ಸಜ್ಜನರಿಗೆ ಎಂದು ಜ್ಞಾನಿಗಳ ವಚನ.

೪ **ಜಗಳಾಡಲಾಗದು ಊರ ಕತ್ತೆಯಕೂಡ,** ಕತ್ತೆಯಂದರೆ ಕ್ರೋಧವೆಂದು, ಅನೇಕ ಕಡಿಗೆ ಪುರಾಣಾದಿಗಳಲ್ಲಿ ಬಂದದೆ. ಕಾಮಚಾರಿ ಸ್ವೈರಣಿ ಮನಬಂದಂತೆ ವರ್ತಿಪ ಅನ್ಯಥಾಮತಿಗಳ ಕೂಡ ವಾದ ಮಾಡಿದರೇನು ? ತಿಳಿಯದೇ ಅವರ ಕೂಡ ಜಗಳಾಡಿದಂತಾಗುವದು. ಕೊನೆಗೆ ಉತ್ತರ ಸರಿಯಾಗಿ ತಿಳಿಯದ, ಮೂಢಮತಿ ಕತ್ತಿ ''ಶೇಷಂಕೋಪೇನ ಪೂರಯೇತ್" ಸಿಟ್ಟಿಗೆದ್ದು ಮತ್ತು ಹೆಚ್ಚಿಗೆ ಕ್ರೋಧವಶವಾಗಿ ಜಗಳಾಡುವರು. ಇಂಥ ಜಡಮತಿಗಳಾದ ಕ್ರೋಧಯುಕ್ತ ಊರ ಕತ್ತೆಯ ಸಂಗಡ ಜಗಳಾಡಬಾರದು.

೫ ತಗೆಯಲಾಗದು ನಮ್ಮ ಹಿತ್ತಲೊಳಿದ್ದದ್ದು, [ಅ] ಮನೆಯ ಹಿಂಭಾಗದಲ್ಲಿ ಇರುವದೇನು ? ಬಚ್ಚಲಮೋರೆಯ ನೀರು ನಿಲ್ಲುವ ಸ್ಥಳ, ಬಚ್ಚಲಗುಂಡಿ ಅಥವಾ ಕಸಕುಪ್ಪಿ ಹಾಕುವ ತಿಪ್ಪಿ, ಇವೆರಡು ಪ್ರತಿನಿತ್ಯ ತೆಗದು ಸ್ವಚ್ಛಮಾಡಿದರೂ ಮರುದಿನ, ಆ ಕೊಳಚುನೀರು, ಕಸ ಪುನಃ ಹೇಗೆ ಸೇರುತ್ತ ತಗೆಯಲು ಸಾಧ್ಯವಿಲ್ಲವೋ, ಅದರಂತೆ ನಮ್ಮ [ಹಿತ್ತಲ] ಸ್ಥೂಲ ಎಡ ಪೃಷ್ಟಭಾಗದಲ್ಲಿ ದೈತ್ಯಾದಿಗಳು ಸೇರಿ ವಾಸಮಾಡಿ ಕುಹಕ ಬುದ್ಧಿ ಪ್ರೇರಕರನ್ನು ಸರ್ವಥಾ ಹೊರಗೆ ತೆಗೆದು ಬಿಸಾಡಿ ನೂಕಲಾಗದು. ಪ್ರತಿನಿತ್ಯ ಪ್ರತಿಕಾಲ ಪಾಪಪುರುಷ ವಿಸರ್ಜನೆಯಂತೆ, [ಬ] ಮತ್ತು ತಮೋಯೋಗ್ಯರಾದ ಅವರ ಮಿಥ್ಯಾಜ್ಞಾನವು ಸರ್ವಥಾ ವಿಚ್ಛೇದಮಾಡ ಲಾಗದು. ಜೀವನ ತ್ರೈವಿಧ್ಯ ಅವರ ಮತಿಯು ಪ್ರವಾಹತಃ ನಿತ್ಯವಾದು ದರಿಂದ ಸರ್ವಥಾ ಉಚ್ಛೇದಿಸಲಿಕ್ಕೆ ಅಶಕ್ಯ. ಈ ನಿರಾಕರಣ ವ್ಯರ್ಥವೇ ಹೇಗೆಂದರೆ, ಸಾಂಖ್ಯಾದಿ ವಿಧ್ಯಾಸಮಯಗಳನ್ನು ಉಚ್ಛೇದಿಸಲು ಪ್ರಯತ್ನ ವಿಲ್ಲ. ಕೆಲ ಪುರುಷರಿಗೆ, ಆಗಮಸಹಿತವಾದ ಯುಕ್ತಿಗಳಿಂದ ನಿಜವಾದ ತತ್ವಜ್ಞಾನ ಪುಟ್ಟಿಸಿ, ಆ ಕುಶಾಸ್ತ್ರಗಳಿಂದುಂಟಾದ ಅಜ್ಞಾನ, ಸಂಶಯ ವಿಷಯಗಳನ್ನು ತೆಗೆಯಲಿಕ್ಕೆ ಕುಸಮಯಗಳ ದೂರ ಮಾಡಲು ಪ್ರಯ ತ್ನವು. (ಅನುವ್ಯಾಖ್ಯಾನ ಸುಧಾದಲ್ಲಿ ಈ ವಿಷಯ ತಿಳಿದವರು ನೋಡಿ ಆನಂದಪಡಬಹುದು.)

ಆ ಕುಬುದ್ಧಿಗರ ನೈಜವಾದ ಮಿಥ್ಯಾಜ್ಞಾನವು ನೈಜವಾದುದು ತೆಗೆಯಲು ಶಕ್ಯವಿಲ್ಲ. ತಿಪ್ಪಿಯು ಮತ್ತು ಬಚ್ಚಲ ಗುಂಡಿಯ ನೀರು, ಕಶ್ಮಲ ದುರ್ವಾಸನೆಯು ಹೋಗಲು ಆಗಾಗ್ಗೆ ತೆಗೆದು ಶುದ್ಧಪಡಿಸಿ ನಮಗೆ ಆ ದುರ್ವಾಸನೆ ಬಾರದಂತೆ ಮಾಡುವದು ನಮ್ಮ ಧರ್ಮ. ಕಾರಣ ನಮ್ಮ ಹಿತ್ತಲೊಳಿದ್ದ ಇಂಥ ಕಶ್ಮಲವನ್ನು ಸರ್ವಥಾ ತೆಗೆಯಲಾಗದು.

೬ ಅಗಳಲಾಗದು ನಮ್ಮ ಹೆಗ್ಗಣಸಕೊಡ, ಮನೆಯಲ್ಲಿ ಹೆಗ್ಗಣ ಸೇರಿ ರಾತ್ರಿ ಗುರು ಗುರು ಎನ್ನುತ್ತ, ಏನೂ ಕಾರಣವಿಲ್ಲದೆ ನಿರರ್ಥಕವಾಗಿ ತೋಡಿ ತೋಡಿ ಮಣ್ಣೊಟ್ಟಿ ಮನೆ ಹಾಳುಮಾಡಿ ಬಿಟ್ಟರೆ ಆ ಹೆಗ್ಗಣದ ಸಂಗಡ ಮನೆಯ ಎಜಮಾನ ತೋಡಿ ಮತ್ತು ಹೆಚ್ಚಿಗೆ ಮಣ್ಣುಕುಪ್ಪೆ ಏರಿ ಸುವರೇನು ? ಇಲ್ಲ. ಆದರ ನಿವಾರಣಾರ್ಥವಾಗಿ ಬಲೆಯನ್ನಿಟ್ಟು, ಹೆಗ್ಗಣ

ವನ್ನು ಹಿಡಿದು ಪ್ರಾಣದಿಂದೇ ಹೊಡಿಯುವರು. ತೆಗೆದುಕೊಂಡು ದೂರ ಬಿಸಾಟುವರು. ಇದರಂತೆ ಪಂಚಭೇದ ತರತಮುವನ್ನರಿಯದ ಅನ್ಯಥಾ ಮತಿಗಳ ಗಣವು ಸೃಷ್ಟಿಯಲ್ಲಿ ಬಹಳವಾಗಿರುವದು. “ಅಸುರ ಜನರೇ ಬಹಳ ವಶವಲ್ಲ ಕಲಿಯುಬಾಧೆ” ಎಂಬುವ ಆರ್ಯರ ವಚನದಂತೆ ‘ಹೆಗ್ಗಣ, ದೈತ್ಯಾದಿಗಳ ಗಣವು ದೊಡ್ಡದಾಗಿರುವ ಕಾರಣ ಅವರ ಗಣಕ್ಕೆ ‘ಹೆಗ್ಗಣ, ವೆಂದು ಮತ್ತು ಪ್ರಸಿದ್ಧಪ್ರಾಣಿಯಾದ ಹೆಗ್ಗಣದಂತೆ ಅವರ ನೈಜಗುಣವು ಶಾಸ್ತ್ರಮರ್ಮ ವಿಷಯ ಸಂಬಂಧ ಪ್ರಯೋಜನಗಳನ್ನರಿಯದೇ, ದೊಡ್ಡ ದೊಡ್ಡ ಪ್ರಮೇಯಗಳಿಂದ ಜನರನ್ನು ಮೋಸಗೊಳಿಸುತ್ತ, ಗುರು ಗುರು ಗುಟ್ಟುತ್ತ ಸಿಟ್ಟಿನಿಂದ ಪರರನ್ನು ಲೆಕ್ಕಿಸದೆ ಅಜ್ಞಾನವೆಂಬ (ರಾತ್ರಿ) ಅನ್ಯಥಾ ಮತಿಯುಳ್ಳವರಾಗಿ ತಮ್ಮ ಪೂರ್ವಜರ ನಿರಾಧಾರವಾದ ದೊಡ್ಡ ವಾಕ್ಯ ಗಳೆಂಬ ಹೊತ್ತಿಗೆಗಳ ವಿಷಯವನ್ನೇ ಪುನಃಪುನಃ ಅದನ್ನೇ ತೋಡಿ ಅಗ ಳುವರು. ಹೆಗ್ಗಣ ಗುಣವುಳ್ಳವರು. ಇಂಥ ನಮ್ಮ ಮನೆಯಲ್ಲಿ ತೋಡುವ ಹೆಗ್ಗಣನ ಕೂಡ ನಿರರ್ಥಕವಾಗಿ ಶಾಸ್ತ್ರಾದಿ ವಿಷಯಗಳಲ್ಲಿ ವಾದಮಾಡುತ್ತ ಅಗಳಿ ತೋಡಬಾರದು.

೭ **ನಗಲಾಗದು ನಮ್ಮ ಕಾಗೆಯ ಸಂಗಡ,** ಕಾಗೆ ಪಕ್ಷಿಗಳಲ್ಲಿ ನಿಂದ್ಯವಾದ ಪ್ರಾಣಿ, ಅದಕ್ಕೆ ಒಂದೇ ಕಣ್ಣು, ಏಕದೃಷ್ಟಿಯುಳ್ಳದ್ದು. ಮೇಲಾಗಿ ವಂಚಕತನ, ಕಪಟಗುಣವು ಕಾಗೆಯು ಕರ್ರನ ಕಪ್ಪು ತಮೋ ಗುಣ ಮೇಲೆ ತೋರುತ್ತದೆ. ಹೀಗೆ ಅಂತಃ ಬಹಿಃ ಏಕ ದೃಷ್ಟಿಯುಳ್ಳ ಅನ್ಯಥಾಮತಿಗಳು ಮಿಥ್ಯಾಜ್ಞಾನವುಳ್ಳವರು, ಜೀವ ಪರಮಾತ್ಮನೆಂಬ ಏಕ ದೃಷ್ಟಿ, ಒಳಗೊಂದು ಹೊರಗೊಂದು ಮಾತು, ವಂಚಕತ್ವ, ದುಷ್ಟ ಸ್ವಭಾವ ಗುಣ, ಪ್ರಪಂಚವಾದ ಬಹಿರಂಗದಲ್ಲಿ ವ್ಯವಹಾರಿಕ ಭೇದ, ಪರಮಾರ್ಥಿಕ, ಸಕಲಮಿಥ್ಯಾ, ಜೀವ ಈಶನು ಒಂದೆಂಬ ಈ ವಂಚಕತ್ವ ಅಲ್ಲದೆ ಶಾಸ್ತ್ರಾ ದಿಗಳಲ್ಲಿ ವಿಪ್ರಲಂಭತ್ವಾದಿ ಗುಣವು. ಇಂಥ ಕಾಗೆ ಗುಣವುಳ್ಳವರ ಸಂಗಡ ಸತ್ತತ್ವವಾದ ತರತಮ ಪಂಚಭೇದ ಭಾವವುಳ್ಳ ಅನೇಕ ಪ್ರಮೇಯಗಳನ್ನು ಪೇಳುತ್ತ ಆನಂದದಿಂದ ನಗೆ ಕೆಲೆದರೆ ವಿರಸವೆ ಸರಿ. ಕಾರಣ ನಮ್ಮ ಕಾಗೆಯ ಸಂಗಡ ನಗಬಾರದೆಂದು ಪೇಳಿದ್ದಾರೆ.

೮ **ಪೊಗಳಲಾಗದು ನಮ್ಮ ತೊತ್ತಿನ ಮಕ್ಕಳ.** ತೊತ್ತು=ದಾಸಿ, ಸೇವಕಳು. ವೇಶ್ಯಾ ಮಕ್ಕಳನ್ನು ಯಾರಾದರೂ ಹೊಗಳಿ, ಮಾನಮಾಡುವರೇನು ? ಇಲ್ಲ. ದುಷ್ಟದೈತ್ಯಾದಿಗಳ ಉತ್ಪತ್ತಿ ಸಹ ವಿವಶಾ ನಾರಿಯರಲ್ಲಿ ಜನಿಸಿದಂತೆ ಪುರಾಣ ವಾಕ್ಯಗಳುಂಟು.

೧ ಕಲಿ ಸಂಕರನ ಪುಟ್ಟು ಕುಂಬಳಕಾಯಿಯೆ ಗುರುತು |
ಕಲಿಯುಗದೊಳಗೆ ಸೋಹಂ ಎಂದು ತಿರುಗಿ ||

೨ ಚರಣಡಿ ಎಂದೆಂಬೊ ಪುರದೊಳಗೆ ಸಂಕರ ಜನಿಸಿದ |
ಪರಿಯನು ಎಲ್ಲ ಅರಿತದೆ ಕಾಣೊ ಮರೆಪದೆ ಇಲ್ಲ ||

೩ ಚರಣಡಿ ಎಂಬೋ ಗ್ರಾಮದಲಿ ವಿವಶಳಾಗಿ ಚರಿಸುವ ಸ್ತ್ರೀಯಳಲ್ಲಿ ಜನಸಿ ಬಂದು ದುರುಳಸಂಕರನೆಂಬ ನಾಮದಲ್ಲಿ | ಧರೆಯೊಳಗೆ ಮೆರೆದು ||

ಇಂಥ ದಾಸಿ ಮಕ್ಕಳು ಅಜ್ಞಾನ ಸಂತತಿಯುಳ್ಳ ಮಕ್ಕಳನ್ನು ಸ್ತೋತ್ರ ಮಾಡಕೂಡದು.

" ಆದ್ಯ ಅಪರಾಧ ಮಿಥ್ಯಾಜ್ಞಾನ | ದ್ವಿತಿಯ ಅಪರಾಧ ಹರಿಯ ವಿಸ್ಮರಣೆ | ತೃತಿಯ ಅಪರಾಧ ಅಯೋಗ್ಯರಲ್ಲ್ಯುಪದೇಶ | ಚತುರ್ಥ ಅಪರಾಧ ಸೋತ್ತ್ರಮರ ದ್ರೋಹ | ಇನಿತೀಪರಾಧ ಕ್ಷಮಿಸೋ ಸಿರಿಕೃಷ್ಣ ||

ಉಗಾಭೋಗವಲ್ಲದೇ, ಇದೇ ಸುಳಾದಿ ಆದಿತಾಳದಲ್ಲಿ ಆ ಜನರು ಯಾರು ಎಂಬುದನ್ನು ದಾಸರೆ ಚನ್ನಾಗಿ ವಿವರಿಸಿರುವರು. ಆದರ ಮೇಲಿಂದಲೇ ಈ ಅಟ್ಟತಾಳದ ಅರ್ಥವಿವರಣೆಯಾಗುತ್ತದೆ. ಜ್ಞಾನಿಗಳಾದವರು ಇದರಕಿಂತಲೂ ಬೇರೆ ಅರ್ಥವನ್ನು ತಿಳಿಸಿದರೆ ಉಪಕಾರವಾಗುತ್ತದೆ.

ತೀರ್ಥಕ್ಷೇತ್ರಾದಿ ಸುಳಾದಿಯಲ್ಲಿ ಪ್ರಕಟಿಸಿದಂತೆ, " ಭೇದ ಪೇಳುವನೇ ತಮೋಯೋಗ್ಯ ಈ ಪದದ ಅರ್ಥ, ಕೆಲವರು ಪ್ರಶ್ನಾರ್ಥಕವಾಗಿಯೂ ಮತ್ತು ಶ್ರೀ. ವೇ. ಮೋಕಾ ಸುಬ್ಬಣಾಚಾರ್ಯ (ಪಾಪಲಗಿರಿ) ಬಳ್ಳಾರಿ ಇವರು ವಿಶದವಾಗಿ ಬರೆದು ಕಳಿಸಿರುವರು. ಅದನ್ನು ಮುಂದೆ ಯಥಾನುಕೂಲ ಪ್ರಕಟಿಸುವೆವು.

ಸಂಚಾಲಕ ಮಂಡಲ,

**ಹನುಮಂತರಾವ ಗೊರಾಬಾಳ**